ಪ್ರತಿವಾರವೂ ಹೊಸತರಲ್ಲಿ ಹೊಸದು

ಮನೋರಂಜಕ ಲೇಖನಗಳು

ವಿಷಯವೈವಿಧ್ಯ

ಸಚಿತ್ರ ರಾಷ್ಟ್ರೀಯ ಸಾಪ್ತಾಹಿಕ

# ಕರ್ಮವೀರ

ಶ್ರೀ ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿ 'ಮಂದಾರ ಮಂದಾಕಿನಿ'

ಕೆಲ ವೈಶಿಷ್ಟ್ಯಗಳು :

- ಫ್ಯಾಂಟಮನ ಸಾಹಸ
- ಎಳೆಯರಿಗಾಗಿ ಬಾಲಪ್ರಪಂಚ
- ಮುಂಬಯಿ-ಮದ್ರಾಸದ ತಾಜಾ ಸಿನೆಮಾ ಸುದ್ದಿಗಳು
- ವ್ಯಕ್ತಿವಿಶೇಷಗಳು
- ಸಚಿತ್ರ ಲೇಖನಗಳು

ಇಪ್ಪತ್ನಾಲ್ಕು ಪುಟಗಳು ಬೆಲೆ ೨೦ ನಯೆ ಪೈಸೆ

ಪ್ರತಿ ಬುಧವಾರ ನಿಮ್ಮ ಕೈ ಸೇರುವುದು

ಲೋಕಶಿಕ್ಷಣ ಟ್ರಸ್ಟಿನ ಪ್ರಕಟನೆ

# "ಕಸ್ತೂರಿ ಬಳಗ"ದ ಹೊಸ ಯೋಜನೆ

## ೬೦ ಸಂಚಿಕೆಗಳು ಪುಕ್ಕಟೆ!

ಪ್ರತಿತಿಂಗಳ ೧ನೇ ದಿನಾಂಕ
ಪ್ರಕಟವಾಗುವದು



ಲೋಕಶಿಕ್ಷಣ ಟ್ರಸ್ಟಿನ
ಪ್ರಕಾಶನ

* "ಕಸ್ತೂರಿ" ಇಂದು ನಮ್ಮ ಸರ್ವಶ್ರೇಷ್ಠ ಡೈಜೆಸ್ಟ್-ಸಾರಸಾಹಿತ್ಯ.
* ಪ್ರತಿ ತಿಂಗಳೂ ಎಷ್ಟೋ ಓದುಗರು ಪ್ರತಿಗಳ ಬಗ್ಗೆ ನಿರಾಶೆಯಾಗುತ್ತಿದ್ದಾರೆ. ಅದಕ್ಕಾಗಿ ಈ ಯೋಜನೆ. ಇಂದಿನಿಂದಲೇ "ಕಸ್ತೂರಿ"ಯು ಮುಂದಿನ ೬೦ ಸಂಚಿಕೆಗಳನ್ನು ಕಾಯ್ದಿರಿಸಿ. ಅದು ಪ್ರತಿ ತಿಂಗಳೂ ನೀವಿದ್ದಲ್ಲಿ ಕೈಸೇರುವದು.
* ನೀವು ಪ್ರತ್ಯೇಕ ಚಂದಾ ಹಣ ಕಳಿಸಬೇಕಾಗಿಲ್ಲ!
* ಕೇವಲ ರೂಪಾಯಿ ಒಂದುನೂರಾ ಇಪ್ಪತ್ತು (ರೂ. ೧೨೦) ಠೇವು ಇಟ್ಟರೆ ಸಾಕು.
* ಐದು ವರ್ಷಗಳಲ್ಲಿ ೬೦ ಸಂಚಿಕೆಗಳನ್ನೂ ಪಡೆದುದಲ್ಲದೆ ನಿಮ್ಮ ೧೨೦ ರೂ. ಗಳ ಠೇವನ್ನು ಮರಳಿ ಪಡೆಯುವಿರಿ.
* ಈ ಯೋಜನೆ ಜೂನ್ ೩೦, ೧೯೬೧ರ ವರೆಗೆ ಮಾತ್ರ ಊರ್ಜಿತದಲ್ಲಿರುವದು.
* ಕೂಡಲೇ "ಕಸ್ತೂರಿ ಬಳಗ" ಕ್ಕೆ ಸೇರಿರಿ.

ಕೆಳಗಿನ ಫಾರ್ಮನ್ನು ತುಂಬಿ ಹಣ ಸಹಿತ ಇಂದೇ ಕಳಿಸಿರಿ.

**ವ್ಯವಸ್ಥಾಪಕರು "ಕಸ್ತೂರಿ ಬಳಗ," ಪೋ. ಬಾ. ನಂ. ೩೦, ಹುಬ್ಬಳ್ಳಿ.**

ಮಿತ್ರರೆ, ನಿಮ್ಮ "ಕಸ್ತೂರಿ ಬಳಗ"ದ ಯೋಜನೆಯಲ್ಲಿ ಭಾಗ ವಹಿಸಲು ನಾನು ಅಪೇಕ್ಷಿಸುತ್ತೇನೆ. ಅದಕ್ಕಾಗಿ ರೂ. ೧೨೦ ನ್ನು ಇಂದು ಮ. ಆ./ಚೆಕ್ಕು/ಡ್ರಾಫ್ಟ್ ಮೂಲಕ ಕಳಿಸಿದ್ದೇನೆ. ಈ ಯೋಜನೆಯಂತೆ........೧೯೬೧ ರಿಂದ ೫ ವರ್ಷ ಕಾಲ ಕಸ್ತೂರಿ ಸಂಚಿಕೆಗಳನ್ನೂ ಆ ಅವಧಿಯ ಕೊನೆಗೆ ರೂ. ೧೨೦ ನ್ನೂ ಪಡೆಯಲು ಹಕ್ಕು ನನಗಿದೆ. ಕೂಡಲೆ "ಕಸ್ತೂರಿ ಬಳಗದ ಠೇವಿನ ರಶೀದಿ"ಯನ್ನು ಕಳಿಸಿರಿ.

ಹೆಸರು (ಪೂರ್ಣ) ________________

ವಿಳಾಸ ________________

ಪೋಸ್ಟ್ ____________ (ಜಿಲ್ಲಾ) ____________

ಕಸ್ತೂರಿ

# “ಕಸ್ತೂರಿ” ಏಕೆ ಅತ್ಯಂತ ಜನಪ್ರಿಯವಾಗಿದೆ ?

- ಅದು ಇಂದಿನ ಜಗತ್ತನ್ನು ನೋಡುವ ಕಿಡಿಕಿಯಂತಿದೆ.
- ಅದರ ಶೈಲಿ ತಿಳಿ, ಸಶಕ್ತ, ಚಿತ್ರವತ್ತಾಗಿದೆ.
- ಅದು ಎಲ್ಲ ಬಗೆಯ ಒಳ್ಳೆಯ ರುಚಿಗಳಿಗೂ ಮೆಚ್ಚುವ ಲೇಖಗಳಿಂದೊಡಗೂಡಿದೆ.
- ಅದು ವಿವಿಧ ಭಾಷೆಗಳಿಂದ ವಾಚನೀಯವಾದದ್ದನ್ನೆಲ್ಲ ಸಂಗ್ರಹಿಸುತ್ತದೆ.
- ಅದು ಸುಂದರವಾಗಿ, ಅಚ್ಚುಕಟ್ಟಾಗಿ ಮುದ್ರಿತವಾಗುತ್ತದೆ.

**“ಕಸ್ತೂರಿ” ಪ್ರತಿತಿಂಗಳು ೨೦,೦೦೦ ಕ್ಕೂ ಹೆಚ್ಚು ಮನೆಗಳನ್ನು ಸೇರುತ್ತದೆ !**

**ವಾರ್ಷಿಕ ಚಂದಾ : ರೂ. ೮** **ಬಿಡಿ ಸಂಚಿಕೆ : ೭೫ ನ.ಪೈ.**

* ನೀವು “**ಕಸ್ತೂರಿ ಬಳಗ**”ಕ್ಕೆ ಸೇರಿದರೆ ನೀವೇ ಪ್ರತಿಗಳನ್ನು ಪಡೆಯಬಹುದು ಅಥವಾ ೫ ವರ್ಷಗಳಕಾಲ ನಿಮ್ಮ ಮಿತ್ರಬಾಂಧವರಲ್ಲಿ ಯಾರೊಬ್ಬರಿಗೂ ಕಳಿಸುವಂತೆ ಹೇಳಬಹುದು. ಅವಧಿಯ ಅಂತ್ಯದಲ್ಲಿ ಠೇವಿನ ಹಣ ನಿಮಗೇ ದೊರೆಯುವದು.



# ಈಗ

## ನಿಮ್ಮ ಮೆಚ್ಚಿನ ಆರೋಗ್ಯವರ್ಧಕ ಟಾನಿಕ್

# ವಿಟಮಿನ್‌ಗಳಿಂದ

## ಕೂಡಿರುವ ವಾಟರ್‌ಬರೀಸ್ ಕಂಪೌಂಡ್ ಕೇಳಿ ಪಡೆಯಿರಿ

ನೀವೀಗ ಭಾರತದ ಲೋಕಪ್ರಿಯ ಹಾಗೂ ವಿಟಮಿನ್‌ಯುಕ್ತವಾದ ಆರೋಗ್ಯವರ್ಧಕ ಟಾನಿಕನ್ನು ಪಡೆಯಬಲ್ಲಿರಿ. ವಾಟರ್‌ಬರೀಸ್ ಕಂಪೌಂಡಿನ ಈ ಪ್ರಸಿದ್ಧ ಫಾರ್ಮುಲಾದಲ್ಲಿ ಸ್ಫೂರ್ತಿದಾಯಕವಾದ ಹಾಗೂ ಆರೋಗ್ಯವರ್ಧಕವಾದ ಅಧಿಕ ವಿಟಮಿನ್‌ಗಳನ್ನು ಕೂಡಿಸಿ ಅದರ ಪೌಷ್ಟಿಕತೆಯನ್ನು ಮತ್ತಷ್ಟು ಹೆಚ್ಚಿಸಿರುತ್ತದೆ. ವಾಟರ್‌ಬರೀಸ್ ವಿಟಮಿನ್ ಕಂಪೌಂಡ್ ನಿಮಗೆ ಅನೇಕ ರೀತಿಯಲ್ಲಿ ಹಿತಕಾರಿಯಾಗಿದೆ. ಇದು ರಕ್ತವನ್ನು ಅಧಿಕ ಪುಷ್ಟಿಗೊಳಿಸಿ, ಕಳೆದು ಹೋದ ಸ್ಫೂರ್ತಿ ಮತ್ತು ಶಕ್ತಿಯನ್ನು ಪುನಃ ಒದಗಿಸಿ ಕೊಡುತ್ತದೆ. ಅಲ್ಲದೆ ಇದು ಸ್ನಾಯುಗಳಿಗೆ ಹೊಸ ಚೇತನವನ್ನೊದಗಿಸಿ, ನರಗಳು ಅಧಿಕ ಶಕ್ತಿಯುಕ್ತವಾಗುವಂತೆ ಮಾಡುತ್ತದೆ ಮತ್ತು ರೋಗರುಜಿನಗಳನ್ನು ವಿರೋಧಿಸಿ ತಡೆಗಟ್ಟುವ ಶಕ್ತಿಯನ್ನೀಯುತ್ತದೆ. ಕಾಯಿಲೆಯಾದ ನಂತರ ಆರೋಗ್ಯವನ್ನು ಪುನಃ ಶೀಘ್ರವಾಗಿ ಸಂಪಾದಿಸಲು ಇದು ಅತ್ಯಂತ ಸಹಾಯಕಾರಿಯಾಗಿದೆ.




## ವಾಟರ್‌ಬರೀಸ್ ವಿಟಮಿನ್ ಕಂಪೌಂಡ್

ನಿಮ್ಮ ಆಹಾರಕ್ಕೆ ಪೂರಕವಾಗಿದೆ

ಅಲ್ಲದೆ ಕೆಮ್ಮು ಮತ್ತು ನೆಗಡಿಗಳಿಗೆ ಆದರ್ಶವಾದ ಕ್ರಿಯೊಸೊಟ್ ಮತ್ತು ಗುಯೊಕೊಲ್ ಔಷಧಗಳಿಂದ ಕೂಡಿದ ಕೆಂಪು ಲೇಬಲಿನ ವಾಟರ್‌ಬರೀಸ್ ಕಂಪೌಂಡ್ ಕೂಡಾ ದೊರೆಯುತ್ತದೆ.



ಪಿಗ್ಮಿ—೪

## ಪ್ರಕೃತಿ ಹೇಳುತ್ತಿರುವ ಪಾಠ—

'ಹನಿಗೂಡಿ ಹಳ್ಳ'.

ಗಂಭೀರವಾಗಿ ಭೋರ್ಗರೆಯುತ್ತಿರುವ ಸಪ್ತ ಸಾಗರಗಳ ಅಪಾರ ಜಲರಾಶಿಯ ವಿಶಾಲತೆಯನ್ನು ಊಹಿಸಿ,— ಚಿಕ್ಕ ಪುಟ್ಟ ತುಂತುರು ಹನಿಗಳು ಒಂದುಗೂಡಿಯಾದ ವಿಶಾಲ ಜಲಾಶಯವಿದು. ಹಲವು ಹನಿಗಳು ಒಂದಾಗದಿರುತ್ತಿದ್ದರೆ ಈ ಸಾಗರಗಳ ಮಾತೇ ಇರಲಿಲ್ಲ ಅಲ್ಲವೆ? ಅಂತಲೆ ನಮ್ಮ ಹಿರಿಯರ ಮುತ್ತಿನಂತಹ ಮಾತು—

"ಹನಿಗೂಡಿ ಹಳ್ಳ"

ಚಿಲ್ಲರೆ ನಯೆಪೈಸಗಳೂ ಹಾಗೆಯೇ. ೧೫ ನಯೆಪೈಸೆ ಬಹಳ ಚಿಕ್ಕ ಮೊತ್ತ ವಾಗಿರಬಹುದಾದರೂ ಹನಿಗಳೊಂದಾಗಿ ಸಾಗರವಾದಂತೆ ಈ ನಯೆಪೈಸೆಗಳು ಒಟ್ಟು ಗೂಡಿದಾಗ ಒಂದು ಸಂಪತ್ತಾಗಬಲ್ಲದು.

# ಪಿಗ್ಮಿ

ಇದು ನಿಮ್ಮ ಚಿಲ್ಲರೆ ನಯೆಪೈಸೆಗಳನ್ನು ದೊಡ್ಡ ನಿಧಿಯಾಗಿ ಮಾರ್ಪಡಿಸುವುದು.

# ಸಿಂಡಿಕೇಟ್ ಬೇಂಕ್

ದಿ ಕೆನರಾ ಇಂಡಸ್ಟ್ರಿಯಲ್ & ಬೇಕಿಂಗ್ ಸಿಂಡಿಕೇಟ್ ಲಿಮಿಟೆಡ್

# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ ನೆ ದಿನಾಂಕ ಪ್ರಕಟವಾಗುವುದು.

ಮುಖ್ಯ ಸಂಪಾದಕರು :
ರಂಗನಾಥ ದಿವಾಕರ

ಸಹಾಯಕ ಸಂಪಾದಕರು :
ಪಿ. ವಿ. ಆಚಾರ್ಯ

ಪ್ರಕಾಶಕರು :
ಲೋಕಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತಕರ್ನಾಟಕಮುದ್ರಣಾಲಯ
ಹುಬ್ಬಳ್ಳಿ

ಮುಖಚಿತ್ರ :
'ಜಮೀನ ಕೆ ತಾರೆ' ಚಿತ್ರಪಟದ ಒಂದು ದೃಶ್ಯ

ಚಂದಾ ದರ :

| | |
|---|---|
| ವಾರ್ಷಿಕ (ಅಂಚೆಸೇರಿ). | ರೂ.೮.೦೦ |
| ಅರ್ಧ ವರ್ಷ — | ರೂ.೪.೫೦ |
| ಬಿಡಿಸಂಚಿಕೆ — | ರೂ.೦.೭೫ |

Kasturi April 1961


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವುದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಮೂಲ ಲೇಖಕರ ಅನುಮತಿ ಪಡೆದೇ ಲೇಖಗಳನ್ನು ಕಳಿಸಿದರೆ ಅವುಗಳ ಮೇಲೆ ಬೇಗನೆ ನಿರ್ಣಯಕ್ಕೆ ಬರಲು ಸುಲಭವಾಗುವುದು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯಿಟ್ಟುಕೊಳ್ಳುವದೊಳಿತು. ಲೇಖಗಳು ಅಕಸ್ಮಾತ್ತಾಗಿ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ.

ಲೇಖ ಪ್ರಕಟವಾದರೆ "ಕಸ್ತೂರಿ"ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

---

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವದು. ಅದು ಚಂದಾದಾರರಿಗೆ ಆಯಾ ತಿಂಗಳ ೫ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ



# ಕಸ್ತೂರಿ

ಸಂಚಿಕೆ ೮ ಎಪ್ರಿಲ್ ೧೯೬೧ ವರ್ಷ ೫


## ದಿಶಾ ಸಂಕೇತ

ಹುಟ್ಟಿದ ಮನುಷ್ಯ ಏನು ಮಾಡಬೇಕು ಎಂಬುದಿನ್ನೂ ತಿಳಿದಿಲ್ಲ. ಹೆಚ್ಚಿನವರು ತಮ್ಮ ಹಾಗೂ ತಮ್ಮವರ ಹೊಟ್ಟೆಯನ್ನು ಹೇಗಾದರೂ ತುಂಬಿಸಿಕೊಂಡು ಅಷ್ಟರಿಂದಲೇ ತಮ್ಮ ಜೀವನ ಸಾರ್ಥಕವಾಯಿತೆಂದು ತಿಳಿಯುತ್ತಾರೆ. ಕೆಲವರು ಇನ್ನೂ ತುಸು ಮುಂದೆ ಹೋಗಿ ಸಮಾಜದಲ್ಲಿ ಮಹತ್ವದ ಸ್ಥಾನವನ್ನು ಪಡೆಯ ಬಯಸಿ ಸಂಪತ್ತನ್ನು ಗಳಿಸುವ ಯತ್ನವನ್ನು ಮಾಡುತ್ತಾರೆ. ಇನ್ನು ಕೆಲವರು ಪರಲೋಕದಲ್ಲಿ ಸದ್ಗತಿಯನ್ನು ಪಡೆಯುವುದೇ ತಮ್ಮ ಗುರಿಯೆಂದು ತಿಳಿದು ಅದಕ್ಕಾಗಿ ಆದಷ್ಟು ಹೆಚ್ಚು ಪುಣ್ಯ ಸಂಪಾದಿಸಲು ಬಯಸುತ್ತಾರೆ.

ದಾನ, ದಯೆ, ಸತ್ಯ ನುಡಿಯುವುದೇ ಮುಂತಾದವುಗಳು ಪುಣ್ಯ ಕಾರ್ಯಗಳೆಂದು ಜನ ಮನ್ನಿಸುತ್ತಾರೆ. ಆದರೆ ಈ ಗುಣಗಳೇ ಜೀವನದ ಕೊನೆಯ ಧ್ಯೇಯವೆಂದು ತಿಳಿದು ಅದರ ಸಿದ್ಧಿಗಾಗಿ ಯತ್ನಿಸುವ ಜನ ಎಷ್ಟಿದ್ದಾರು ?

ಮುಖ್ಯ ಪ್ರಶ್ನೆಯೆಂದರೆ ಮನಸ್ಸಿನದು. ಕೋಟ್ಯಧೀಶನೊಬ್ಬ ಯಾರನ್ನೊ ಪ್ರಸನ್ನಗೊಳಿಸಲು, ಅಥವಾ ಯಾರನ್ನೋ ಸೋಲಿಸಲು ಇಲ್ಲವೆ ಕೀರ್ತಿ ಯಶಗಳನ್ನು ಸಂಪಾದಿಸಲು ಲಕ್ಷಗಟ್ಟಲೆ ದಾನ ಮಾಡುತ್ತಾನೆ. ಇದರಿಂದ ಆತನಿಗೆ ಪುಣ್ಯಪ್ರಾಪ್ತಿಯಾಗುವುದೇ ? ತನ್ನ ಬಡತನದ ಮೂಲಕ ದಾನ ಮಾಡಲಾರದ ಬಡವನೊಬ್ಬ ತನ್ನ ಅಸಹಾಯ ಸ್ಥಿತಿಗಾಗಿ ವ್ಯಥೆಪಡುತ್ತಿದ್ದರೆ ಆತ ಪುಣ್ಯ ಸಂಪಾದಿಸುತ್ತಿಲ್ಲವೇ ?

ಮತ್ತೆ ಪರಲೋಕವೆಂಬುದು ಈ ಪೃಥ್ವಿಯಲ್ಲಿದೆಯೋ ಅಥವಾ ಹೊರಗೋ ಎಂಬ ಪ್ರಶ್ನೆಯೂ ಇದೆ. ಅದು ಹೊರಗಿದೆ ಎಂದುಕೊಂಡರೂ ಯಾವ ಕಾರ್ಯದಿಂದ ಇಹಲೋಕ

ದಲ್ಲಿ ಒಳ್ಳೆಯದಾಗುವುದೊ ಅದೇ ಕಾರ್ಯದಿಂದ ಅಲ್ಲಿಯೂ ಒಳ್ಳೆಯದಾಗಲೇ ಬೇಕು. ಈ ಲೋಕ ದಲ್ಲಿ ಒಳ್ಳೆಯವರಿಗೆ ಕೆಡಕಾಗುತ್ತದೆ, ಕೆಟ್ಟವರಿಗೆ ಕಲ್ಯಾಣವಾಗುತ್ತದೆ ಎನ್ನುವವರು ಭ್ರಮೆಗೊಳಗಾಗಿರುವರು. ಸಾಮಾನ್ಯವಾಗಿ ಜನ ಯಾರು ಒಳ್ಳೆಯವ, ಯಾರು ಕೆಟ್ಟವ ಎಂಬುದನ್ನು ಅವರ ಸಂಪತ್ತಿನ ಮಾನದಿಂದ ನಿರ್ಧರಿಸುತ್ತಾರೆ.

ಸಂಪತ್ತಿನ ಮಾತು ಬಂದರೆ ಸಂನ್ಯಾಸಿಗಳ ನೆನಪು ಬರುವುದು ಸ್ವಾಭಾವಿಕ. ಸಂಪತ್ತನ್ನು ತ್ಯಜಿಸಿದವನು ಸ್ವರ್ಗವನ್ನು ಪಡೆದೇಕೊಂಡ ಎಂದರೆ ನಾನು ನಂಬುವುದಿಲ್ಲ. ಮನಸ್ಸಿನ ಯಾವ ಮೂಲೆಯಲ್ಲೆ ಆಗಲಿ ಸಂನ್ಯಾಸ ಸ್ವೀಕರಿಸಿದ್ದಕ್ಕಾಗಿ ಪಶ್ಚಾತ್ತಾಪವಿದ್ದರೆ ಸಾಕು, ಎಲ್ಲವೂ ವ್ಯರ್ಥವೇ. ಪಶ್ಚಾತ್ತಾಪವಾಗುತ್ತಿಲ್ಲವೆಂದರೂ ಮನಸ್ಸಿನ ನಾನಾ ವಿಕಾರಗಳಿಂದ ಆತ ಮುಕ್ತಿ ಪಡೆದಿದ್ದಾನೆಂದು ಹೇಗೆ ಹೇಳಬೇಕು?

ಅಂದರೆ ಒಟ್ಟಿನಲ್ಲಿ ಎಲ್ಲವೂ ಮನಸ್ಸನ್ನೆ ಅವಲಂಬಿಸಿದೆಯೆಂದಾಯಿತು. ಯಾರನ್ನೇ ತಿಳಿದುಕೊಳ್ಳಬೇಕಾಗಿದ್ದರೆ, ಯಾರಿಗಾದರೂ ತಿಳಿವಳಿಕೆ ಕೊಡಬೇಕಾಗಿದ್ದರೆ, ಯಾರನ್ನಾದರೂ ಅಳೆಯಬೇಕಾಗಿದ್ದರೆ ಅವೆಲ್ಲವಕ್ಕೆ ಸಾಧನವೆಂದರೆ ಮನಸ್ಸು.

— ಬಂಕಿಮಚಂದ್ರ ಚಟ್ಟೋಪಾಧ್ಯಾಯ

*

ಸ್ವಾರ್ಥಕ್ಕೂ ಅದರದೇ ಆದ ಒಂದು ಮಹತ್ವವಿದೆ. ಹೇಗೆ ಬರ್ಫವು ಮಾಂಸವನ್ನು ಕೊಳೆಯಲು ಬಿಡುವುದಿಲ್ಲವೋ ಹಾಗೆಯೇ ಸ್ವಾರ್ಥವೂ ಮನುಷ್ಯನ ಅಸ್ತಿತ್ವವನ್ನು ಕಾಯ್ದುಕೊಂಡು ಬರುತ್ತದೆ.

—ಚೀನೀ ಸೂತ್ರ

ಒಳ್ಳೇ ಅಭಿರುಚಿ ಯಾರಿಗೂ ಜನ್ಮಸಿದ್ಧವಾಗಿ ಬರುವುದಿಲ್ಲ; ಅದನ್ನು ಸಂಪಾದಿಸಬೇಕಾಗುತ್ತದೆ. ಜನ್ಮಸಿದ್ಧ ಅಭಿರುಚಿಗಳೆಲ್ಲವೂ ಕುರುಚಿಗಳೇ. ಸಂಗೀತದಲ್ಲಿ ಮಕ್ಕಳ ಅಭಿರುಚಿ ಅಸಹ್ಯವಾಗಿರುತ್ತದೆ, ಸಾಹಿತ್ಯದಲ್ಲಂತೂ ವಿಕಾರವಾಗಿರುತ್ತದೆ. ಸುರುಚಿ ಮೆಲ್ಲಮೆಲ್ಲಗೆ, ನಮ್ಮನ್ನು ಮೀರಿದುದನ್ನು ಅರ್ಥ ಮಾಡಿಕೊಳ್ಳುವ ಯತ್ನದಲ್ಲಿ, ನಮಗೆ ಅಗಮ್ಯವಾದುದನ್ನು ಮೆಚ್ಚುವ ಪ್ರಯಾಸದಲ್ಲಿ, ಬೆಳೆದುಬರುತ್ತದೆ. ಒಳ್ಳೆಯದು ಬೇಸರಿಕೆ ತಂದರೂ ಸಹಿಸುವ ಮೂಲಕ ನಾವು ಕಾಲಾಂತರದಲ್ಲಿ ಕೆಟ್ಟದ್ದನ್ನು ಕಂಡು ಬೇಸರಿಕೆ ಪಡಲು ಕಲಿಯಬೇಕಾಗುತ್ತದೆ. ಆಗ ನಾವು ಇನ್ನೂ ಹೆಚ್ಚು ಒಳ್ಳೆಯದನ್ನು ಅಪೇಕ್ಷಿಸಲು ಅಣಿಯಾಗುತ್ತೇವೆ. ಒಂದೇ ಮಾತಿನಲ್ಲಿ ಅದು ಶ್ರದ್ಧೆಯಿಂದ ಹುಟ್ಟುವ ಮಾತು. ಸೌಂದರ್ಯವೆಂಬುದು ರೂಪಾಯಿ ಕೊಟ್ಟು ಕೊಳ್ಳಲು ಬರುವ ಪದಾರ್ಥವಲ್ಲ, ಬಲಾತ್ಕಾರದಿಂದ ಕಸಿದುಕೊಳ್ಳಬಹುದಾದ ವಸ್ತುವಲ್ಲ; ಎಡವಿ ನಡೆಯಲು ಕಲಿಯುವಂತೆ ಅದನ್ನು ಅಭ್ಯಸಿಸಬೇಕಾಗುತ್ತದೆಂಬ ಶ್ರದ್ಧೆ ಬೇಕು.

—ತತ್ವಜ್ಞಾನಿ ಸಿ. ಇ. ಎಂ. ಜೋಡ್

*

ಮಾನವಾ, ನೀನು ನಡೆಯುತ್ತಲೇ ಇರು. ಯಾವಾತ ಕುಳಿತುಕೊಳ್ಳುತ್ತಾನೋ ಅವನ ಭಾಗ್ಯವೂ ಕುಳಿತುಕೊಂಡು ಬಿಡುತ್ತದೆ. ಯಾವನು ಮಲಗುತ್ತಾನೋ ಅವನ ಭಾಗ್ಯವೂ ಮಲಗುತ್ತದೆ. ಆದರೆ ಯಾವಾತನು ನಡೆಯುತ್ತಲೇ ಇರುವನೋ ಅವನ ಭಾಗ್ಯವು ನೆರಳಿನಂತೆ ಅವನ ಹಿಂದೆಯೇ ನಡೆದುಕೊಂಡು ಬರುತ್ತದೆ. ನಿರಂತರ ಚಲನೆಯಿಂದಲೇ ಮನುಷ್ಯನಿಗೆ ಅಮೃತ ಪ್ರಾಪ್ತವಾಗುತ್ತದೆ.

—ಚರವೈತಿ



ಚೀನದ ಗಂಡಾಂತರ ಬಾಗಿಲಿಗೆ ಬಂದಿರುವಾಗ
ಇದಕ್ಕಿಂತ ಉತ್ತಮ ಹಾದಿ ಇನ್ನೊಂದಿಲ್ಲ

# ಭಾರತ-ಪಾಕಿಸ್ತಾನಗಳ ಒಕ್ಕೂಟ

ಲುಯಿ ಫಿಶರ್

> ಶ್ರೀ ಲುಯಿ ಫಿಶರರು ಭಾರತದ ಹಳೇ ಮಿತ್ರರು. ಅಮೇರಿಕನ್ನರಾದ ಅವರು ಅನೇಕ ವರ್ಷ ರಶಿಯದಲ್ಲಿ ಪತ್ರಿಕಾ ಪ್ರತಿನಿಧಿಯಾಗಿದ್ದು ಕಮ್ಯುನಿಜಂಗೆ ರೋಸಿದವರು. ಭಾರತದಲ್ಲಿ ಗಾಂಧೀಜಿ ನಡೆಸುತ್ತಿದ್ದ ಅಹಿಂಸಾತ್ಮಕ ಪ್ರಯೋಗವನ್ನು ತುಂಬ ಆಸ್ಥೆಯಿಂದ ನೋಡಿ ಅವರು ಭಾರತಕ್ಕೆ ಬಂದು ಗಾಂಧೀಜಿಯ ಮರಣ ಕಾಲದಲ್ಲಿ ಇಲ್ಲಿದ್ದರು. ಅವರು ಬರೆದ ಗಾಂಧೀ ಚರಿತ್ರೆ ತುಂಬ ಜನಪ್ರಿಯವಾಗಿದೆ.

"ಚೀನಕ್ಕೆ ಬೇಕಾದುದೇನು?" ನಾನು ಕೇಳಿದೆ. "ಚೀನ ನಮ್ಮನ್ನು ನುಂಗಬಯಸುತ್ತಿದೆ. ಆದರೆ ಒಂದು; ಚೀನದ ಗಂಡಾಂತರವು ಭಾರತದಲ್ಲಿ ಕಾಶ್ಮೀರ ಪ್ರಶ್ನೆ ಅಥವಾ ಪಾಕಿಸ್ತಾನದ ಪ್ರಶ್ನೆ ಯಾವಾಗಲೂ ಪ್ರಚೋದಿಸಿರದಂಥ ದೇಶಪ್ರೇಮವನ್ನು ಉಂಟು ಮಾಡುತ್ತಿದೆ" ಎಂದು ನೆಹರೂ ಮಂತ್ರಿಮಂಡಲದ ಉಚ್ಚ ಮಂತ್ರಿಗಳೊಬ್ಬರು ಉತ್ತರವಿತ್ತರು.

ಏಶಿಯ ಆಫ್ರಿಕಗಳಲ್ಲಿ ರಾಷ್ಟ್ರೀಯತೆ ಇದೆ, ಆದರೆ ರಾಷ್ಟ್ರಗಳಿಲ್ಲ. ರಾಷ್ಟ್ರಗಳು ಇನ್ನೂ ಹುಟ್ಟಬೇಕಾಗಿವೆ. ಹೊಸದಾಗಿ ಸ್ವತಂತ್ರವಾದ ಸರಕಾರಗಳು ದೇಶದ ಸಕಲ ಪಂಗಡಗಳ ಸಹಕಾರ ಸೌಹಾರ್ದವನ್ನು ಕುದುರಿಸಿ ರಾಷ್ಟ್ರೀಯತೆಯನ್ನು ಹುಟ್ಟಿಸುವುದೇ ತಮ್ಮ ಕಾರ್ಯವೆಂದು ತಿಳಿಯುತ್ತಿವೆ. ಡಚ್ ವಿರೋಧಿ ಭಾವನೆ ಅಗತ್ಯವಾದ ರಾಷ್ಟ್ರೀಯ ಭಾವನೆಗೆ ಬೀಜವಾದೀತೆಂದು ತಿಳಿದು ಇಂಡೋನೇಶಿಯದ ಅಧ್ಯಕ್ಷ ಸುಕಾರ್ನೊರು ಡಚ್ಚರ ವಶದಲ್ಲಿರುವ ನ್ಯೂಗಿನಿ ಇಂಡೋನೇಶಿಯದ್ದು ಎಂದು ಸಾಧಿಸುತ್ತಿದ್ದಾರೆ. ಇಸ್ರಾಯಲ್ ಮೇಲಿನ ಅರಬರ ಹಗೆ ಇದೇ ಉದ್ದೇಶದಿಂದ ಕೂಡಿದೆ. ಭಾರತ-ಪಾಕಿಸ್ತಾನಗಳೆರಡೂ ಕಾಶ್ಮೀರದ ಒಡೆತನದ ಪ್ರಶ್ನೆಯನ್ನು ರಾಷ್ಟ್ರೀಯತೆಯ ಸಾಧನೆಗಾಗಿ ಬಳಸುತ್ತಿವೆ. ದಕ್ಷಿಣ ಭಾರತದ ಅನೇಕರು ಉತ್ತರದ ಕಾಶ್ಮೀರದ ಬಗ್ಗೆ ಚಿಂತೆ ಮಾಡುತ್ತಿಲ್ಲ. ಭಾರತದ ಬಡವರಿಗೆ ಅವರ ದಿನನಿತ್ಯದ ಕಷ್ಟನಿಷ್ಠುರಗಳ ಗದ್ದಲದಲ್ಲಿ ಕಾಶ್ಮೀರದ ವಿಚಾರವೇ ಬರುವುದಿಲ್ಲ. ಮತ್ತೆ, ಪಾಕಿಸ್ತಾನ ಭಾರತಕ್ಕಿಂತ ದುರ್ಬಲವೂ ಆಗಿದೆ. ಸೌಮ್ಯಪ್ರಕೃತಿಯ ಹಿಂದುಗಳಿಗೆ ಪಾಕಿಸ್ತಾನದ ಯೋದ್ಧ ಮನೋವೃತ್ತಿಯ ಮುಸಲ್ಮಾನರೆಂದರೆ ರಕ್ತಗತವಾದ ಭಯವಿರುವುದೇನೋ ನಿಜ. ಆದರೆ ಆಧುನಿಕ ಸಮರತಂತ್ರದಲ್ಲಿ ವೈಯಕ್ತಿಕ ಪರಾಕ್ರಮಕ್ಕಿಂತಲೂ ತಾಂತ್ರಿಕ ಸಾಧನಗಳಿಗೇ ಹೆಚ್ಚು ಪ್ರಾಧಾನ್ಯವಿದ್ದು ಭಾರತವು ಈ ವಿಚಾರದಲ್ಲಿ ಪಾಕಿಸ್ತಾನ

'ನ್ಯೂ ಲೀಡರ್' ನಿಂದ

ಕ್ಕಿಂತ ಎಷ್ಟೋ ಮುಂದಿದೆ. ಆದುದರಿಂದ ರಾಷ್ಟ್ರೀಯತೆಗೆ ತಳಹದಿಯಾಗಬಹುದಾದ ದ್ವೇಷಭಯಗಳನ್ನು ಪಾಕಿಸ್ತಾನವಾಗಲಿ, ನೆಹರೂ ಮತ್ತು ಕೃಷ್ಣಮೆನನ್ನರಾಗಲಿ ತಮ್ಮ ಜನರಲ್ಲಿ ಹುಟ್ಟಿಸಬಹುದೇ ಎಂಬುದು ಸಂದೇಹಾಸ್ಪದವಾಗಿದೆ.

ಆದರೆ ಕೆಂಪು ಚೀನವು ಈಗಾಗಲೇ ಭಾರತದ ಪ್ರದೇಶವನ್ನು ಆಕ್ರಮಿಸಿದೆ. ಇನ್ನಿಷ್ಟು ಪ್ರದೇಶವನ್ನು ಆಕ್ರಮಿಸುವ ಸಾಮರ್ಥ್ಯ ಅದಕ್ಕಿದೆ. ಬಹುಕಾಲ ತಡೆದು ಮತ್ತು ಹಿಂಜರಿಯುತ್ತಲೇ ನೆಹರೂರವರು ಚೀನವನ್ನು ಆಕ್ರಮಣಕಾರ ಎಂದು ಸಾರಿದ್ದಾರೆ. ಭಾರತದ ಕಮ್ಯೂನಿಸ್ಟರ ಬೆಂಬಲ ಪಡೆಯಬಹುದಾದ್ದರಿಂದ ಚೀನದ ಗಂಡಾಂತರ ಇನ್ನಿಷ್ಟು ದೊಡ್ಡದಾಗಿದೆ. ಇದರಿಂದ ಭಾರತದಲ್ಲಾದ ರಾಷ್ಟ್ರೀಯ ಪ್ರತಿಕ್ರಿಯೆ ಬಲವತ್ತರವಾಗಿದೆ.

ಭಾರತಕ್ಕೆ ಚೀನ ಸದ್ಯದ ಮಾತ್ರವಲ್ಲ, ದೀರ್ಘಾವಧಿಯ ಸಮಸ್ಯೆಯಾಗಿದೆ. ನೆಹರು ಸರಕಾರ ಚೀನದ ಗಡಿಯ ಸಮೀಪ ಸೈನಿಕ ಠಾಣ್ಯಗಳನ್ನು ಬಲಪಡಿಸಿರುವುದು ಮಾತ್ರವಲ್ಲದೆ ಭಾರತ ಮತ್ತು ಚೀನಗಳ ನಡುವಿರುವ ನೇಪಾಳ, ಸಿಕ್ಕಿಂ ಭೂತಾನಗಳನ್ನು ತಮಗೂ ಚೀನಕ್ಕೂ ನಡುವಿನ ರಕ್ಷಣಾ ಸ್ಥಾನಗಳನ್ನಾಗಿ ಮಾಡಲು ಪ್ರಯತ್ನಿಸುತ್ತಿದೆ.

ಆದರೆ ಚೀನದ ಆಹ್ವಾನವನ್ನೆದುರಿಸಲು ಇನ್ನೂ ಬಲವಾದ ಕ್ರಮಗಳು ಅಗತ್ಯವಾಗಿವೆ. ಚೀನದ ವಿರುದ್ಧ ಪರಸ್ಪರ ಸಂರಕ್ಷಣೆಯನ್ನೊದಗಿಸಿಕೊಳ್ಳಲು ಭಾರತ - ಪಾಕಿಸ್ತಾನಗಳು ತಮ್ಮ ಸೈನ್ಯಗಳನ್ನು ಒಂದುಗೂಡಿಸಿಕೊಳ್ಳಬೇಕಾದ ಪ್ರಮೇಯ ಇಂದು ಒದಗಿ ಬಂದಿದೆ.

ನಕಾಶೆಯನ್ನು ನೋಡಿದರೆ ಚೀನವು ಆಕ್ರಮಿಸಿರುವ ಭಾರತದ ಪ್ರದೇಶವು ಪಾಕಿಸ್ತಾನಕ್ಕೆ ಗಂಡಾಂತರಕಾರಿಯಾಗಬಹುದು ಎಂದು ತಿಳಿಯುವುದು. ಅದರಂತೆ ಚೀನವು ಪಾಕಿಸ್ತಾನದ ಮೇಲೆ ಮಾಡುವ ದಾಳಿ ಭಾರತಕ್ಕೂ ಮುಳುವಾಗಬಹುದು. ಭೂಗೋಲ, ಹಣಕಾಸು ಮತ್ತು ಕುಲ ಪರಂಪರೆಗಳ ದೃಷ್ಟಿಯಿಂದ ಭಾರತ ಪಾಕಿಸ್ತಾನಗಳೆರಡೂ ಒಂದೇ ಆಗಿದ್ದು ಸಂಯುಕ್ತ ಸಂರಕ್ಷಣೆಯ ಪ್ರಶ್ನೆಯ ಮಾತಿಗೆ ಎದುರು ಹೇಳುವಂತಿಲ್ಲ. ಗಾಂಧೀಜಿಯವರ ಆಧ್ಯಾತ್ಮಿಕ ಉತ್ತರಾಧಿಕಾರಿಗಳಾಗಿರುವ ಶ್ರೀ ವಿನೋಬಾ ಭಾವೆಯವರು ಕಾಶ್ಮೀರದಲ್ಲಿ ಭಾಷಣ ಮಾಡುತ್ತ "ಪಾಕಿಸ್ತಾನದ ಅಧ್ಯಕ್ಷ ಜನರಲ್ ಅಯೂಬ ಖಾನರು ಸಂಯುಕ್ತ ಸಂರಕ್ಷಣೆಯ ಏರ್ಪಾಡನ್ನು ಸೂಚಿಸಿರುವುದು ನನಗೆ ಸಂತೋಷವನ್ನುಂಟು ಮಾಡಿದೆ. ಆದರೆ ಉಭಯತರ ವಿದೇಶ ಧೋರಣ ಒಂದೇ ಆಗದೆ ಇದು ಸಾಧ್ಯವಿಲ್ಲ. ಭಾರತವು ತಟಸ್ಥ ನೀತಿಯನ್ನನುಸರಿಸುತ್ತಿದೆ: ಪಾಕಿಸ್ತಾನವು ಬಗದಾದ ಒಪ್ಪಂದದಂಥ ಒಪ್ಪಂದಗಳಲ್ಲಿ ಸೇರ್ಪಡೆಯಾಗಿರುವವರೆಗೆ ಸಂಯುಕ್ತ ಸಂರಕ್ಷಣೆಯ ಮಾತು ಹೇಗೆ ಸಾಧ್ಯವಾದೀತು ?" ಎಂದಿದ್ದಾರೆ.

ಈ ವಾದ ನ್ಯಾಯವಾದದ್ದೇ. ಇಂದು ಸಂರಕ್ಷಣೆಯ ಪ್ರಶ್ನೆ ಬಹುಮಟ್ಟಿಗೆ ವಿದೇಶ ಧೋರಣದ ಅಂಗವೇ ಆಗಿರುವುದರಿಂದ ಸಂಯುಕ್ತ ಸಂರಕ್ಷಣೆಯ ವ್ಯವಸ್ಥೆ ಆಗಬೇಕಾದರೆ ಉಭಯ ಸಾಮಾನ್ಯವಾದ ವಿದೇಶ ಧೋರಣವಿರಬೇಕಾಗುವುದು.

ಸೆಂಟೊ ಮತ್ತು ಸೀಟೊ ಸೈನಿಕ ಕೂಟಗಳ ಸದಸ್ಯನಾಗಿರುವ ಪಾಕಿಸ್ತಾನವು ಕಮ್ಯುನಿಸ್ಟ್ ಕೂಟದ ವಿರುದ್ಧ ಪಾಶ್ಚಿಮಾತ್ಯ ರಾಷ್ಟ್ರಗಳ ಬಣಕ್ಕೆ ಸೇರಿದಂತಾಗಿದೆ. ಇದರಿಂದ ಭಾರತ ಮತ್ತು ಪಾಕಿಸ್ತಾನಗಳ ಸಂಯುಕ್ತ ಸಂರಕ್ಷಣೆಯ ಏರ್ಪಾಡಿಗೆ ವಿದೇಶ ಧೋರಣದ ಆತಂಕವುಂಟಾಗಿದೆ. ಏಶಿಯದ ಶಾಂತಿ ಮತ್ತು ಅಭಿವೃದ್ಧಿ ಹಾಗೂ ಕಮ್ಯುನಿಸ್ಟ್ ಸಾಮ್ರಾಜ್ಯವಾದದ ವಿರುದ್ಧ ಹೋರಾಟದ ದೃಷ್ಟಿಯಿಂದ ಈ ಒಪ್ಪಂದ ಕೂಟಗಳಲ್ಲಿ ಪಾಕಿಸ್ತಾನದ ಸೇರ್ಪಡೆಗೆ ವಾಸ್ತವ ಮಹತ್ವವಿಲ್ಲ. ಕೇವಲ ಅಮೇರಿಕೆಗೆ

ಪಾಕಿಸ್ತಾನದಲ್ಲಿ ಕೆಲ ಸೈನಿಕ ಠಾಣೆಗಳನ್ನು ಒದಗಿಸುವುದಕ್ಕಿಂತ ಹೆಚ್ಚೇನೂ ಪ್ರಯೋಜನ ಅದರಿಂದ ಇಲ್ಲ. ಈ ಒಪ್ಪಂದಗಳಲ್ಲಿ ಪಾಕಿಸ್ತಾನ ಇರುವುದಕ್ಕಿಂತಲೂ ಭಾರತ ಪಾಕಿಸ್ತಾನಗಳ ಸಂಯುಕ್ತ ಸಂರಕ್ಷಣೆ ಏರ್ಪಾಡು ಮಹತ್ವದ್ದಾಗಿದೆ. ಈ ಬಗೆಯ ಏರ್ಪಾಡಿನಿಂದ ಆಫ್ರಿಕಾ—ಏಶಿಯಗಳ ಸ್ವರೂಪವೇ ಬದಲಾದೀತು. ಏಶಿಯದ ಮೇಲಿನ ಆಕ್ರಮಣದ ವಿರುದ್ಧ ಒಂದು ದೊಡ್ಡ ಕೋಟೆಯನ್ನು ಕಟ್ಟಿದಂತಾದೀತು.

ಈ ದೃಷ್ಟಿಯಿಂದಲೂ ಚೀನದ ಆಕ್ರಮಣದಿಂದ ಭಾರತದಲ್ಲಿ ಮೂಡಿರುವ ಭಯದ ದೃಷ್ಟಿಯಿಂದಲೂ ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರ ಪೂರೈಕೆ ಧೋರಣವನ್ನು ತ್ಯಜಿಸುವುದರಿಂದ ಪಾಶ್ಚಿಮಾತ್ಯ ರಾಷ್ಟ್ರಗಳಿಗೂ ಜಗತ್ತಿಗೂ ಲಾಭವಾದೀತು. ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರ ಪೂರೈಕೆಯಾಗುತ್ತಿರುವುದು ಅಮೇರಿಕೆಯು ತಮ್ಮ ಮೇಲೆ ಹಗೆ ಸಾಧಿಸುವುದರ ದ್ಯೋತಕ ಎಂದೇ ಭಾರತೀಯರ ಭಾವನೆಯಿದೆ.

ಕೆಲ ದೇಶಗಳಿಗೆ ಅಮೇರಿಕ ಒದಗಿಸುತ್ತಿರುವ ಶಸ್ತ್ರಾಸ್ತ್ರ ಸಹಾಯವು ನಿಜವಾಗಿ ಆರ್ಥಿಕ ಅನುಕೂಲಕ್ಕಾಗಿ ಕೊಡುವ ಧನ ಸಹಾಯವೇ ಆಗಿದೆ. ವಿದೇಶಗಳಿಗೆ ಶಸ್ತ್ರಾಸ್ತ್ರ ಒದಗಿಸುವಲ್ಲಿ ಕೊಡುಗೈ ದೊರೆಯಾಗುವ ಅಮೇರಿಕನ್ ಕಾಂಗ್ರೆಸ್ಸು ಅಭಿವೃದ್ಧಿಗಾಗಿ ಧನ ಸಹಾಯ ನೀಡಲು ಹಿಂದು ಮುಂದು ನೋಡುತ್ತದೆ. ಈ ಸತ್ಯವನ್ನರಿತ ಕೆಲ ಸರಕಾರಗಳು ಸಂರಕ್ಷಣೆಗಾಗಿ ಎಂದು ಶಸ್ತ್ರಾಸ್ತ್ರಗಳನ್ನೂ ಧನ ಸಹಾಯವನ್ನೂ ಪಡೆಯುತ್ತವೆ. ಇದರಿಂದ ಅವರ ಸೈನ್ಯ ವೆಚ್ಚ ಕಡಿಮೆಯಾಗಿ ಹಾಗೆ ಉಳಿದ ಹಣವನ್ನು ಅವರು ಇತರ ಕಾರ್ಯಗಳಿಗಾಗಿ ಉಪಯೋಗಿಸುತ್ತಾರೆ. ಭಾರತವು ಇದಕ್ಕೆ ವಿರುದ್ಧವಾಗಿ ವರ್ತಿಸುತ್ತದೆ. ಅದು ಅಮೇರಿಕದ ಆರ್ಥಿಕ ಸಹಾಯವನ್ನು ಪಡೆದು ಉಳಿಸಿಕೊಳ್ಳುವ ಹಣದಿಂದ ಶಸ್ತ್ರಾಸ್ತ್ರಗಳನ್ನು ಕೊಳ್ಳುತ್ತದೆ. ಹೀಗೆ ಅಮೇರಿಕೆಯು ಪರಿಣಾಮದಲ್ಲಿ ಭಾರತದ ವಿರುದ್ಧ ಪಾಕಿಸ್ತಾನಕ್ಕೂ ಪಾಕಿಸ್ತಾನದ ವಿರುದ್ಧ ಭಾರತಕ್ಕೂ ಶಸ್ತ್ರಾಸ್ತ್ರ ಪೂರೈಸಿದಂತಾಗುತ್ತದೆ. ಇದೇನೂ ರಾಷ್ಟ್ರಗಳ ಸಂರಕ್ಷಣೆ, ಕಮ್ಯುನಿಜಂದ ವಿರುದ್ಧ ಹೋರಾಟ, ಶಾಂತಿ ರಕ್ಷಣೆಗಳ ಬಗ್ಗೆ ಇಡುವ ಜಾಣತನದ ಹೆಜ್ಜೆಯಲ್ಲ.

ನೆಹರೂರ ನಂತರ ಭಾರತದಲ್ಲಿ ಅತ್ಯಂತ ಪ್ರಭಾವ ಶಾಲಿಗಳಾಗಿರುವ ವಿನೋಬಾ ಭಾವೆಯವರು "ಪಾಕಿಸ್ತಾನವು ಪ್ರತಿವರ್ಷ ಕನಿಷ್ಠ ೧೦೦ ಕೋಟಿ ರೂಪಾಯಿಗಳನ್ನು ಸೈನ್ಯಕ್ಕಾಗಿ ವೆಚ್ಚ ಮಾಡುತ್ತದೆ. ಭಾರತವು ಅದರ ಮೂರು ಪಟ್ಟು ವೆಚ್ಚ ಮಾಡುತ್ತದೆ. ಪ್ರತಿವರ್ಷ ೪೦೦ ಕೋಟಿ ರೂಪಾಯಿಗಳನ್ನು ಸೈನ್ಯಕ್ಕಾಗಿ ವೆಚ ಮಾಡುವುದೆಂದರೆ ಅತಿಯಾಗಿ ಹೋಯಿತು. ನಮ್ಮ ಬಲ ಮತ್ತು ಎಡಗೈ ಎರಡೂ ಶಸ್ತ್ರ ಸಜ್ಜಿತವಾಗಿರುವುದು ನನಗೆ ತುಂಬ ವೇದನೆಯನ್ನುಂಟು ಮಾಡುತ್ತದೆ" ಎನ್ನುತ್ತಾರೆ. ಅವರ ದೃಷ್ಟಿಯಲ್ಲಿ ಭಾರತ ಮತ್ತು ಪಾಕಿಸ್ತಾನಗಳ ಸೈನ್ಯಗಳು ಒಂದೇ ದೇಹದ ಎರಡು ಕೈಗಳಿದ್ದಂತೆ. "ಇಡೀ ಜಗತ್ತೆ ಒಂದಾಗುವ ಸ್ಥಿತಿಯಲ್ಲಿದೆ. ಆದ್ದರಿಂದ ಭಾರತ ಪಾಕಿಸ್ತಾನಗಳು ಒಂದಾಗಲೇ ಬೇಕು. ಇತ್ತೀಚಿನ ಮಹಾಪೂರಗಳಲ್ಲಿ ನಮ್ಮ ನದಿಗಳು ಕೋಟಿಗಟ್ಟಲೆ ರೂಪಾಯಿಗಳ ನಾಟುಗಳನ್ನು ಪಾಕಿಸ್ತಾನಕ್ಕೊಯ್ದವು. ನದಿಗಳು, ಪರ್ವತಗಳು, ಮಹಾಪೂರಗಳು ಎಲ್ಲವೂ "ಒಂದಾಗಿರಿ' ಎಂಬ ಸಂದೇಶವನ್ನು ನಮಗೆ ಈಯುತ್ತಿವೆ," ಎಂದು ಅವರು ಹೇಳಿದ್ದಾರೆ.

ಭಾವೆಯವರೇನೂ ಕಲ್ಪನೆಯ ಮಾತುಗಳನ್ನು ಆಡಲಿಲ್ಲ. ಅವರ ಸೂಚನೆಯಲ್ಲಿ ವ್ಯಾವಹಾರಿಕ ರಾಜಕಾರಣ ಕಾಣಿಸುತ್ತಿದೆ. "ಬಂಧು ರಾಷ್ಟ್ರಗಳಾದ ಪಾಕಿಸ್ತಾನ ಮತ್ತು ಭಾರತಗಳ ಒಕ್ಕೂಟವೊಂದೇ ಕಾಶ್ಮೀರ ಸಮಸ್ಯೆಯನ್ನು ಬಗೆಹರಿಸಬಲ್ಲದು. ಅವೆರಡೂ ಆಡಳಿತ ದೃಷ್ಟಿಯಲ್ಲಿ

ಬೇರೆ ಬೇರೆಯಾಗಿರಲಿ. ಆದರೆ ಸಂರಕ್ಷಣೆ, ವಿದೇಶ ವ್ಯವಹಾರ ಮತ್ತು ಸಾರಿಗೆ ಸಂಪರ್ಕ- ಈ ಮೂರು ವಿಚಾರಗಳು ಉಭಯತರಿಗೂ ಸಾಮಾನ್ಯವಾಗಿರಲಿ," ಇದು ವಿನೋಬಾಜಿಯವರ ಹೇಳಿಕೆ.

ಪಾಕಿಸ್ತಾನದ ಜನ್ಮದಾತರಾದ ಜಿನ್ನಾರವರು ಪಶ್ಚಿಮ ಮತ್ತು ಪೂರ್ವಪಾಕಿಸ್ತಾನಗಳಿಗೆ ಭಾರತದ ನಡುವಿನಿಂದ ನೇರ ಹಾದಿ ಬೇಕೆಂದು ವ್ಯರ್ಥ ಬಡಿದಾಡಿದರು. ಭಾರತ-ಪಾಕಿಸ್ತಾನಗಳ ಒಕ್ಕೂಟವಾದಲ್ಲಿ ಒಂದೇಕೆ, ಇಂಥ ಹಲವು ಮಾರ್ಗಗಳು ತೆರೆಯುವವು.

ಭಾರತ-ಪಾಕಿಸ್ತಾನಗಳೆರಡೂ ತಮ್ಮ ಉತ್ಪನ್ನದಲ್ಲಿ ಹೆಚ್ಚು ಕಡಿಮೆ ಅರ್ಧದಷ್ಟನ್ನು ಸೈನ್ಯಕ್ಕಾಗಿ ವೆಚ್ಚ ಮಾಡುತ್ತಿವೆ. ಚೀನದ ಆಕ್ರಮಣ ಜರುಗುವ ಪೂರ್ವದಲ್ಲಿ ಇವೆರಡೂ ಸೈನ್ಯಗಳು ಒಂದರ ಮೇಲೊಂದು ಕಾವಲಾಗಿದ್ದವು. ಕಾಶ್ಮೀರ ಅಥವಾ ಇನ್ನಾವುದಾದರೊಂದು ನೆವದಿಂದ ಎದುರು ಪಕ್ಷ ಆಕ್ರಮಣ ಮಾಡಬಯಸುತ್ತದೆ ಎಂದು ಎರಡೂ ಹೇಳುತ್ತವೆ. ಇವು ಕೇವಲ ಕಲ್ಪನೆಯ ಭಯಗಳಾಗಿರಬೇಕು ಇಲ್ಲವೆ ಎರಡೂ ದೇಶಗಳು ಹೀಗೆಯೆ ಇರುವವರೆಗೆ ಅಳಿಯಲಾರದ ಭಯಗಳಾಗಿರಬೇಕು.

ದೇಶದ ವಿಭಜನೆಯನ್ನು ಕುರಿತು ಪಶ್ಚಾತ್ತಾಪ ಪಡುವವರು ಭಾವೆಯವರೊಬ್ಬರೇ ಅಲ್ಲ. ಸ್ವತಂತ್ರ ಪಕ್ಷದ ಸಂಸ್ಥಾಪಕರಾದ ಶ್ರೀ. ಸಿ. ರಾಜಗೋಪಾಲಾಚಾರಿಯವರೂ ಹಾಗೆಯೆ ಹೇಳುತ್ತಾರೆ.

ನೆಹರೂ ಸ್ವತಃ ಒಕ್ಕೂಟದ ವಿಚಾರವನ್ನು ಸಮರ್ಥಿಸುತ್ತಾರೆ. "ನ್ಯೂಯಾರ್ಕ ಟೈಮ್ಸ್" ಪತ್ರಿಕೆಯ ೧೯೫೭, ಮಾರ್ಚ್ ೨ ರ ಸಂಚಿಕೆಯಲ್ಲಿ ಅವರು ಸಾಯರಸ್ ಎಲ್. ಸೂಲ್ಜ್‌ಬರ್ಜರರಿಗೆ ಇತ್ತಿದ್ದ ಸಂದೇಶದಲ್ಲಿ "ಸಂಯುಕ್ತ ಸಂರಕ್ಷಣೆಯ ವ್ಯವಸ್ಥೆ ನಮಗಿರಬೇಕು ಎಂದು ಇಪ್ಪತ್ತು ವರ್ಷಗಳ ಹಿಂದೆ ನಾನು ಹೇಳಬಹುದಾಗಿತ್ತು. ಆದರೆ ಈಗ ಆ ಮಾತೆತ್ತಿದರೆ ನಾವು ತಮಗಿಂತಲೂ ದೊಡ್ಡ ರಾಷ್ಟ್ರದವರಾದುದರಿಂದ ಪಾಕಿಸ್ತಾನ ದಿಗಿಲಿನಿಂದಲೇ ಆ ಪ್ರಶ್ನೆಯನ್ನು ನೋಡುತ್ತದೆ. ಆದರೆ ನಿಜವಾಗಿಯೆಂದರೆ ಪರಸ್ಪರರ ಸ್ವಾತಂತ್ರ್ಯವನ್ನು ಕಾಯ್ದುಕೊಂಡು ಈ ರೀತಿ ಒಂದಾಗುವುದೇ ನಮ್ಮ ಮುಂದಿರುವ ಯೋಗ್ಯ ಹಾದಿಯಾಗಿದೆ." ಎಂದಿದ್ದರು.

ಸಂರಕ್ಷಣೆ, ಸಾರಿಗೆ ಮತ್ತು ವಿದೇಶಧೋರಣಗಳನ್ನು ಒಟ್ಟಾಗಿ ಮಾಡಿಕೊಳ್ಳುವುದೇನೂ ತೋರಿಕೆಗೆ ಅನಿಸುವಷ್ಟು ಕಠಿಣವಾಗಿಲ್ಲ. ಮಹಾತ್ಮಾ ಗಾಂಧಿಯವರು ೧೯೪೭ ರಲ್ಲಿ ನನ್ನೊಡನೆ, "ನಿಜ ಜೀವನದಲ್ಲಿ ನಮ್ಮನ್ನು ಎರಡು ರಾಷ್ಟ್ರಗಳಾಗಿ ಪ್ರತ್ಯೇಕಿಸುವುದು ಸಾಧ್ಯವಿಲ್ಲ. ನಾವು ಎರಡು ರಾಷ್ಟ್ರಗಳಲ್ಲ. ತನ್ನ ಕುಲದ ಹಿಂದಿನ ಇತಿಹಾಸವನ್ನು ನೋಡಿದರೆ ಪ್ರತಿಯೊಬ್ಬ ಮುಸಲ್ಮಾನನಿಗೂ ಹಿಂದೂ ಹೆಸರಿದ್ದುದು ಕಂಡುಬಂದೀತು. ಪ್ರತಿಯೊಬ್ಬ ಮುಸಲ್ಮಾನನೂ ಇಸ್ಲಾಂಧರ್ಮವನ್ನು ಸ್ವೀಕರಿಸಿರುವ ಹಿಂದು" ಎಂದಿದ್ದರು. ಧರ್ಮವು ಭೇದವನ್ನು ಕಲ್ಪಿಸುತ್ತದೆ ಎಂಬುದು ನಿಜ. ಹಿಂದು ಮುಸಲ್ಮಾನರು ಪರಸ್ಪರರಲ್ಲಿ ಊಟ ಮಾಡುವುದಿಲ್ಲ. ಲಗ್ನಮಾಡಿಕೊಳ್ಳುವುದಿಲ್ಲ. ಆದರೆ ಬ್ರಿಟಿಶರ ಕಾಲದಲ್ಲಿ ಭಾರತದ ಸೈನ್ಯದಲ್ಲಿದ್ದ ಹಿಂದು, ಶೀಖ ಮತ್ತು ಮುಸಲ್ಮಾನರು ಒಂದೇ ಮೇಜಿನ ಬಳಿ ಕುಳಿತು ಒಂದೇ ಬಗೆಯ ಆಹಾರವನ್ನು ತಿನ್ನುತ್ತಿದ್ದರು. ಅವರು ಒಟ್ಟಾಗಿ ಶಿಕ್ಷಣ ಪಡೆದು ಒಟ್ಟಾಗಿ ಕಾದುತ್ತಿದ್ದರು. ಅಷ್ಟೇಕೆ ವಿಭಜನೆಯ ನಂತರವೂ ಕಾಶ್ಮೀರದಲ್ಲಿ ಸಂಯುಕ್ತ ರಾಷ್ಟ್ರ ಸಂಘವು ಯುದ್ಧ ವಿರಾಮವನ್ನು ಸಾಧಿಸಿದಾಗ ಭಾರತ ಮತ್ತು ಪಾಕಿಸ್ತಾನ ಸೈನ್ಯಗಳ ಮುಖ್ಯಸ್ಥರು ಹಳೆಯ ಸ್ನೇಹಿತರಂತೆ ಭೆಟ್ಟಿಯಾದರು.

ಭಾರತದ ವಿಭಜನೆ ಅನಗತ್ಯವಾದ ಶಸ್ತ್ರಕ್ರಿಯೆಯಾಗಿತ್ತು. ಗಾಂಧೀಜಿ ಮರಣ ಪರ್ಯಂತವೂ ಅದನ್ನು ವಿರೋಧಿಸಿದರು.

ಪಾಕಿಸ್ತಾನ ಹುಟ್ಟುವ ಮೊದಲು ಸದ್ಯದ ರೂಪದಲ್ಲಿ ಪಾಕಿಸ್ತಾನ ಅವ್ಯವಹಾರ್ಯ ಮತ್ತು ಗೆದ್ದಲು ಹಿಡಿದದ್ದು ಎಂದು ಜಿನ್ನಾ ಹೇಳಿದರು. ಆದರೆ ಪಾಕಿಸ್ತಾನ ಬೇಕಾದರೆ ಪಂಜಾಬ ಬಂಗಾಲಗಳನ್ನು ತುಂಡು ಮಾಡದೆ ಸಾಧ್ಯವಿಲ್ಲ ಎಂದಾಗ ಜಿನ್ನಾ ಒಪ್ಪಿದರು. ಪರಿಣಾಮವಾಗಿ ಸಹಸ್ರಾರು ಜನರ ರಕ್ತ ಹರಿಯಿತು. ಈ ಗಾಯ ಹಸಿಯಾಗಿಯೆ ಇದೆ.

ಭಾರತ-ಪಾಕಿಸ್ತಾನಗಳಲ್ಲಿಯ ಅರಹೊಟ್ಟೆ ತಿಂದು ಬದಕುವ ಲಕ್ಷಗಟ್ಟಲೆ ಜನ ನಿತ್ಯವೂ ಈ ವಿಭಜನೆಯ ಪ್ರಾಯಶ್ಚಿತ್ತವನ್ನು ಅನುಭವಿಸುತ್ತಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ಈಗ ಪಾಕಿಸ್ತಾನ ದಲ್ಲಿರುವ ಪ್ರದೇಶಗಳು ಸಣಬನ್ನು ಬೆಳೆಯುತ್ತಿದ್ದವು. ಭಾರತದ ಪ್ರದೇಶದಲ್ಲಿ ಈಗ ಇರುವ ಗಿರಣಿಗಳು ಅವುಗಳಿಂದ ಸರಕುಗಳನ್ನು ತಯಾರಿಸುತ್ತಿದ್ದವು. ಮುಂದೆ ವಿಭಜನೆಯ ನಂತರ ಭಾರತ ಸಣಬು ಬೆಳೆಯತೊಡಗಿತು. ಪಾಕಿಸ್ತಾನ ಗಿರಣಿಗಳನ್ನು ಕಟ್ಟಿತು. ಹೀಗೆ ಮಾಡಿಕೊಳ್ಳುವ ಆರ್ಥಿಕ ಬಲ ಇಬ್ಬರಿಗೂ ಇಲ್ಲ. ಭಾರತದಲ್ಲಿ ಅಗ್ಗವಾಗಿ ಸಿಗುವ ಕಚ್ಚಾ ಸಾಮಗ್ರಿಗಾಗಿ ಪಾಕಿಸ್ತಾನ ದೂರ ದೂರದ ದೇಶಗಳಿಗೆ ಹೋಗುತ್ತದೆ. ಭಾರತದಲ್ಲಿ ಹುಟ್ಟುವ ನದಿಗಳ ನೀರನ್ನು ಪಾಕಿಸ್ತಾನ ಅವಲಂಬಿಸಿದೆ.

ಅವಿಭಕ್ತ ಭಾರತದ ಜೀವನ ಮಟ್ಟವನ್ನು ಏರಿಸುವುದೇ ಅತ್ಯಂತ ಪ್ರಯಾಸದ ಮಾತಾಗಿದ್ದಾಗ ಹೊಸ ಹೊಸ ಅನಾನುಕೂಲತೆಗಳನ್ನು ಹುಟ್ಟಿಸಿಕೊಂಡಿರುವ ಈ ವಿಭಕ್ತ ರಾಷ್ಟ್ರಗಳ ಜೀವನ ಮಟ್ಟವನ್ನೇರಿಸುವುದು ಇನ್ನೆಷ್ಟು ಕಠಿನವಾಗಿರಬೇಡ!

ಭಾರತ-ಪಾಕಿಸ್ತಾನಗಳೆರಡೂ ಮುಖ್ಯತಃ ಒಕ್ಕಲುತನದ ದೇಶಗಳಾಗಿದ್ದರೂ ಅಲ್ಲಿ ಆಹಾರಾಭಾವವಿದೆ. ಭಾರತ ಆಹಾರ ಉತ್ಪಾದನೆಯನ್ನು ಬಹಳ ಮಟ್ಟಿಗೆ ಹೆಚ್ಚಿಸಿಕೊಂಡಿದ್ದರೂ ಜನ ಸಂಖ್ಯೆಯೂ ಹಾಗೆಯೆ ಏರುತ್ತಿರುವುದರಿಂದ ಸ್ಥಿತಿ ಯಥಾಸ್ಥಿತಿ ಆಗಿದೆ. ಅಮೇರಿಕದಲ್ಲಿ ಭಾರತದ ರಾಯಭಾರಿಗಳಾಗಿರುವ ಶ್ರೀ. ಛಗಲಾರು ಭಾರತದಲ್ಲಿ ಜನ ಸಂಖ್ಯೆಯ ನಿಯಂತ್ರಣವಾಗುವುದೇ ಮುಖ್ಯ ಸಮಸ್ಯೆ ಎಂದಿದ್ದಾರೆ. ಪಾಕಿಸ್ತಾನದ ಅಧ್ಯಕ್ಷ ಅಯೂಬಖಾನರು ಏರುತ್ತಿರುವ ಪಾಕಿಸ್ತಾನದ ಜನಸಂಖ್ಯೆ ದೊಡ್ಡ ಸಮಸ್ಯೆಯಾಗಿದೆ ಎಂದಿದ್ದಾರೆ.

ಭಾರತ-ಪಾಕಿಸ್ತಾನಗಳ ಒಕ್ಕೂಟ ಇನ್ನಿಷ್ಟು ತಲೆನೋವಿಗೆ ಕಾರಣವಾದೀತು ಎನ್ನಬಹುದು. ಈ ತಲೆನೋವೆನ್ನುವುದು ತೋರಿಕೆಯದು ಅಷ್ಟೆ. ಒಕ್ಕೂಟದ ನಂತರವೂ ಬೇರೆ ಬೇರೆ ರಾಷ್ಟ್ರಗಳಾಗಿ ಸ್ವತಂತ್ರ ಆಡಳಿತ ನಡೆಸುವ ಭಾರತ-ಪಾಕಿಸ್ತಾನಗಳ ಎದುರು ಪರ್ವತಪ್ರಾಯವಾದ ಸಮಸ್ಯೆಗಳುಳಿದೇ ಉಳಿಯುವವು. ಆದರೆ ಎರಡು ಸೈನ್ಯಗಳು, ಎರಡು ಬಗೆಯ ವಿದೇಶ ಧೋರಣ, ನಿರರ್ಥಕ ಹಗೆಯಿಂದ ಪರಸ್ಪರ ಹೋರಾಡುವ ಆರ್ಥಿಕ ವ್ಯವಸ್ಥೆ, ಪ್ರತ್ಯೇಕ ಪ್ರತ್ಯೇಕವಾದ ಸಾರಿಗೆ ಸಂಪರ್ಕ ವ್ಯವಸ್ಥೆ ಇವುಗಳಿಗಾಗಿ ಆಗುವ ಅನಾವಶ್ಯಕ ವೆಚ್ಚ ಇಲ್ಲದಂತಾಗುವುದು. ಈಗ ಹತ್ತು ಹನ್ನೆರಡು ವರ್ಷಗಳಿಂದಲೂ ತಲೆತಿನ್ನುವ ಕಾಶ್ಮೀರ ಸಮಸ್ಯೆಯೂ ಇಲ್ಲದಂತಾದೀತು. ಕಾಶ್ಮೀರವು ಈ ಒಕ್ಕೂಟದ ಮೂರನೆಯ ಸದಸ್ಯನಾಗಿರುವಂತಾದೀತು. ಸ್ವಾಯತ್ತ ಕಾಶ್ಮೀರವು ಬಡಿದಾಡುವ ಭಾರತ ಪಾಕಿಸ್ತಾನಗಳಿಗೆ ರಣರಂಗವಾಗುವಂತಿದ್ದರೂ ಅವೆರಡೂ ಪರಸ್ಪರ ಹಿತ ದೃಷ್ಟಿಯಿಂದ ಒಂದಾದಾಗ ಕಾಶ್ಮೀರವು ಎರಡನ್ನೂ ಒಂದುಗೂಡಿಸುವ ಸೇತುವೆಯಾದೀತು.

ಮತ್ತು ಈ ಬಗೆಯ ಒಕ್ಕೂಟ ೧೯೪೭ ರಲ್ಲಿ ಭಾರತವನ್ನು ವಿಭಜಿಸಿದ ಧಾರ್ಮಿಕ ರಾಜಕಾರಣವನ್ನು ತಿದ್ದೀತು. ಎರಡೂ ಕಡೆಗಳ ಅನೇಕರಿಗೆ ವಿಭಜನೆಯಿಂದಾಗಿ ಆಗುವುದೆಂದು ತಿಳಿದಿದ್ದ ಲಾಭಗಳು ಮೃಗಜಲವಾಗಿದ್ದವು ಎಂದು ಈಗ ಗೊತ್ತಾಗಿದೆ.

*

# ಬಾಯಿಯ ದುರ್ಗಂಧವನ್ನು ಕಾಲ್ಗೇಟಿನಿಂದ ತೊಲಗಿಸಿರಿ

ಅದರೊಂದಿಗೆ ದಿನವಿಡೀ

# ದಂತಕ್ಷಯವನ್ನು ಇದಿರಿಸಿರಿ !

ಏಕೆಂದರೆ : ಕಾಲ್ಗೇಟ್ ಡೆಂಟಲ್ ಕ್ರೀಮ್‌ನೊಂದಿಗೆ ಒಮ್ಮೆ ಹಲ್ಲುಜ್ಜುವುದರಿಂದ ಬಾಯಿಯಲ್ಲಿ ದುರ್ಗಂಧವನ್ನುಂಟು ಮಾಡುವ ಹಾಗೂ ಹಲ್ಲುಗಳನ್ನು ಕ್ಷಯಿಸುವ ಶೇಕಡ 85ರಷ್ಟು ಕ್ರಿಮಿಗಳು ನಾಶವಾಗುತ್ತವೆ.

ಊಟವಾದೊಡನೆ ಕಾಲ್ಗೇಟನಿಂದ ಹಲ್ಲುಜ್ಜುವುದರಿಂದ ದಂತ-ಮಂಜನಗಳ ಇತಿಹಾಸದಲ್ಲೇ ಹಿಂದೆಂದೂ ಆಗದಷ್ಟು ಅಧಿಕ ಜನರ ದಂತಕ್ಷಯವನ್ನು ಅಧಿಕ ಪ್ರಮಾಣದಲ್ಲಿ ತಡೆಗಟ್ಟಲು ಸಾಧ್ಯವಾಗುತ್ತದೆ. ಇದಲ್ಲದೆ,ಕಾಲ್ಗೇಟನಿಂದ 10ರಲ್ಲಿ 7 ಸಂದರ್ಭಗಳಲ್ಲಿ ಬಾಯಿಯ ದುರ್ಗಂಧವು ಕೂಡಲೇ ನಿವಾರಿಸಲ್ಪಡುತ್ತದೆ. ಈ ಎರಡು ಪ್ರಮಾಣಗಳನ್ನು ಕಾಲ್ಗೇಟ್ ವೈಜ್ಞಾನಿಕ ಪರೀಕ್ಷೆಗಳ ಮುಖೇನ ಸಿದ್ಧಗೊಳಿಸಿರುತ್ತದೆ. ಕಾಲ್ಗೇಟಿಗೆ ಮಾತ್ರ ಈ ಪ್ರಮಾಣವಿದೆ !

ಊಟವಾದ ಮೇಲೆ ಬರೇ ಬಾಯಿ ಮುಕ್ಕಳಿಸುವುದರಿಂದ ಪ್ರಯೋಜನವಾಗಲಾರದು–ಪ್ರತಿ ಊಟದ ಮೇಲೆ ತಪ್ಪದೆ ನಿಮ್ಮ ಹಲ್ಲುಗಳನ್ನು ಕಾಲ್ಗೇಟನಿಂದ ಉಜ್ಜಿರಿ. ಇದರ ಪ್ರಬಲವಾದ ಸಂದು ಸಂದುಗಳಿಗೆ ಒಳನುಗ್ಗುವ ನೊರೆಯು ಅಗೋಚರವಾದ ಹಲ್ಲುಗಳ ನಡುವಿನ ಸಂದುಗಳಿಗೆ ಹೊಕ್ಕು, ನಿಮ್ಮ ಬಾಯಿಯ ದುರ್ಗಂಧಕ್ಕೂ, ಹಲ್ಲುಗಳ ಕ್ಷಯಿಸುವಿಕೆಗೂ ಕಾರಣವಾದ ಆ ಕೊಳೆಯುತ್ತಿರುವ ಆಹಾರ ಕಣಗಳನ್ನು ನಿವಾರಿಸಿ ಸ್ವಚ್ಛಗೊಳಿಸುವುದು.

ಮಕ್ಕಳಿಗೆ ಕಾಲ್ಗೇಟನಿಂದ ಹಲ್ಲುಜ್ಜುವುದೆಂದರೆ ತುಂಬಾ ಪ್ರೀತಿ, ದೀರ್ಘಕಾಲ ಉಳಿಯುವ ಅದರ ನೆಚ್ಚಿನ ಪೆಪರ್‌ಮಿಂಟ್ ಸ್ವಾದವು ಇದರಲ್ಲಿ ಕೂಡಿರುತ್ತದೆ.




ನಿಮಗೆ ಹಲ್ಲುಪುಡಿ ಹೆಚ್ಚು ಇಷ್ಟವಾಗಿದ್ದರೆ ಈ ಎಲ್ಲಾ ಪ್ರಯೋಜನಗಳನ್ನು ಕಾಲ್ಗೇಟ್ ಟೂತ್ ಪೌಡರ್‌ನಿಂದಲೂ ಪಡೆಯಿರಿ...ಒಂದು ಡಬ್ಬಿ ಹಲವು ತಿಂಗಳುಗಳವರೆಗೆ ಸಾಕಾಗುವುದು.




ಕಾಲ್ಗೇಟನಿಂದ ತಪ್ಪದೆ ಹಲ್ಲುಜ್ಜುವುದರಿಂದ

- ✔ ಬಾಯಿಯ ದುರ್ಗಂಧವು ನಿವಾರಿಸಲ್ಪಡುತ್ತದೆ
- ✔ ದಂತಕ್ಷಯವನ್ನು ವಿರೋಧಿಸಲಾಗುವುದು
- ✔ ಹಲ್ಲುಗಳು ಪರಿಶುಭ್ರವಾಗಿ ಉಳಿಯುವವು




DCG 31 K

ಬಾಯಿಯ ದುರ್ಗಂಧವನ್ನು ನಿವಾರಿಸಲು ಮತ್ತು ಹಲ್ಲುಗಳು ಶುಭ್ರವಾಗಿರಲು... ಹೆಚ್ಚಿಗೆ ಜನರು ಪ್ರಪಂಚದ ಇನ್ನಿತರ ಡೆಂಟಲ್ ಕ್ರೀಮ್‌ಗಳಿಗಿಂತ ಅಧಿಕವಾಗಿ ಕಾಲ್ಗೇಟನ್ನೇ ಕೊಂಡುಕೊಳ್ಳುತ್ತಾರೆ



ಹರಿಜನರು ಮತ್ತು ಮಹಿಳೆಯರ ಕಲ್ಯಾಣಕ್ಕಾಗಿ
ಇವರ ಜೀವನ ಸವೆದಿದೆ

# ಪದ್ಮಶ್ರೀ ಸರದಾರ ವೀರನಗೌಡರು

**ಪಿ. ವಿ. ಆಚಾರ್ಯ**

ಸರದಾರ ವೀರನಗೌಡ ಪಾಟೀಲರು "ಸರದಾರ" ರಾದದ್ದು ೧೯೩೦ ರಲ್ಲಿ ಹಿರೇಕೆರೂರಿನ ಕರನಿರಾಕರಣ ಸಮರದಲ್ಲಿ. ಆ ಸತ್ಯಾಗ್ರಹದ ಯೋಜಕರು, ಗತ್ತುಗಾರರು, ನಾಯಕರು— ಎಲ್ಲವೂ ಅವರಾಗಿದ್ದರು. ಅದನ್ನವರು ಬಾರ್ಡೋಲಿ ಸತ್ಯಾಗ್ರಹದ ಮಾದರಿಯ ಮೇಲೆ ಯೋಜಿಸಿದ್ದರು. ಆ ಸತ್ಯಾಗ್ರಹವನ್ನು ಪ್ರತ್ಯಕ್ಷವಾಗಿ ಅಭ್ಯಸಿಸಲು ಅವರು ಬಾರ್ಡೋಲಿ ಬೋರಸದಗಳಿಗೆ ಹೋಗಿದ್ದರು. ಆ ಐತಿಹಾಸಿಕ ಸಮರ ಯಶಸ್ವಿಯಾಗಲು ಮೂರು ಮುಖ್ಯ ಕಾರಣಗಳಿದ್ದುದನ್ನವರು ಮನಗಂಡರು. ಒಂದು ರೈತರಿಗಿದ್ದ ನಿಜವಾದ ಕಷ್ಟ; ಎರಡು, ನೆರೆಯಲ್ಲೇ ಇದ್ದ ಒಂದು ದೇಶಿ ಸಂಸ್ಥಾನ; ಮೂರು, ಬಿಗಿಯಾದ ಸಂಘಟನೆ. ಮೊದಲೆರಡು ಅವಶ್ಯಕತೆಗಳು ಹಿರೇಕೆರೂರು ತಾಲೂಕಿನಲ್ಲಿದ್ದವು. ಮೂರನೆಯದನ್ನೂ ವೀರನಗೌಡರು ಒದಗಿಸಿದರು. ಅದು ಅವರ ಹುಟ್ಟು ತಾಲೂಕಾಗಿತ್ತು; ಸರದಾರ ಪಟೇಲರಂತೆ ಅವರು ಸ್ವತಃ ರೈತ ವರ್ಗದಿಂದಲೇ ಉದ್ಭವಿಸಿದವರಾಗಿದ್ದರು. ಸೇನಾಪತಿಯಲ್ಲಿರಬೇಕಾದ ನಿಷ್ಠೆ, ನಾಯಕತ್ವ, ಸ್ವಾರ್ಥತ್ಯಾಗ ಅವರ

ಲ್ಲಿತ್ತು. ಪರಿಣಾಮವಾಗಿ ಸರಕಾರಕ್ಕೆ ಕಂದಾಯ ದಲ್ಲಿ ರೂಪಾಯಿಗೆ ಒಂದಾಣೆಯಷ್ಟು ವಸೂಲು ಮಾಡುವುದಾಗಲಿಲ್ಲ, ಕೊನೆಗೆ ಹೆಚ್ಚು ಭಾಗ ಕಂದಾಯವನ್ನು ಸರಕಾರ ಮಾಫಿ ಮಾಡಬೇಕಾ ಯಿತು. ವೀರನಗೌಡರು ಕರ್ನಾಟಕದ ಸರದಾರ ರೆಂದು ಖ್ಯಾತರಾದರು.

ಆದರೆ ವೀರನಗೌಡ ಪಾಟೀಲರ ಹೆಸರು ಚಿರಸ್ಥಾಯಿಯಾಗುವುದಾದರೆ ಅದು ಈ ಸರ ದಾರಿಕೆಯಿಂದಲ್ಲ. ಅದು ಆ-ಸರದಾರ ಸಹಜ ವಾದ ಹೃದಯವಂತಿಕೆಗೋಸ್ಕರವಾಗಿ. ಹರಿ ಜನರ ಹಕ್ಕುಗಳಿಗಾಗಿ ಅವರು ಕೈಕೊಂಡ ಹೋರಾಟ, ಅವರ ದುಃಖಶಮನಕ್ಕಾಗಿ ಅವರು ಮಾಡಿದ ಪರಿಶ್ರಮ; ಅನಾಥ ಮಕ್ಕಳಿ ಗಾಗಿ, ಮಹಿಳೆಯರಿಗಾಗಿ ಅವರು ನಡೆಸಿದ ಕಾರ್ಯ, ಮಹಿಳಾ ಶಿಕ್ಷಣದಲ್ಲಿ ಅವರು ತಪಿಸಿದ ತಪಸ್ಸು— ಇವು ಸಾವಿರಾರು ಹೆಂಗಸರು— ಮಕ್ಕಳ ಹೃದಯದಲ್ಲಿ ಶಾಶ್ವತವಾಗಿ ಅವ ರನ್ನು ನಿಲ್ಲಿಸಿವೆ. ಅವರಿಗೆ "ಪದ್ಮಶ್ರೀ" ಬಿರುದು ಬಂದದ್ದು ಇದಕ್ಕಾಗಿಯೆ— ಮತ್ತು ತಮ್ಮ ಸರದಾರಿಕೆಗಿಂತಲೂ ತಮ್ಮೀ ದಯಾಧರ್ಮಕ್ಕೆ ದೊರೆತ ಪುರಸ್ಕಾರ ಅವರ ಹೃದಯಕ್ಕೆ ಹತ್ತಿರ ವಾದುದೆಂದು ನನಗೆ ಅವರೊಡನೆ ಮಾತಾಡುತ್ತಿ ದ್ದಾಗ ಅನಿಸಿತು. ಅವರ ಸಾಮಾಜಿಕ ಶೈಕ್ಷಣಿಕ ಕಾರ್ಯದ ಮುಖ್ಯ ಸಾಧನವಾದ ಹುಬ್ಬಳ್ಳಿಯ ಮಹಿಳಾ ವಿದ್ಯಾಪೀಠದ ಚಟುವಟಿಕೆಗಳು, ಅವು ಗಳ ವಿಸ್ತರಣೆಗಾಗಿ ಅವರ ತಲೆಯಲ್ಲಿರುವ ವಿವಿಧ ಯೋಜನೆಗಳನ್ನು ವಿವರಿಸುತ್ತಿರುವಾಗ ವಾರ್ಧಕ್ಯದಿಂದ ಕಂತಿದ ಅವರ ಕಣ್ಣುಗಳಲ್ಲಿ ಕಾಂತಿ ಮಿನುಗುತ್ತದೆ.

ವೀರನಗೌಡ ಪಾಟೀಲರು ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲೂಕಿನ ಕಚವಿ ಗ್ರಾಮದಲ್ಲಿ ೧೮೯೮ ಎಪ್ರಿಲ್ ೧೦ ರಂದು ಹುಟ್ಟಿ ದರು. ತಂದೆ ವೀರಬಸನ ಗೌಡರು ಗ್ರಾಮದ ಪಟೇಲರು. ಹಳ್ಳಿಯ ಶಾಲೆಯಲ್ಲಿ ಶಿಕ್ಷಣ ಪಡೆದ ಮೇಲೆ ಮಗನು ಕಣ್ಣೆದುರಿಂದ ಮರೆಯಾಗುವು ದನ್ನು ಸಹಿಸದ ತಂದೆ ಅವರನ್ನು ಉಚ್ಚ ಶಿಕ್ಷಣಕ್ಕೆ ಕಳಿಸಲೊಪ್ಪಲಿಲ್ಲ. ೧೯೦೨ ರಲ್ಲಿ ತಂದೆ ತೀರಿದ ಮೇಲೆಯೆ ಅವರು ಮಾಧ್ಯಮಿಕ ಶಾಲೆ ಕಂಡದ್ದು. ಸವಣೂರು, ಧಾರವಾಡ, ಬೆಳಗಾವಿಗಳಲ್ಲಿ ಬಂಧುಬಾಂಧವರ ಮನೆಯಲ್ಲಿದ್ದುಕೊಂಡು, ಕೆಲ ವೇಳೆ ಅವರಲ್ಲಿ ಕೆಲಸ ಮಾಡಿ ಮೆಟ್ರಿಕ್ ಆದಾಗ ಅವರಿಗೆ ೨೨ ವರ್ಷವಾಗಿ ಹೋಗಿತ್ತು.

ಪುಣೆಯ ಫರ್ಗುಸನ್ ಕಾಲೇಜಿನಲ್ಲಿ ಅಭ್ಯಾಸ ಮುಂದುವರಿಸಿ ೧೯೧೬ ರಲ್ಲಿ ಬಿ. ಎಜಿ. (ಕೃಷಿ) ಪದವೀಧರರಾದ ಅವರಿಗೆ ತಮ್ಮ ತಾಲೂಕಿನ ಪ್ರಪ್ರಥಮ ಪದವೀಧರನೆಂದು ತಾಲೂಕಿನ ಜನ ಬಂಗಾರದ ಪದಕವನ್ನಿತ್ತರು.

"ನೀವು ಪ್ರಥಮ ವರ್ಗದಲ್ಲಿ ತೇರ್ಗಡೆಯಾ ಗುತ್ತ ಬಂದಿರಾ ?" ಎಂದು ನಾನು ಕೇಳಿದೆ.

"ಇಲ್ಲ, ಯಾವಾಗಲೂ ಮೂರನೇ ವರ್ಗ ದಲ್ಲೇ. ಆದರೆ ನೋಡಿರಿ, ಒಮ್ಮೆ ಬ್ಯಾರಿಸ್ಟರ್ ಜಯಕರರು ಕಾಲೇಜಿನ ಸಭೆಯಲ್ಲಿ ಭಾಷಣಕ್ಕೆ ಬಂದಾಗ ಒಂದು ಮಾತು ಹೇಳಿದ್ದರು: ಫರ್ಸ್ಟ್ ಕ್ಲಾಸ್, ಸೆಕೆಂಡ್ ಕ್ಲಾಸ್ ವಿದ್ಯಾರ್ಥಿಗಳಿಂದ ನಾವು ಏನನ್ನೂ ನಿರೀಕ್ಷಿಸಲು ಸಾಧ್ಯವಿಲ್ಲ. ಅವರು ಯಾವುದೋ ನೌಕರಿಯಲ್ಲಿ ಆಜೀವ ಮುಳುಗಿ ಮಾಯವಾಗಿ ಹೋಗುವರು. ಸಮಾಜಕ್ಕೇನಾ ದರೂ ಕೆಲಸ ಆಗಬೇಕಾದರೆ ಥರ್ಡ್ ಕ್ಲಾಸಿ ನವರಿಂದಲೇ.

ಏನಿಲ್ಲೆಂದರೂ ವೀರನಗೌಡರ ವಿಷಯದಲ್ಲಿ ಜಯಕರರ ಮಾತು ಸತ್ಯವಾಯಿತು. ಡೆಕ್ಕನ್ ಎಜುಕೇಶನ್ ಸೊಸೈಟಿಯ ಸದಸ್ಯರ ತ್ಯಾಗ ಮಯ ಸೇವೆ ಗೌಡರ ಮನಸಿನ ಮೇಲೆ ತುಂಬ ಪರಿಣಾಮ ಮಾಡಿತ್ತು. ರಾಷ್ಟ್ರೀಯತೆಯ ಕೇಂದ್ರವಾದ ಪುಣೆಯಲ್ಲಿ ಅವರು ಆಗಲೇ ದೇಶ ಹಿತದ ಅರಿವು ಹೊಂದಿದ್ದರು. ಅದು ಬ್ರಾಹ್ಮಣೇ ತರರಲ್ಲಿ ಜಾಗೃತಿ ಉದಯಿಸುತ್ತಿದ್ದ ಕಾಲ. ಅದರ ಪರಿಣಾಮವೂ ವೀರನಗೌಡರ ಮೇಲೆ

ಆಗದಿರಲಿಲ್ಲ. ಹಿಂದುಳಿದ ತಮ್ಮ ಸಮಾಜಕ್ಕೆ ವಿದ್ಯೆಯೇ ತಾರಕ ಮಂತ್ರವೆಂದು ತೋರಿ ಅವರು ತಾವೂ ಶಿಕ್ಷಕರಾಗಲು ನಿರ್ಧರಿಸಿದರು.

ಬಿ. ಎಜಿ. ಆಗಿ ಮರಳಿದವರು ಬೆಳಗಾವಿಯಲ್ಲಿ ಕರ್ನಾಟಕ ಲಿಂಗಾಯತ ಎಜುಕೇಶನ್ ಸೊಸೈಟಿಯ ನಿರ್ಮಾಣದಲ್ಲಿ ಸಹಕರಿಸಿ ಅವರು ಅದರ ಸಂಸ್ಥಾಪಕ ಸದಸ್ಯರೂ ಹಲಕಾಲ ಅದರ ಕಾರ್ಯದರ್ಶಿಗಳೂ ಆಗಿದ್ದರು. ಪ್ರಾಧ್ಯಾಪಕತ್ವಕ್ಕೆ ಅರ್ಹತೆ ಬರಲೆಂದು ಅವರು ಬಿ. ಎಸ್‌ಸಿ. ಯೂ ಆದರು. ೧೪ ವರ್ಷಕಾಲ ಆ ಸಂಸ್ಥೆಯ ಗಿಲಗಂಚಿ ಅರಟಾಳ ಹೈಸ್ಕೂಲಿನಲ್ಲಿ ವಿಜ್ಞಾನ ಶಿಕ್ಷಕರಾಗಿದ್ದು ಅವರು ಕೊನೆಗೆ ಗಾಂಧೀಜಿಯ ಚಳವಳಿಯಿಂದ ಆಕೃಷ್ಟರಾಗಿ ರಾಜೀನಾಮೆಯಿತ್ತಾಗ ಹೆಡ್ಮಾಸ್ತರ ಪದದಲ್ಲಿದ್ದರು.

ಬ್ರಿಟಿಶ್ ಸರಕಾರದೊಡನೆ ಸಹಕರಿಸಿ ಹೆಚ್ಚು ನೌಕರಿಗಳನ್ನು ಬ್ರಾಹ್ಮಣೇತರರಿಗೆ ದೊರಕಿಸಿ ಕೊಡುವ ಮೂಲಕ ಸಮಾಜದ ಉತ್ಕರ್ಷ ಸಾಧಿಸಬಹುದೆಂದು ಬಲವಾಗಿ ನಂಬಿದ್ದ ಅಂದಿನ ಲಿಂಗವಂತ ಮುಂದಾಳುಗಳಿಂದ ತಮ್ಮ ಸಮಾಜ ವಿಮುಖಗೊಳಿಸಿ ಕಾಂಗ್ರೆಸ್ಸಿನ ಸ್ವಾತಂತ್ರ್ಯ ಚಳವಳಿಯತ್ತ ಆಕರ್ಷಿಸಿದ ಯಶಸ್ಸು ಖಂಡಿತವಾಗಿ ಶ್ರೀ ವೀರನಗೌಡರಿಗೆ ಸೇರಬೇಕು.

ತಮ್ಮ ಸಮಾಜದ ಮೇಲೆ ಅವರಿಗೆ ಪ್ರೀತಿಯಿದ್ದರೂ ಅವರು ಎಂದೂ ಜಾತೀಯವಾದಿಗಳಾಗಿರಲಿಲ್ಲ. ರಾಷ್ಟ್ರೀಯತೆ ಅವರನ್ನು ಆಕರ್ಷಿಸಿತ್ತು. ಅವರ ಮೊದಲನೇ ಹೆಂಡತಿಯ ಕಡೆಯವರು (ಅವರು ೧೯೧೮ ರಲ್ಲಿ ಮದುವೆಯಾಗಿದ್ದರು) ಯಾವುದಾದರೂ ಸರಕಾರಿ ನೌಕರಿ ಹಿಡಿದರೆ ಹೆಣ್ಣು ಕೊಡುತ್ತೇವೆ ಎಂದು ಸೂಚಿಸಿದಾಗ ಆ ಕರಾರಿನ ಮೇಲೆ ಮದುವೆಯೆ ಬೇಡವೆಂದಿದ್ದರು. ನೌಕರಿಯ ಅನೇಕ ಅವಕಾಶಗಳನ್ನವರು ನಿರ್ಧಾರದಿಂದ ನಿರಾಕರಿಸುತ್ತ ಬಂದಿದ್ದರು. ಗಾಂಧೀಜಿಯ ಪ್ರಭಾವಕ್ಕೊಳಗಾಗಿ ಖಾದಿ ಧರಿಸತೊಡಗಿದ್ದರು.

ಒಂದು ಸಲ ಬೆಳಗಾವಿಯ ಆಗಿನ ಕಲೆಕ್ಟರ್ ಕೆ. ಎಲ್. ಇ. ಸೊಸೈಟಿಗೆ ಭೆಟ್ಟಿಕೊಟ್ಟಾಗ ವೀರನಗೌಡರು ಧರಿಸಿದ ಖಾದಿ ಸೂಟನ್ನು ಕೆಕ್ಕರಗಣ್ಣಿನಿಂದ, ಶಿಷ್ಟಾಚಾರವನ್ನೆಲ್ಲ ಮರೆತು, ದಿಟ್ಟಿಸಿದ್ದು ವೀರನಗೌಡರನ್ನು ಸಂಪೂರ್ಣ ನಿರ್ಧಾರಕ್ಕೆ ತಂದಿತು. ಸ್ವರಾಜ್ಯವಿಲ್ಲದೆ ಇಂಥ ಸಂಸ್ಥೆಗಳು ಹೆಚ್ಚು ಒಳ್ಳೆಯದನ್ನು ಮಾಡಲಾರವೆಂದು ಸ್ವಾಭಿಮಾನಿಗಳಾದ ಅವರಿಗೆ ತೋರಿತು.

ಅವರು ಕೆ. ಎಲ್. ಇ. ಸೊಸೈಟಿಗೆ ರಾಜೀನಾಮೆಯಿತ್ತು ಕಾಂಗ್ರೆಸ್ ಸೇರಿದರು. ೧೯೩೦ ರಲ್ಲಿ ಅವರು ಹೊಸಮನಿ ಸಿದ್ದಪ್ಪನವರ ಅಧ್ಯಕ್ಷತೆಯಲ್ಲಿ ಒಂದು ಬ್ರಾಹ್ಮಣೇತರ ಪರಿಷತ್ತು ಕರೆದು ಕಾಂಗ್ರೆಸ್ ಸೇರುವ ಗೊತ್ತುವಳಿಯನ್ನು ಒಮ್ಮತದಿಂದ ಪಾಸು ಮಾಡಿಸಿಕೊಂಡರು. ಇದು ಬ್ರಿಟಿಶ ಸರಕಾರಕ್ಕೊಂದು ಬರಸಿಡಿಲೇ ಆಗಿತ್ತು. ಬ್ರಾಹ್ಮಣೇತರರ ಬೆಂಬಲ ತಮಗಿರುವಾಗ ಕಾಂಗ್ರೆಸ್ಸಿನ ಚಳವಳಿ ಈ ಪ್ರದೇಶದಲ್ಲಿ ತಮಗೇನೂ ಮಾಡಲಾರದೆಂದು ಬಗೆದಿದ್ದ ಅವರಿಗೆ ಈಗ ತೀರ ನಿರಾಶೆಯಾಯಿತು.

ವೀರನಗೌಡರು ಅದರ ಬೆಲೆಯನ್ನೂ ತೆರಬೇಕಾಯಿತು. ಹಿರೇಕೆರೂರಿನ ಕರನಿರಾಕರಣೆಯಲ್ಲಿ ಅವರ ಬಂಧನವಾಗದಿದ್ದರೂ ಅವರ ಮನೆ ಜಪ್ತಿಯಾಯಿತು. ೧೯೩೨ ರಲ್ಲಿ ಅವರನ್ನು ಮೊದಲು ಸ್ಥಾನಬದ್ಧತೆಯಲ್ಲಿಟ್ಟು ಆಮೇಲೆ ಕರಾರು ಹಾಕಿ ಬಿಡುಗಡೆ ಮಾಡಿದರೂ ಇವರು ಕರಾರು ಮುರಿದದ್ದರಿಂದ ೧೫ ತಿಂಗಳ ಶಿಕ್ಷೆಯಾಗಿ ಹಿಂಡಲಗಿಯ ಸೆರೆಮನೆಯಲ್ಲಿ ಮೂರನೇ ವರ್ಗದಲ್ಲಿ ಇಡಲ್ಪಟ್ಟರು. ೧೯೪೦ ರಲ್ಲಿ ಅವರು ವೈಯಕ್ತಿಕ ಸತ್ಯಾಗ್ರಹದಲ್ಲಿ ಮತ್ತೆ ಸೆರೆಮನೆ ಕಂಡರು. ೧೯೪೨ ರಲ್ಲಿ ಕೆಲಕಾಲ ಭೂಗತ ಚಳವಳಿ ನಡೆಸಿ ಎರಡೂವರೆ ವರ್ಷ ಶಿಕ್ಷೆಗೊಳಗಾದರು.

೧೯೩೨ ರ ಅವರ ಸೆರೆಮನೆ ವಾಸ ಅವರನ್ನು ಬಲು ಕಠೋರ ಪರೀಕ್ಷೆಗೆ ಒಳಪಡಿಸಿತು.

ಮೂರನೇ ವರ್ಗದ ಕೈದಿಯಾಗಿದ್ದುದೇ ಅವರಿಗೆ ಸಾಕಷ್ಟು ಕಿರುಕುಳದಾಯಕವಾಗಿತ್ತು. ಕೈದಿಗಳನ್ನು ಸಂಘಟಿಸಿ ಅಧಿಕಾರಿಗಳನ್ನು ಎದುರಿಸುವ "ರಿಂಗ್ ಲೀಡರ್" ಎಂದು ಬೇರೆ ಅವರನ್ನು ಪ್ರತ್ಯೇಕಿಸಿ ಇಡಲಾಗಿತ್ತು. ಅವರ ಭೆಟ್ಟಿಗೆ ಬಂದವರನ್ನು ಸರಳುಗಳಾಚೆಗೆ ನಿಲ್ಲಿಸಿ ಮಾತಾಡ ಹೇಳುತ್ತಿದ್ದರು. ಇದು ತಮ್ಮ ಸ್ವಾಭಿಮಾನಕ್ಕೆ ಕುಂದೆಂದು ವೀರನಗೌಡರು ದೂರದ ಶಾಂತಿನಿಕೇತನದಿಂದ ತಮ್ಮನ್ನು ಕಾಣ ಬಂದ ಪ್ರೀತಿಯ ಮಗಳನ್ನು (ಲೀಲಾವತಿ) ಕೂಡ ಕಾಣಲು ನಿರಾಕರಿಸಿದರು.

ಶಿಕ್ಷೆಯ ಅವಧಿ ತೀರಿದ ನಂತರವೂ ಅವರಿಗಾಗಿದ್ದ ೩೦೦ ರೂಪಾಯಿಯ ದಂಡ ಕೊಡಲು ನಿರಾಕರಿಸಿದ್ದರಿಂದ ವೀರನಗೌಡರ ಬಿಡುಗಡೆಯಾಗಲಿಲ್ಲ. ಆಗ ನಾಟಕಗಳಲ್ಲಿ ಮಾತ್ರ ನಡೆಯುವಂಥ ಒಂದು ಘಟನೆ ಅವರ ಜೀವನದಲ್ಲಿ ಒದಗಿತು. ಅವರ ಹೆಂಡತಿ ನಾಗಮ್ಮನವರು ತೀವ್ರ ಅಸ್ವಸ್ಥದಿಂದ ಬೆಂಗಳೂರಿನ ಆಸ್ಪತ್ರೆಯಲ್ಲಿ ಆಪರೇಶನ್‌ಗಾಗಿ ಕಾಯುತ್ತಿದ್ದಾರೆಂದು ವಾರ್ತೆ ಬಂತು. ಅದರ ಬೆನ್ನಿಗೇ ಶಾಂತಿನಿಕೇತನದಲ್ಲಿದ್ದ ಅವರ ಮಗಳು ಟೈಫಾಯ್ಡ್ ಆಗಿ ಬದುಕು ಸಾವುಗಳ ನಡುವೆ ತೂಗಾಡುತ್ತಿದ್ದಾಳೆಂದು ತಂತಿ ಬಂತು. ದಂಡ ತೆತ್ತರೆ ಬಿಟ್ಟೇವೆಂದು ಸರಕಾರದವರು; ಆದದ್ದಾಗಲಿ ಸತ್ಯಾಗ್ರಹ ಧರ್ಮ ಬಿಡೆನೆಂದು ಗೌಡರು. ಈ ತಿಕ್ಕಾಟದ ಸುದ್ದಿ ವಿಶ್ವಕವಿ ರವೀಂದ್ರರಿಗೆ ತಿಳಿದೊಡನೆ ಅವರು ಕೆರಳಿ ವೈಸರಾಯರಿಗೂ ಮುಂಬಯಿ ಗವರ್ನರರಿಗೂ ಪ್ರತಿಭಟನೆಯ ತಂತಿಗಳನ್ನು ಕಳಿಸಿದ ಫಲವಾಗಿ ತಾತ್ಪೂರ್ತಿಕವಾಗಿ ವೀರನಗೌಡರ ಬಿಡುಗಡೆಯಾಯಿತು. ಅವರು ಬಂಗಾಲಕ್ಕೆ ಹೋದರು. ಕಲಕತ್ತೆಯ ಆಸ್ಪತ್ರೆಯಲ್ಲಿ ಅವರ ಮಗಳು ಮರಳಿ ಮರಳಿ ಮರುಕಳಿಸುವ ಟೈಫಾಯ್ಡಿನಿಂದ ಸಾವಿನ ದವಡೆ ಸೇರಿ ಅದೇ ಹಿಂದಿರುಗುವಂತಿದ್ದಾಗ ಸರಕಾರ ವೀರನ ಗೌಡರಿಗೆ ಮತ್ತೆ ಸೆರೆಮನೆಯಲ್ಲಿ ಹಾಜರಾಗಲು ಆಜ್ಞೆ ಕಳಿಸಿತು. ಮಗಳನ್ನು ಬಡೋದೆಗೆ ಕರೆದೊಯ್ದು ಪರಿಚಿತರೊಬ್ಬರಲ್ಲಿ ಬಿಡಬೇಕೆಂದರೆ ಗಾಡಿ ಖರ್ಚಿಗೂ ಕೈಯಲ್ಲಿ ಬಿಡಿ ಕಾಸಿಲ್ಲದೆ ಅವರು ಅಪ್ರತಿಭರಾದರು. ಮಿತ್ರರಿಗೆ ಕಳಿಸಿದ ತಂತಿಗಳು ವಿಫಲವಾಗಿದ್ದವು. ಮುಂಗಾಣದಿದ್ದ ಗೌಡರಿಗೆ ಆಗ ಒಬ್ಬ ಅನಿಮಿತ್ತ ಬಾಂಧವ ಕೊಟ್ಟ ೫೬ ರೂ. ಅವರನ್ನು ಈ ಭಯಾನಕ ಸಂಕಟದಿಂದ ಉಳಿಸಿತು. "ದೇವರು ನಂಬಿದವರ ಕೈ ಬಿಡುವುದಿಲ್ಲ" ಎಂದು ವೀರನಗೌಡರು ಈಗಲೂ ಈ ಘಟನೆಯನ್ನು ಭಾವನಾಪೂರ್ವಕ ವರ್ಣಿಸುತ್ತಿರುತ್ತಾರೆ.

ವೀರನಗೌಡರ ಹರಿಜನ ಕಾರ್ಯ ಗಾಂಧೀಜಿ ಆ ಪ್ರಶ್ನೆ ಎತ್ತಿಕೊಳ್ಳುವುದಕ್ಕಿಂತ ಎಷ್ಟೋ ಮೊದಲೇ ಪ್ರಾರಂಭವಾಗಿತ್ತೆಂದು ಅನೇಕರಿಗೆ ಗೊತ್ತಿರಲಿಲ್ಲ. ಬಹುಶಃ ೧೯೨೪ ರಲ್ಲಿರಬೇಕು. ಗಿಲಗಂಚಿ ಅರಟಾಳ ಹೈಸ್ಕೂಲಿನಲ್ಲಿ ಒಂದು ಕ್ಲಾಸಿನಲ್ಲಿ ಮೋರೆ ಒಣಗಿಸಿಕೊಂಡು ಪ್ರತ್ಯೇಕವಾಗಿ ಕುಳಿತಿದ್ದ ಒಬ್ಬ ಹುಡುಗ ಅವರ ಗಮನ ಸೆಳೆದ. ಅವರು ಅವನ ಬಳಿ ಹೋಗಿ ಏಕೆ, ಬೇರೆ ಕುಳಿತಿದ್ದಿ ಎಂದು ವಿಚಾರಿಸಿದಾಗ ಆತ ಅಸ್ಪೃಶ್ಯ ಎಂದು ತಿಳಿಯಿತು. ವೀರನಗೌಡರು ಅವನನ್ನು ಪ್ರೀತಿಯಿಂದ ಮುಟ್ಟಿದರು. ಹುಡುಗ ಅಂದಿನಿಂದ ಅವರಿಗೆ ಅತಿ ಕೃತಜ್ಞನಾದ. ಈ ಘಟನೆಯಿಂದ ಹರಿಜನರ, ವಿಶೇಷವಾಗಿ ಯಾರೂ ಸೇರಿಸಿಕೊಳ್ಳಲೊಲ್ಲದ ಹರಿಜನ ವಿದ್ಯಾರ್ಥಿಗಳ ಕಷ್ಟಗಳ ಪರಿಚಯ ಅವರಿಗಾಗಿ ೧೯೨೮ ರಲ್ಲಿ ಅವರು ಹರಿಜನ ಬೋರ್ಡಿಂಗ್ ಒಂದನ್ನು ಬೆಳಗಾಂವಿಯಲ್ಲಿ ಸ್ಥಾಪಿಸಿದರು. ಇದು ಕರ್ನಾಟಕದಲ್ಲೇ ಪ್ರಥಮ ಹರಿಜನ ವಿದ್ಯಾರ್ಥಿ ಗೃಹವಾಗಿತ್ತು. ಈ ಚಟುವಟಿಕೆಗಳಿಂದ ಅವರು ಸ್ವಜನರಲ್ಲೂ ಒಂದು ಬಗೆಯ ಅಸ್ಪೃಶ್ಯರೇ ಆದರು. ತಾಯಿ ಕೂಡ ಅವರಿಗೆ ಬುದ್ಧಿ ಹೇಳಬಂದರು. ವೀರನಗೌಡರು ಯಾವುದಕ್ಕೂ ಅಂಜಲಿಲ್ಲ.

೧೯೩೩ ರಲ್ಲಿ ಸೆರೆಮನೆಯಿಂದ ಬಿಡುಗಡೆ

ಯಾದೊಡನೆ ಗಾಂಧೀಜಿ ಅವರನ್ನು ಕರ್ನಾಟಕ ಹರಿಜನ ಸೇವಕ ಸಂಘದ ಅಧ್ಯಕ್ಷರಾಗಲು ಕೇಳಿ ಕೊಂಡರು ಒಂಭತ್ತು ವರ್ಷ ಆ ಪದದಲ್ಲಿ ಉಳಿದ ಅವರು ಅತ್ಯಂತ ರಭಸದಿಂದ ಹರಿಜನ ಸೇವೆ ಮಾಡಿದರು. ಆಗ ಸಂಘವು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸ್ಥಾಪಿಸಿದ ಹುಡುಗರ ಎಂಟು, ಹುಡುಗಿಯರ ಒಂದು ಧರ್ಮಾರ್ಥ ಹರಿಜನ ವಿದ್ಯಾರ್ಥಿ ಗೃಹಗಳು ಇಂದಿಗೂ ಕೆಲಸ ಮಾಡುತ್ತಿವೆ. ಅವರು, ಹೆಂಡತಿ ನಾಗಮ್ಮ ಮತ್ತು ಹತ್ತಿಪ್ಪತ್ತು ಹರಿಜನ ಬಾಲಿಕೆಯರೊಡನೆ ಕರ್ನಾಟಕದಲ್ಲೆಲ್ಲ ಬಿರುಗಾಳಿ ಸಂಚಾರ ಕೈಕೊಂಡರು. ಕೆರೆ ಕುಂಟೆಗಳು ಗುಡಿ ಗುಂಡಾರಗಳು ಹರಿಜನರಿಗಾಗಿ ತೆರವಾದವು. ಕರ್ನಾಟಕದ ಪ್ರಾಚೀನ ದೇವಾಲಯವಾದ ಬನವಾಸಿಯ ಮಧುಕೇಶ್ವರ ದೇವಾಲಯದೆದುರು ಅವರು ಕೈಕೊಂಡ ಸತ್ಯಾಗ್ರಹದ ಫಲವಾಗಿ ಅದು ಹರಿಜನರಿಗೆ ಮುಕ್ತವಾಯಿತು. ಹರಿ ಜನರು ಲಿಂಗವನ್ನು ಮುಟ್ಟಿ ಪೂಜಿಸಿ ಬಂದರು. ಬ್ರಾಹ್ಮಣರ ದೇವಾಲಯಗಳ ಮೇಲೇ ಇವರ ಕಣ್ಣು ಎಂದು ಅದರ ಪೂಜಾರಿಗಳು ಗೊಣಗಿದ್ದನ್ನು ಕೇಳಿ ವೀರನಗೌಡರು ವೀರಶೈವರ ಪ್ರಧಾನ ದೇವಸ್ಥಾನವಾದ ಉಳುವಿಯ ಚೆನ್ನಬಸವೇಶ್ವರ ದೇವಾಲಯಕ್ಕೆ ದಾಡು ಒಯ್ದರು. "ಹೊರಗೆ ಸಾವಿರಾರು ಜನ ನೆರೆದಿದ್ದರು. ಮೊಕ್ತೇಸರರು ದೇವಾಲಯದ ಬಾಗಿಲು ಹಾಕಿ ಅಡ್ಡ ನಿಂತಿದ್ದರು. ಪ್ರವೇಶಕ್ಕಾಗಿ ಬಂದ ನಮ್ಮನ್ನವರು ಪುಸಲಾಯಿಸಿದರು, ಹೆದರಿಸಿದರು. ಪೋಲೀಸರನ್ನೂ ತೋರಿಸಿದರು. ಲೆಕ್ಕಿಸದೆ ನಾವು ಮುನ್ನುಗ್ಗಿದೆವು. ಕೊನೆಗೆ 'ಚೆನ್ನಬಸವೇಶ್ವರಾ, ನೀನೇ ನೋಡಿಕೋ' ಎಂದು ಬಾಗಿಲು ತೆರೆದು ಕೊಟ್ಟರು." ಎಂದು ವೀರನಗೌಡರು ಆ ಘಟನೆಯನ್ನು ನೆನೆದುಕೊಳ್ಳುತ್ತಾರೆ. ಅನಂತರ ದೇವಾಂಗದವರ ಪ್ರಮುಖ ಸ್ಥಾನವಾದ ಬಾದಾಮಿಯ ಬನಶಂಕರಿಯೂ ಹರಿಜನರಿಗೆ ಬಾಗಿಲು ತೆರೆದಳು.

ಶ್ರೀಮತಿ ನಾಗಮ್ಮನವರು

ವೀರನಗೌಡರು ಒಂದು ವಿಷಯದಲ್ಲಿ ತುಂಬ ಸುದೈವಿಗಳು. ಅವರ ಎರಡನೆಯ ಪತ್ನಿ (ಮೊದಲಿನವರು ಮದುವೆಯಾಗಿ ೧೮ ತಿಂಗಳಲ್ಲೆ ತೀರಿಕೊಂಡಿದ್ದರು.) ವಾಸ್ತವಿಕಾರ್ಥದಲ್ಲಿ ಅವರ ಜೀವನ ಸಂಗಾತಿಯಾಗಿದ್ದಾರೆ. ಶ್ರೀಮತಿ ನಾಗಮ್ಮನವರು ಉಚ್ಚ ಶಿಕ್ಷಣ ಪಡೆದ ಮಹಿಳೆಯಲ್ಲ. ಆದರೆ ವೀರನಗೌಡರ ಸಾಮಾಜಿಕ, ರಾಜಕೀಯ ಕಾರ್ಯಗಳಲ್ಲೂ ಅವರೊಡನೆ ಸಹಕರಿಸಿದ ನಾಗಮ್ಮನವರು ಕರ್ನಾಟಕದ ಅಸಾಮಾನ್ಯ ಮಹಿಳೆಯರಲ್ಲಿ ಒಬ್ಬರೆನಿಸಿದ್ದಾರೆ. ಗಾಂಧೀಜಿ ಕರ್ನಾಟಕದಲ್ಲಿ ಹರಿಜನ ಸಂಚಾರ ಕೈಕೊಂಡಾಗ ನಾಗಮ್ಮನವರ ಕಿವಿಯಲ್ಲಿ ಪಿಸುಗುಟ್ಟಿದ ಒಂದು ಸೂಚನೆಯೆ ಇಂದು ವೀರನಗೌಡರ ಸಂಸ್ಥೆಗಳ ಬೀಜಾರೋಪಣ ಮಾಡಿತು. "ನೀವು ಒಬ್ಬಿಬ್ಬರು ಹರಿಜನ ಬಾಲಿಕೆಯರನ್ನೇಕೆ ಸಾಕಬಾರದು?" ಎಂದು ಗಾಂಧೀಜಿ ಕೇಳಿದ್ದರು. ನಾಗಮ್ಮ ತಟ್ಟನೆ ಒಪ್ಪಿದರು. ಇಬ್ಬರು ಅನಾಥ ಹರಿಜನ ಬಾಲಿಕೆಯರು ವೀರನ

ಗೌಡರ ದತ್ತಕ ಮಕ್ಕಳಾಗಿ ಔರಸ ಮಕ್ಕಳೊಡನೆ ಬದುಕ ತೊಡಗಿದರು. ಅದೇ ಮುಂದೆ ಹರಿಜನ ಬಾಲಿಕಾಶ್ರಮವಾಗಿ ೫೦ ಹರಿಜನ ಬಾಲಿಕೆಯರ ವಿದ್ಯೆ ಬುದ್ಧಿಗಳ ಹೊಣೆ ಹೊತ್ತಿತು. ಅನಂತರ ಅದರ ಚಟುವಟಿಕೆಗಳನ್ನು ಇಡೀ ಸಮಾಜಕ್ಕೆ ವಿಸ್ತರಿಸಿ ಅದಕ್ಕೆ ಪಂಡಿತ ಜವಾಹರಲಾಲರ ಮುಖಾಂತರ ೧೯೫೧ ಡಿಸೆಂಬರಿನಲ್ಲಿ ಮಹಿಳಾ ವಿದ್ಯಾಪೀಠವೆಂದು ಹೆಸರಿಡಲಾಯಿತು.

ಶ್ರೀ ವೀರನಗೌಡರ ಅಧ್ಯಕ್ಷತೆಯಲ್ಲಿ ಈ ಸಂಸ್ಥೆ ಇಂದು ಹುಬ್ಬಳ್ಳಿಯಲ್ಲಿ ಮಹಿಳಾ ಕಲ್ಯಾಣದ ಅತಿ ಅಸಡ್ಡೆಗೊಳಗಾದ ಕ್ಷೇತ್ರಗಳಲ್ಲಿ ಅಮೂಲ್ಯ ಕಾರ್ಯ ಮಾಡಿದೆ. ಅದರ ವಿವಿಧ ಸಂಸ್ಥೆಗಳು ಎಂಟೆಕರೆ ವಿಸ್ತಾರವಾದ ನೆಲೆಯಲ್ಲಿ ಹಬ್ಬಿವೆ. ಪ್ರಾಥಮಿಕ ಮಹಿಳಾ ಟ್ರೇನಿಂಗ್ ಕಾಲೇಜು ಅನೇಕ ಅನಾಥ ಮಹಿಳೆಯರಿಗೆ ಗೌರವಪೂರ್ಣ ಜೀವನದ ದಾರಿ ತೋರಿಸಿದೆ. ಅದಕ್ಕೆ ಹೊಂದಿದ ಪ್ರಾಥಮಿಕ ಶಾಲೆಯಲ್ಲಿ ೧೮೦ ಹುಡುಗ ಹುಡುಗಿಯರು ಕಲಿಯುತ್ತಿದ್ದಾರೆ.

" ಹುಡುಗ ಹುಡುಗಿಯರ ಜೀವನದಲ್ಲಿ ನೈತಿಕ ದೃಷ್ಟಿಯಿಂದ ಅಪಾಯದ ವಯಸ್ಸೆಂದರೆ ಹೈಸ್ಕೂಲು ವಯಸ್ಸು" ಎನ್ನುವ ಶ್ರೀ ಗೌಡರು ಆ ವಯಸ್ಸಿನಲ್ಲಿ ಹುಡುಗಿಯರು ಮಿಶ್ರ ಶಾಲೆಗೆ ಹೋಗುವ ಅಗತ್ಯವನ್ನು ತಪ್ಪಿಸಲು ಸ್ಥಾಪಿಸಿದ ಹುಡುಗಿಯರ ಹೈಸ್ಕೂಲಿನಿಂದ ೧೯೬೦ ರಲ್ಲಿ ಪ್ರಥಮ ತಂಡವು ಎಸ್. ಎಸ್. ಸಿ. ಪರೀಕ್ಷೆ ಕೊಟ್ಟಿದೆ. ೧೯೫೦ ರಲ್ಲಿ ಸಂಸ್ಥೆಯ ಪರವಾಗಿ ಒಂದು ಶಿಶು ವಿಹಾರವೂ ಆಯಿತು.

ಮಹಿಳಾ ವಿದ್ಯಾಪೀಠದ ಅಂಗವಾಗಿ ೮೦ ಹುಡುಗಿಯರಿಗೆ ಆಶ್ರಯವೀಯುವ ಒಂದು ಧರ್ಮಾರ್ಥ ಬೋರ್ಡಿಂಗ್, ೧೬೦ ಹುಡುಗಿಯರಿಗಾಗಿ ಇನ್ನೊಂದು ಬೋರ್ಡಿಂಗ್ ಕೂಡ ನಡೆಯುತ್ತಿವೆ.

ಈಚೆಗೆ ಸ್ಥಾಪಿಸಿದ ಕುರುಡ ಹುಡುಗಿಯರ ಆಶ್ರಮವು ಆಗಲೆ ೭ ಹುಡುಗಿಯರಿಗೆ ಹೆಣಿಗೆ, ಸಂಗೀತಗಳನ್ನು ಕಲಿಸುತ್ತಿದ್ದು ಬ್ರೇಲ್ ಪದ್ಧತಿಯಿಂದ ಅಕ್ಷರ ಶಿಕ್ಷಣವನ್ನೂ ಕೊಡುತ್ತಿದೆ. ಪ್ರಾಯಸ್ಥರಾದ ವಯಸ್ಸು (೨೦-೩೫) ನಿರ್ಗತಿಕ ಮಹಿಳೆಯರಿಗಾಗಿ ಸಂಸ್ಥೆಯು ತರಬೇತಿ ಯೋಜನೆ ಮಾಡಿದೆ. ಇದು ಭಾವಿ ಗ್ರಾಮಸೇವಿಕೆಯರನ್ನು ಅಣಿಗೊಳಿಸುತ್ತಿದೆ. ಸಂಗೀತ, ನೃತ್ಯ, ಹೊಲಿಗೆ, ಆಟಿಗೆ ತಯಾರಿಕೆ ವರ್ಗಗಳು ಮಹಿಳೆಯರಿಗೆ ಕಲಾಶಿಕ್ಷಣವೀಯುತ್ತಿವೆ.

ಎಲ್ಲಕ್ಕೂ ಹೃದಯ ಸ್ಪರ್ಶಿಯಾದುದೆಂದರೆ ಅವರ ಅನಾಥ ಶಿಶು ಸಂರಕ್ಷಣ ಕಾರ್ಯ. ನಾವು ಅವರ ಮುಂದೆ ಮಾತಾಡುತ್ತ ಕುಳಿತಿದ್ದಂತೆ ಒಬ್ಬ ಹುಡುಗಿ ಎರಡು ವರ್ಷದ ಮಗುವೊಂದನ್ನೆತ್ತಿಕೊಂಡು ಬಂದಳು. ಇದು "ನಿರ್ಗತಿಕ ಮಗು. ಇದಕ್ಕೆ ಮೋಹನ ಎಂದು ಗಾಂಧೀಜಿಯ ನೆನಪಿಗಾಗಿ ಹೆಸರಿಟ್ಟಿದ್ದೇವೆ" ಎಂದರು ಗೌಡರು. ಚೆನ್ನಾಗಿ ತಿಂದುಂಡು ಮೈ ತುಂಬಿದ್ದ ಈ ಗೆಲವು ಮೋರೆಯ ಮಗು ಈ ಆಶ್ರಮದಲ್ಲಿ ಅದಕ್ಕೆ ಮಾತೃಪ್ರೇಮದ ಕೊರತೆಯಾಗುತ್ತಿಲ್ಲವೆಂದು ತೋರಿಸಿತು. ಅಷ್ಟರಲ್ಲಿ ಸ್ವತಃ ನಾಗಮ್ಮನವರು ಇನ್ನೊಂದು ಮಗುವನ್ನೆತ್ತಿಕೊಂಡು ಬಂದರು. " ಇದರ ತಾಯಿ ಇದನ್ನು ಕೊಂದು ಬಿಡಬೇಕೆಂದಿದ್ದಳು— ಅನೀತಿಯ ಫಲವಾಗಿತ್ತದು. ನಾವು ಪೋಲೀಸ್ ನೆರವು ಪಡೆದು ಅದನ್ನುಳಿಸಿದೆವು" ಎಂದು ಗೌಡರು ಹೇಳಿದರು. ಅದು ಗೌಡರನ್ನು ತುಂಬ ನೆಚ್ಚಿಕೊಂಡಿದ್ದಂತೆ ಕಂಡಿತು.

ಇದನ್ನೆಲ್ಲ ಕಟ್ಟಿ ಮುನ್ನಡೆಸುವುದು ಸುಲಭ ಕಾರ್ಯವಾಗಿಲ್ಲ. ಕೇಂದ್ರ ಮತ್ತು ರಾಜ್ಯ ಸರಕಾರದ ಸಾಲ-ನೆರವುಗಳು ಕಟ್ಟಡಗಳ ರಚನೆ ಮೊದಲಾದವುಗಳಿಗೆ ಕೆಲವಂಶ ದೊರೆತಿವೆ. ಉಳಿದದ್ದಕ್ಕೂ ದೈನಂದಿನ ವೆಚ್ಚಗಳಿಗೂ ಗೌಡರು ಬಹಳ ಕಷ್ಟಪಡಬೇಕಾಗಿದೆ. ನಗರದಿಂದ ಸಾರ್ವಜನಿಕ ಸಹಾಯ ವಿಶೇಷವಾಗಿ

ಇಲ್ಲ ; ಹಳ್ಳಿಗಳಿಂದ ಯಾರು ಜೋಳ, ಯಾರು ಅಕ್ಕಿ, ಯಾರು ತರಕಾರಿ ಕೊಟ್ಟರೆ ಸ್ವೀಕರಿಸಲಾಗುತ್ತದೆ. ಗೌಡರು ಇದಕ್ಕಾಗಿ ಬಹಳ ಸಂಚರಿಸಬೇಕಾಗುತ್ತದೆ.

ದೇಶಸೇವೆ ಸದಾ ಅವರನ್ನು ಆಕರ್ಷಿಸಿದೆಯಾದರೂ ರಾಜಕಾರಣ ಅವರನ್ನು ಕಡೆಗಣ್ಣಿಂದಲೇ ನೋಡಿದೆ. ದೀರ್ಘಕಾಲ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸದಸ್ಯರಾಗಿದ್ದ ಅವರು ೧೯೩೮-೪೧ ರಲ್ಲಿ ಧಾರವಾಡ ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗಿದ್ದು ಚಳವಳಿ ಪ್ರಾರಂಭವಾದಾಗ ರಾಜೀನಾಮೆಯಿತ್ತರು. ೧೯೪೬ ರಿಂದ ಮುಂಬಯಿಯ ಮುಂದೆ ೧೯೫೬ರಲ್ಲಿ ಮೈಸೂರಿನ ವಿಧಾನ ಸಭಾಸದಸ್ಯರಾಗಿದ್ದರು. ಮಂತ್ರಿಪದಕ್ಕೆ ಅವರ ಹೆಸರು ಕೇಳಬರುತ್ತಿದ್ದರೂ ಅವರಿಂದದು ತಪ್ಪಿಸಿಕೊಂಡಿದೆ. (ಅವರ ಮಗಳಾದ ಶ್ರೀಮತಿ ಲೀಲಾವತಿ ಮಾಗಡಿಯವರು ಇಂದು ಮೈಸೂರು ರಾಜ್ಯದ ಉಪಮಂತ್ರಿಯಾಗಿದ್ದಾರೆ,)

ಸರದಾರ ವೀರನಗೌಡರ ಕ್ಷೇತ್ರ, ರಾಜಕೀಯ ಅಲ್ಲವೇ ಅಲ್ಲವೆಂದು ತೋರುತ್ತದೆ. ಈಗ ರಾಜಕಾರಣಕ್ಕೆ ಅವರು ಶರಣು ಹೊಡೆದಿದ್ದಾರೆ. ೧೯೫೮ರಲ್ಲಿ ವಿನೋಬಾ ಕರ್ನಾಟಕಕ್ಕೆ ಬಂದಾಗ ತಮ್ಮ ಅಳಿದುಳಿದ ಐದೆಕರೆಯನ್ನು ಭೂದಾನವಿತ್ತು ವಿನೋಬಾ-ಶಾಂತಿ ಸೈನಿಕನಾಗಿ ಪ್ರತಿಜ್ಞೆ ಕೈಕೊಂಡು ಅವರು ಸರ್ವಸೇವಾ ಸಂಘಕ್ಕೆ ಸೇರಿದರು.

ಮೂರು ಗಂಡು, ನಾಲ್ಕು ಹೆಣ್ಣು ಮಕ್ಕಳ ತಂದೆಯಾದ ೭೩ ವರ್ಷದ ಸರದಾರ ವೀರನಗೌಡರು ಇನ್ನೂ ಸೇವೆಯ ಕನಸುಗಳನ್ನು ಕಟ್ಟುತ್ತಲೇ ಇದ್ದಾರೆ . . . ಈಗ ಇವರ ತಲೆಯಲ್ಲಿರುವುದು ಹಳ್ಳಿಯ ಹುಡುಗಿಯರ ಶಿಕ್ಷಣಕ್ಕೆ ಪ್ರೋತ್ಸಾಹವೀಯುವುದಕ್ಕಾಗಿ ೪೦೦ ವಿದ್ಯಾರ್ಥಿನಿಯರ ಹಾಸ್ಟೆಲ್ ಒಂದು, ಮಹಿಳಾ (ಗ್ರಾಮ) ವಿಶ್ವವಿದ್ಯಾಲಯ ಇನ್ನೊಂದು. ಈಗಾಗಲೆ ಇದಕ್ಕೆ ಬೇಕಾದ ಯತ್ನಗಳು ನಡೆದಿವೆ. ಇನ್ನೂ ಗಟ್ಟಿಯಾಗಿಯೆ ಇರುವ ವೀರನಗೌಡರು ಇವುಗಳನ್ನೂ ಸಾಧಿಸುವರೆಂದು ನಂಬಿದರೆ ಮೋಸವಾಗದು. *



ಚುರುಕು ಹುಡುಗರ ಚುರುಕುತನ ಯೋಗ್ಯ ಸಮಯಕ್ಕೆ ಯೋಗ್ಯ ಸ್ಥಳದಲ್ಲಿ ತೋರಿಬರುವದಿಲ್ಲ. ಇದೇ ಕಷ್ಟ !

❀ ❀

ಮೂರ್ಖರು ಎಲ್ಲವನ್ನೂ ಮಾಡಬಹುದು;— ಬುದ್ಧಿಯನ್ನು ಗೌರವಿಸುವುದೊಂದನ್ನು ಮಾತ್ರ ಬಿಟ್ಟು !

❀ ❀

ಪ್ರಾಪ್ತಿಯಾದ ಮೇಲೂ ತೃಪ್ತಿ ಮತ್ತು ಶಾಂತಿಯನ್ನೀಯದಿರುವುದನ್ನು ಸಂಪತ್ತೆಂದು ಹೇಗೆ ಕರೆಯಬೇಕು ?

❀ ❀

''ನಮ್ಮವರು ಈಗ ಸಿಗರೇಟ ಸೇದುವುದನ್ನು ಬಿಟ್ಟಿದ್ದಾರೆ.''

''ಹೌದೇ. ಅದಕ್ಕೆ ದೃಢನಿರ್ಧಾರ, ಆತ್ಮಬಲ ಬೇಕಾಗುತ್ತದೆ.''

"ಅವೆರಡೂ ನನ್ನಲ್ಲಿ ಬೇಕಾದಷ್ಟಿದೆ."

ಸ್ನಾನ ಮಾಡುವಾಗಲೆಲ್ಲಾ ಹಮಾಮ್
ಸಾಬೂನನ್ನೇ ಉಪಯೋಗಿಸಿ

# ಹಮಾಮ್

ಕುಟುಂಬದ ಪ್ರತಿಯೊಬ್ಬರ
ನೆಚ್ಚಿನ ಸಾಬೂನು




... ಅಲ್ಲದೆ ಇದು ದೀರ್ಘಕಾಲ ಬಾಳುತ್ತದೆ!

ಟಾಟಾ ತಯಾರಿಕೆ

THY-7 KAN



ಮಗುವೆಂಬುದು ಮನುಜನ ತಾಯಿ !

# ಶಿವಣ್ಣ ಮಾಸ್ತ್ರ

ಶ್ರೀಮತಿ ಗೀತಾ ಕುಲಕರ್ಣಿ

**ಜೋ ಜೋ ಶೀ ಕಿಶ್ನ। ಪಲವಾನಂಡಾ।**
**ನಂಡ ಗೋಪಿಯ ಕಂಡ। ಕಂಡ**
**ಮುಕುಂಡಾ॥ ಜೋ ಜೋ।**

ನನ್ನ ಗಂಟ್ಲು ಒಣಗಿಹೋತು.... ನಿಂಗೆ ಆಡಿ, ಆಡಿ....ನಿದ್ದೆ ಮಾತ ಇಲ್ಲ.. ಆಕಮ್ಮಾ ಅಲೋದು....ತೊಟ್ಟಿಲು ಬೇಡಾ.... ಆತು ....ನಾನೇ ಒತ್ತಿಕೊಬೇಕಾ..ಅಬ್ಬಾ ಕಲ್ಲಾ? ಒಟ್ಟು ಜೋಲೊ....ನಿಂದು? ಅಲ್ಲಾ..ಇಡೀ ದಿನ ನಾ....ಎತ್ತಿಕೊಂಡ್ಲೆ ಅಡಿಗೆ ಆಲು ಮಾ ಬೇಕು? ಬಾಯಿ ತೆಗೆದು ನಗುತ್ತೀಯಾ?.... ನನ್ನ ಪುತ್ತಾನಿ!.... ನೋದು 'ಅವಲಿಗೆ' ಆ-ಪೀಚಿಗೆ ಓಗಬೇಕು..ನಂಗೆ ಅಡಿಗೆ ಆಗಬೇಕು. ....ನನ್ನ ಆಽಜ.... ಚುಮ್ಮನೆ ಮಕ್ಕೊ ಮಲಿ....ನಿಂಗೆ ಚಂಡ ಅಂಗಿ ಲುಚಿ ಲುಚಿ ತಿಂದಿ ಮಾತ್ತೇನೆ ಹೂಂ....

"ಮೌನ-ಸಂಧಾನ" ಕಥಾಸಂಗ್ರಹದಿಂದ

( ಪ್ರಕಾಶಕರು: ಲಲಿತ ಸಾಹಿತ್ಯ ಮಾಲೆ, ಧಾರವಾಡ )

**ಪಾಲೂಗಡಲೊಲು। ಪವಡಿಸಿದವನೆ।**
**ಆಲದ ಎಲೆ ಮೇಲೆ। ಮಲಗಿದ್ದ**
**ಚಿಚುವೆ॥ ಜೋ ಜೋ॥**

....ಒಂದಲ್ಲ, ಎರಡಲ್ಲ, ಹದಿನೆಂಟು ವರುಷಗಳ ಬಳಿಕ ಆ ಮನೆಯ ಮೆಟ್ಟಲು ಏರುತ್ತಿರುವ ಶಿವಣ್ಣ ಮಾಸ್ತರನ್ನು ಒಳಗಡೆ ತೊಟ್ಟಿಲು ತೂಗುತ್ತಿರುವ ಹಾಡು ಅಲ್ಲಿಯೇ ತಡೆದು ನಿಲ್ಲಿಸಿತು.. ಅವರ ಕಿವಿಗಳಿಗೆ ಅದೇ.. ಆ ಹಿಂದಿನ ಬಾಲ ಭಾಷೆಯ ತೊದಲು ಮಾತಿನ ಮಗುವಿನ ಲಲ್ಲೆ ಮಾತು ಮೈಯೆಲ್ಲ ನವಿರೇಳುವಂತೆ ಮಾಡಿತು. ಅಲ್ಲಿಯ ವಸ್ತುಸ್ಥಿತಿ ಅವರ ಮನಸ್ಸಿನ ತೆರೆಗಳನ್ನು ಬಡಿದೆಬ್ಬಿಸಿತು. ಗೋಡೆಗೆ ಒರಗಿನಿಂತ ಶಿವಣ್ಣ ತಮ್ಮನ್ನು ತಾವೆ ಮರೆತಿದ್ದರು! ಅವರ ಮನಸ್ಸು ತನ್ನ ಬಹಳ ಹಿಂದಿನ ದಿನಗಳನ್ನು ಮೆಲುಕು ಹಾಕುವುದರಲ್ಲಿ ತೊಡಗಿತ್ತು!

*

ಅಂದು ಶಿವಣ್ಣನ ಜೀವನದಲ್ಲಿ ಹೊಸ ತಾರೆ ಉದಿಸಿತೇನೊ ಎನ್ನುವ ಭ್ರಾಂತಿ; ಅವರನ್ನು ಮರುಳು ಮಾಡಿತ್ತು. ಅವರ ಹೆಚ್ಚಿನ ಸಮಯ ಶಾಲೆಯಲ್ಲಿ ಕಳೆದು ಹೋಗುತ್ತಿತ್ತು. ಮನೆಗೆ ಬಂದರೆ ತಾನು-ತನ್ನಾಕೆ ಪದ್ಮಾ! ಅವರ ಬಾಳುವೆಯಲ್ಲಿ ಹಿಗ್ಗಿನ ಸುಳಿವೇ ಇರಲಿಲ್ಲ. ಅವರಾಕೆ ಪದ್ಮಮ್ಮ ಶಾಲೆಯಿಂದ ಅದೇ ಮನೆಗೆ ಬಂದಿದ್ದ ಗಂಡನಿಗೆ ಹೇಳಿದ ಮೊದಲು ಮಾತು,

"ಅವರು ಯಾರೊ..ನನಗೆ ಹೊಸಬರು.. ಒಳ್ಳೆಯ ಜನರಂತೆ ಕಂಡರು..ಅವರ ಮಗಳಿಗೆ ನೀವು ಪಾಠ ಹೇಳಬೇಕಂತೆ."

—ಶಿವಣ್ಣ ಅದನ್ನು ಅಷ್ಟು ಮನಸ್ಸಿಗೆ ತಂದುಕೊಂಡಿರಲಿಲ್ಲ.

ಊಟ ಮುಗಿಸಿ ಕೈತೊಳೆಯುತ್ತಿರುವಾಗ ಮತ್ತೆ ಗಂಡನಿಗೆ ಕೇಳುವಂತೆ, "ನೋಡಿ, ಮತ್ತೆ ಅಲ್ಲಿಗೆ ಹೋಗದೆ ಇರಬೇಡಿ..ಆ ಮಗೂನ್ನ ನೋಡಿದ ಮೇಲೆ ನಿಮಗೂ ಈ ಮನೆಯ ನೆನಪೇ ಆಗಲಾರದು.." ಎಂದು ನುಡಿದರು.

..ಆ ರಾತ್ರಿಯೆಲ್ಲ ಮಲಗಿದ್ದ ಶಿವಣ್ಣಗೆ ಮಡದಿಯ ಮಾತೇ ಮತ್ತೆ ಮತ್ತೆ ನೆನಪಿಗೆ ಬಂದವು..ಪಕ್ಕಕ್ಕೆ ಹೊರಳಿ ನೋಡಿದರು.. ಪದ್ಮಾ ಗಾಢ ನಿದ್ರೆಯಲ್ಲಿದ್ದಳು..ಎಷ್ಟು ಆಸೆಯಿರಬೇಡ! ಆದರೆ..ಅದೇಕೆ ನಮ್ಮಾಸೆ ಆಸೆಯಾಗಿಯೇ ಉಳಿಯಿತು?..ಆ ದುಃಖವನ್ನು ಏನು ಕೊಟ್ಟರೂ ತುಂಬಿಕೊಳ್ಳಲು ಸಾಧ್ಯವೇ? ಹಿಂದಿದ್ದ ಚಪಲತೆ ಈಗ ತನ್ನವಳಲ್ಲಿ ಉಳಿದಿಲ್ಲ. ..ಬೇರೆಯವರ ಮಕ್ಕಳನ್ನೆತ್ತಿಕೊಳ್ಳುವುದರಲ್ಲಿ ಅವಳ ಮನಸ್ಸು ತೃಪ್ತಿಹೊಂದುತ್ತಲಿದೆ. ತಾನು ಸ್ಕೂಲಿಗೆಂದು ಹೋದರೆ..ಇಲ್ಲಿ ಒಂಟಿಗಳಾಗಿ ದಿನಕಳೆಯುವ ತನ್ನವಳ ಬಗೆಗೆ ತುಂಬ ಕೆಡುಕೆನಿಸಿತು....ಮರುದಿನ ಮತ್ತೆ ಮಡದಿ ಅದೇ ಮಾತನ್ನು ನೆನಪಿಗೆ ತಂದಳು..ಮಾತಿನಲ್ಲಿ ಒಪ್ಪಿಕೊಂಡರೂ ಶಿವಣ್ಣನಲ್ಲಿ ಯಾವ ಬದಲಾವಣೆಯೂ ಕಂಡುಬಾರದಂತಿತ್ತು.

ಅಂದೇ ಸಂಜೆ ಸ್ಕೂಲಿನಿಂದ ನೇರವಾಗಿ ಹೊಸ ಮನೆಯ ಮೆಟ್ಟಲು ಏರುತ್ತಿದ್ದಂತೆ ಒಳಗಿನ ಕೋಣೆಯಿಂದ ಜೋಗುಳ ಹಾಡು, ಜೊತೆ ಜೊತೆಯಲ್ಲಿ, ಮಗುವನ್ನು ಮುದ್ದು ಮಾಡುವ ಮಾತುಗಳೂ ಕೇಳಬಂತು ಶಿವಣ್ಣನಿಗೆ!

..ಆ ಧ್ವನಿಯಲ್ಲಿರುವ ಇಂಪು!

..ಮಾತಿನಲ್ಲಿರುವ ಚತುರತೆ!

ಇದು ಸಾಲದೂ ಎನ್ನುವಂತೆ, ಒಡತಿ—ಗಾಂಭೀರ್ಯದ ಮಾತೃಭಾವ!

—ಇದೆಲ್ಲವೂ ಒಂದು ಕ್ಷಣ ಶಿವಣ್ಣನನ್ನು ತಬ್ಬಿಬ್ಬಾಗಿ ಮಾಡಿತು.

—ಅಷ್ಟರಲ್ಲಿ ಸ್ವಾಗತಿಸಲು ಬಂದ ಜಾನಕಮ್ಮ, ಬಾಗಿಲಲ್ಲೇ ನಿಂತು ನಗುತ್ತ, ಒಳಗಿನ ಮಾತುಗಳನ್ನು ಕೇಳುತ್ತಿರುವ ಶಿವಣ್ಣ ಮಾಸ್ತರನ್ನು ನೋಡುತ್ತ,

"ಈ ಹುಡುಗಿ ಇಡಿಯ ದಿನ ಇದರಲ್ಲೇ ಸಮಯ ಕಳೆಯುತ್ತಾಳೆ. ಸ್ಕೂಲಿಗೂ ಹೋಗೊ

ದಿಲ್ಲ..ತುಂಬ ಹಟಮಾರಿ..ತನ್ನ ಮಾತೇ ಆಗ ಬೇಕು. ಅವಳಿಗೆ ಆಟಕ್ಕೆ ಒಂದು ಬೆಕ್ಕಿನಮರಿ ಇದ್ದರಾಯಿತು. ಅದೇ ಅವಳಿಗೊಂದು ಮಗು!"

—ಎಂದರು ನಗುತ್ತ.

"ಏನು ? ಬೆಕ್ಕಿನ ಮರಿಯೊಂದಿಗೆ ಆಟವೇ ?" ಅಚ್ಚರಿಗೊಂಡು ಕೇಳಿದರು ಶಿವಣ್ಣ.

"ಹೂಂ..ನೋಡಲು ಬನ್ನಿ. ಮತ್ತೆ, ಇಲ್ಲ ವಾದರೆ ನೀವೂ ನಂಬಲಾರಿರಿ."

—ಹೀಗೆನ್ನುತ್ತ ಜಾನಕಮ್ಮ, ಶಿವಣ್ಣ ಮಾಸ್ತ್ರನ್ನು, ಅವರ ಶಿಷ್ಯಳಾಗುವವಳ ಕೋಣೆ ಯೊಳಕ್ಕೆ ಕರೆದೊಯ್ದರು.

..ಕೋಣೆಯ ಒಂದು ಮೂಲೆಯಲ್ಲಿ ಆಟದ ಅಡಿಗೆಯ ಪಾತ್ರೆಗಳೆಲ್ಲ ಇದ್ದವು. ಅಡಿಗೆಯ ಸಿದ್ಧತೆಯೂ ನಡೆದಂತಿತ್ತು!....ಇನ್ನೊಂದು ಮೂಲೆಯಲ್ಲಿ ಪುಟ್ಟ ಮುತ್ತೈದೆ ತೊಟ್ಟಿಲು ತೂಗುತ್ತ ಹಾಡುತ್ತಿತ್ತು !

—ಅದರಲ್ಲಿ ಹಾಯಾಗಿ ಮಲಗಿ ನಿದ್ರಿಸು ತಿತ್ತು, ಒಂದು ಚಿಕ್ಕ ಬಿಳಿಯ ಬೆಕ್ಕಿನ ಮರಿ !

ಶಿವಣ್ಣ ಮಾಸ್ತ್ರಿಗೆ ಇದನ್ನು ನೋಡಿ ಹಿಡಿಸ ಲಾರದಷ್ಟು ನಗು ಬಂತು. ಗಟ್ಟಿಯಾಗಿ ನಕ್ಕು ಬಿಟ್ಟರು.

ಕೋಣೆಯಲ್ಲಿ ತುಂಬಿದ ನಗುವಿನ ಪ್ರತಿಧ್ವನಿ ಹುಡುಗಿಯ ಏಕಾಗ್ರಚಿತ್ತಕ್ಕೆ ಭಂಗ ತಂದಿತು. ತಿರುಗಿ ನೋಡಿದಾಗ, ತನ್ನ ತಾಯಿಯೊಡನೆ ನಿಂತ ಅಪರಿಚಿತರೊಬ್ಬರು !

ಉಟ್ಟಿದ್ದ ಪುಟ್ಟ ಸೀರೆಯ ಸೆರಗಿನಿಂದ ಮುಖ ಮುಚ್ಚಿಕೊಂಡಿತು ಆ ಹುಡುಗಿ! ಶಿವಣ್ಣ ಮಾಸ್ತ್ರಿಗೆ ಮಡದಿಯ ಮಾತು ನೆನಪಿಗೆ ಬಂತು. ನಿಜ...."ಆ ಮಗುವನ್ನು ನೋಡಿದ ಮೇಲೆ ನಿಮಗೆ ಈ ಮನೆಗೆ ಬರುವ ಮನಸ್ಸಾಗದು..!"

..ಯಾವ ಆಕರ್ಷಣೆ ?....ಆ ಚಂಚಲ ಬೊಗಸೆಗಣ್ಣುಗಳು ! ಆ ಚುರುಕಿನ ಹಾವಭಾವ!

ನಿಜಕ್ಕೂ ಶಿವಣ್ಣ ಆ ಕ್ಷಣಕ್ಕೆ ಆ ಮಗುವಿಗೆ ಮಾರುಹೋದರು. ತಿಳಿಯದೆ ಅವರ ಕಾಲು ಗಳು ಮುಂದಕ್ಕೆ ಹೆಜ್ಜೆ ಇಟ್ಟವು. ಮಗುವಿನ ಹತ್ತಿರ ಕುಳಿತು,

"ಮಗೂ, ನಿನ್ನ ಈ 'ಮಗುವಿ'ನ ಹೆಸ ರೇನು ?"

—ಎಂದರು, ಅವಳ ತಲೆ ನೇವರಿಸುತ್ತ.

ಹುಡುಗಿ ಮುಖದ ಸೆರಗನ್ನು ತೆಗೆದುಬಿಟ್ಟಿತು. ನಾಚಿಕೆ-ಸಂಕೋಚ ಮರೆಯಾಗಿತ್ತು.. ತನ್ನ ಮಗುವನ್ನು "ಬೆಕ್ಕಿನ ಮರಿ"ಯೆಂದೇ ಎಲ್ಲರೂ ಹಾಸ್ಯ ಮಾಡುವವರು. ಅದರಲ್ಲಿ ಈ ಹೊಸಬರು ಅದನ್ನು ತನ್ನ ಮಗುವೆಂದೇ ಹೆಸರನ್ನು ಕೇಳಿ ದಾಗ ಆ ಹುಡುಗಿ ಉಬ್ಬಿಬಿಟ್ಟಿತು.

"ಅದಲ ಹೆಸರು ಚಂಚಲ ಕುಮಾಲಿ."

"ಮತ್ತೆ ನಿನ್ನ ಹೆಸರು ?"

"ನನ್ನದು ಮದುಲಾ.."

"ಏನು .. ಮದುಲಾ ?"

ಶಿವಣ್ಣ ಮಾಸ್ತ್ರು "ಮದುಲಾ" ಎಂದು ಉಚ್ಚರಿಸಿದಾಗ ಜಾನಕಮ್ಮನಿಗೆ ನಗು ಬಂತು.. ಶಿವಣ್ಣ ಅಷ್ಟು ಲಘುವಾಗಿ ತನ್ನ ಮಗಳನ್ನು ವಶ ಪಡಿಸಿಕೊಂಡದ್ದು ಅವರಿಗೆ ಹಿಗ್ಗಾಗಿತ್ತು..

"ಮಾಸ್ತ್ರೇ, ಅವಳಿಗೆ ಇನ್ನೂ 'ರ' ಕಾರ ಬರೋದಿಲ್ಲ. ಅವಳ ಮಾತೂ ನಿಮಗೆ ತಿಳಿಯು ವುದು ಕಷ್ಟ.. ಇನ್ನು ನೀವುಂಟು ಅವಳುಂಟು.. ಅವಳ ಹೆಸರು ಮೃದುಲಾ."

.."ಮೃದುಲಾ"...."ಮೃದುಲಾ".... ಒಂದೆರಡು ಬಾರಿ ಬಾಯಿಯಲಿ ಗುಣಗುಣಿಸಿ ದರು ಶಿವಣ್ಣ ಮಾಸ್ತ್ರು !

ಏನು ಚೆಲುವಿನ ಹೆಸರು ! ಹೆಸರಿಗೆ ಒಪ್ಪುವ ಮಗುವಿದು ; ಮಗುವಿಗೆ ಒಪ್ಪುವ ಹೆಸರದು !

ಅವರ ಅಂತಃಕರಣ ಉಕ್ಕಿ ಬಂದು, ಆ ಮಗುವಿನ ಮುದ್ದಾದ ಗಲ್ಲಕ್ಕೆ ಮುತ್ತಿಟ್ಟರು.

*

ದಿನಗಳು ಸಾಗುತ್ತಲೇ ಇವೆ.. ಶಿವಣ್ಣನ ಬರಡಾದ ಹೃದಯದಲ್ಲಿ..ಮೃದುಲೆಯ ಮೃದು ಮಾತು ತುಂಬಿ, ಅವರ ಜೀವನಕ್ಕೆ ಒಂದು

ಸೊಂಪು ತಂದಿದೆ. ಅವರೀಗ ಸ್ಕೂಲಿನಿಂದ ಬರಲು ತಡಮಾಡುವಂತಿಲ್ಲ !

ಪದ್ಮಮ್ಮ ಮನೆಯಲ್ಲಿ ಏನೇ ತಿಂಡಿ ತೀರ್ಥ ಮಾಡಿದರೂ ಮೃದುಲೆಯನ್ನು ಬಿಟ್ಟು ತಿನ್ನುವಂತಿಲ್ಲ ! ಮೃದುಲೆಯ ದಿನದ ಬಹು ಸಮಯ ಪದ್ಮಮ್ಮನ ಕಣ್ಣೆದುರೇ ಕಳೆಯುತ್ತಿದೆ. ಅವಳ ಬೆಕ್ಕಿನ ಮರಿ ಈಗ ಅಲ್ಲೂ ಓಡಾಡುತ್ತಿದೆ. ಮೃದುಲೆಯ ಮಾತಿನೊಂದಿಗೆ ಅದು ತನ್ನ " ಮೀಯಾಂ ಮೀಯಾಂ " ಎನ್ನುವ ಸ್ವರ ಸೇರಿಸುತ್ತಿದೆ.

ಸತಿ-ಪತಿಗಳಿಬ್ಬರಲ್ಲೂ ಹೊಸ ಉತ್ಸಾಹ ಮೂಡಿಸಿದ್ದಳು, ಪುಟ್ಟ ಮೃದುಲಾ !

..ಅವಳಿಗೆ ಗಂಟೆಗಟ್ಟಲೆ ಪಾಠ ಹೇಳುತ್ತ ಕುಳಿತ ಶಿವಣ್ಣನನ್ನು ಜಾನಕಮ್ಮ ಎಬ್ಬಿಸಿದಾಗ, ಮನಸ್ಸಿಲ್ಲದ ಮನದಿಂದ ಹೊರಟುಹೋಗುತ್ತಿದ್ದರು. ಇಷ್ಟು ಸುಖಕ್ಕೆ ತೃಪ್ತಿಹೊಂದಿತ್ತು ಶಿವಣ್ಣನ ಮನಸ್ಸು.

.. ಅಂದು ಶಾಲೆಯಲ್ಲಿ ಮಕ್ಕಳಿಗೆ ಟೈಫಾಯಿಡ್ ಇಂಜೆಕ್ಷನ್ ಚುಚ್ಚಿಸಿ, ಮನೆಯ ದಾರಿ ಹಿಡಿದಾಗ ಶಿವಣ್ಣನಿಗೆ ಕತ್ತಲಾದುದು ಕಂಡು ಬಂತು.

ದಿನದಂತೆ ಸ್ವಾಗತಿಸಲು ಮಡದಿ ಬಾಗಿಲಲ್ಲಿ ನಿಂತಿರಲಿಲ್ಲ....

ಮನೆಯಲ್ಲಿ ಕತ್ತಲೆ ತುಂಬಿತ್ತು..

—ಇದು ಶಿವಣ್ಣನಿಗೆ ಹೊಸದು! ಮನಸ್ಸಿನಲ್ಲಿ ಏನೇನೋ ಭಾವನೆಗಳು ಬಂದು ಹೋದವು.

ಮನೆಯೊಳಕ್ಕೆ ಕಾಲಿಟ್ಟರೂ ಅವರಾಕೆಯ ಸುಳಿವಿಲ್ಲ..

"ಪದ್ಮಾ....ಪದ್ಮಾ...."

ಒಂದೇ ಸಾರಿಗೆ ಎರಡೆರಡು ಬಾರಿ ಕರೆದರು.

"ಓ....ಇಲ್ಲಿದ್ದೇನೆ...."

ಪದ್ಮಮ್ಮ ತೀರ ಸೋತವರಂತೆ ನುಡಿದರು.

ಶಿವಣ್ಣ ಒಳಗೆ ಬಂದು ನೋಡಿದಾಗ ಹಾಸಿಗೆಯಲ್ಲಿ ಬಿದ್ದುಕೊಂಡಿದ್ದರು ಪದ್ಮಮ್ಮ.

.... ಮೈ ಕಾದು ಕೆಂಡವಾಗಿತ್ತು. ಹಿಂದೆಂದೂ ಕಾಯಿಲೆಯಿಂದ ಹೀಗೆ ಮಲಗಿದವರಲ್ಲ.

ಶಿವಣ್ಣನ ಕಾಲಿನ ಬಲವೇ ಕುಗ್ಗಿದಂತೆನಿಸಿ, ಅಲ್ಲೇ ಕುಸಿದರು.

. . . ಮಕ್ಕಳಿಲ್ಲವೆಂದು ತನ್ನಾತನೆಲ್ಲಿ ನೊಂದುಕೊಳ್ಳುವರೊ ? ಎಂದು ಪದ್ಮಮ್ಮ ತಮ್ಮ ನೀಗಲಾರದ ದುಃಖವನ್ನು ಮರೆ ಮಾಡಿ, ಪತಿಯೆದುರು ನಗುತ್ತಲೇ ಇರುವರು.... ಪತಿಯ ಸುಖ-ದುಃಖದಲ್ಲಿ ಸಮಭಾಗಿಯಾಗಿ ನಡೆದುಕೊಂಡವರು.. ತಾನಿಂದು ಹೀಗೆ ಹಾಸಿಗೆ ಹಿಡಿದರೆ! ತನ್ನಾತನ ಹೃದಯಕ್ಕೆ ಎಂಥ ಪೆಟ್ಟು ಬಿದ್ದೀತೆನ್ನುವ ಯೋಚನೆ ಪದ್ಮಮ್ಮನನ್ನು ಗಾಸಿ ಮಾಡಿತ್ತು.

ಶಿವಣ್ಣ ಇಡಿಯ ಜಗತ್ತನ್ನೆ ಮರೆತರು.... ಸ್ಕೂಲಿಗೂ ಕಾಲಿಳೆಯಲಿಲ್ಲ. ..ಆದರೆ ಪದ್ಮಮ್ಮ ಟೈಫಾಯಿಡಿಗೆ ಬಲಿಯಾದರು.... ಶಿವಣ್ಣನಿಗೆ ಜಗತ್ತೇ ಶೂನ್ಯವೆನಿಸಿತು....

ಪದ್ಮಮ್ಮನಿಲ್ಲದ ಅವರ ಬಾಳು ಬರಿದಾಯಿತು. ದೂರ..ದೂರ..ಓಡಿಬಿಡಬೇಕೆಂದೆನಿಸಿತು.

ಜಾನಕಮ್ಮನ ಮನೆಗೆ ಹೋದಾಗ ಮೃದುಲೆ ಪದ್ಮಮ್ಮನನ್ನು ನೆನೆದು, ಶಿವಣ್ಣಮಾಸ್ತರನ್ನು ಅಪ್ಪಿಕೊಂಡು ಅತ್ತುಬಿಟ್ಟಿತು.

ಶಿವಣ್ಣ ಅಲುಗಾಡದೆ ಕುಳಿತಿದ್ದರು .... ಮಾತಿಲ್ಲ-ಕತೆಯಿಲ್ಲ....

ಜಾನಕಮ್ಮ ಬಂದ ದುಃಖವನ್ನು ಹತ್ತಿಕ್ಕಿ, ಮೃದುಲೆಯನ್ನು ಸಂತೈಸತೊಡಗಿದರು.

....ಮಾರನೆ ದಿನ ಶಿವಣ್ಣ ಮಾಸ್ತ್ರ ಮನೆ ಬರಿದಾಗಿತ್ತು ! ಎಲ್ಲೆಡೆಯಲ್ಲೂ ಜಾನಕಮ್ಮ ಹುಡುಕಿಸಿದರು. ಮೃದುಲೆಯ ರೋದನ ಅವರೆದೆಯನ್ನು ಹಿಂಡಿಬಿಟ್ಟಿತ್ತು. ಆದರೆ....ಎಲ್ಲವೂ ನೀರವ.

ಶಿವಣ್ಣ ಮಾಸ್ತ್ರು....ಬರಲೇ ಇಲ್ಲ!

*

ಒಂದೇ ಬಾರಿಗೆ ಎದ್ದ ತೆರೆಗಳು ಹಾಗೇ ಎದ್ದಂತೆ ಮರೆಯಾದವು. ಈಗ ತಾನು ನಿಂತಿರುವ

ಸ್ಥಳ, ಕಾಲ ಯಾವುದೆಂದು..ಶಿವಣ್ಣ ಮಾಸ್ಟ್ರ ಅರಿವಿಗೆ ಬಂತು.

....ಈಗ ತಾನು ಹೇಗಾಗಿರುವೆ?...ಅದೇ... ಆ ಹಿಂದಿನ "ಶಿವಣ್ಣ ಮಾಸ್ಟ್ರು" ಎಂದರೆ ನಂಬಬಹುದೇ ಊರ ಜನ ?....

ಊರು ಬಿಟ್ಟು ಹೊರಟಾಗ ಇನ್ನೂ ಏರು ಜವ್ವನದ ಥಷ್ಟಪುಷ್ಟ ದೇಹ! ಒಪ್ಪ ಓರಣವಾಗಿದ್ದ ವೇಷಭೂಷಣ!

....ಅದೇ ಈಗ ?

....ನಸು ಬಾಗಿದ ಬೆನ್ನು! ನೆರೆತ ತಲೆಗೂದಲು! ಸುಕ್ಕುಗಟ್ಟಿದ ಮುಖ! ತನ್ನ ಭಾರವನ್ನು ಬೆತ್ತದ ಮೇಲೆ ಹಾಕಿರುವ ದೇಹ! ಮನಸ್ಸನ್ನು ಕವಿದಿದ್ದ ನಿರುತ್ಸಾಹ....ಅವರ ವಯಸ್ಸಿನ ಮೇರೆಯನ್ನು ಕೈಮಾಡಿ ತೋರಿಸುತ್ತಿತ್ತು.

—ಶಿವಣ್ಣ ಕೋಣೆಯೊಳಗಿಟ್ಟ ಕಾಲುಗಳನ್ನು ಹಿಂದೆಗೆದುಬಿಟ್ಟರು.

ಒಳಗಿನಿಂದಲೇ ಇದೆಲ್ಲವನ್ನೂ ನೋಡುತ್ತಿದ್ದ ಜಾನಕಮ್ಮನಿಗೆ ಶಿವಣ್ಣ ಮಾಸ್ಟ್ರನ್ನು ಕಂಡಾಗ ಎದೆ ಧಸಕ್ಕೆಂದಿತು.

—ಎಂಥ ಮಾರ್ಪಾಡು!

....ತನಗೂ ಪ್ರಾಯ ಸಂದಿದೆ. ಆದರೆ ಶಿವಣ್ಣ ಗುರುತು ಹಿಡಿಯಲೂ ಬಾರದಷ್ಟು ಬದಲಾಗಿದ್ದಾರೆ. ಆ ನಡಿಗೆ, ಮುಖದಲ್ಲಿ ಜೋಡುಚಿಲುಮೆಯಂತಿರುವ ಕಣ್ಣಿನ ದೃಷ್ಟಿಯಿಂದ ಮಾತ್ರ ಶಿವಣ್ಣ ಮಾಸ್ಟ್ರನ್ನು ಗುರುತಿಸಬಹುದಾಗಿದೆ.

"..ಏನು ಶಿವಣ್ಣ.. ಊರ ನೆನಪು ಈಗಲಾದರೂ ಆಯಿತೇ?"

"ಈ ಮನೆ ನೆನಪಾಯಿತು—ಅಂತ ಬಂದೆ.. ಆದರೆ ಇಷ್ಟು ವರುಷಗಳ ಮೇಲಾದರೂ ನನ್ನ ಗುರುತು ಹಿಡಿದಿರಲ್ಲ ಜಾನಕಮ್ಮ?"

..ತನ್ನ ಗುರುತು ಹಿಡಿದ ಜಾನಕಮ್ಮನನ್ನು ಕಂಡು ಶಿವಣ್ಣನ ಕಣ್ಣುಗಳಿಂದ ಕಂಬನಿ ಜಾರಿತು.

"ಶಿವಣ್ಣಾ, ನಿಮ್ಮನ್ನು ಮರೆಯುವುದು ಈ ಜನ್ಮದಲ್ಲಿ ಸಾಧ್ಯವೆ? ನೀವು ಹೋದ ರಾತ್ರಿ ನಮ್ಮ ಮೃದುಲೆಯನ್ನು ಹಿಡಿಯುವುದು ಎಂಥ ಕಷ್ಟವಾಗಿತ್ತು!"

—ಜಾನಕಮ್ಮನ ಮಾತಿನಲ್ಲಿ ಅವರು ಈ ವರೆಗೂ ನುಂಗಿದ ದುಃಖದ ಶಾಖ ಶಿವಣ್ಣನಿಗೆ ತಾಕಿದಂತಾಯಿತು.

"ಹೌದಮ್ಮ.. ನಾನು ಹುಚ್ಚು ಹಿಡಿದವನಂತೆ ಊರೂರು ಅಲೆದೆ.... ಮೃದುಲೆಯ ನೆನಪು.. ಆಗದೆ ಹೋಗಲಿಲ್ಲ. ಮತ್ತೆ ಮೋಹದಲ್ಲಿ ಬೀಳಬಾರದೆಂದೇ ಇಷ್ಟು ವರುಷಗಳ ದೀರ್ಘ ಅವಧಿ ಕಳೆದೆ! ಆದರೂ ಮೃದುಲೆಯನ್ನು ಮರೆಯಲಾಗಲಿಲ್ಲ!"

ಕಣ್ಣೀರು ಒರಸುತ್ತ ಶಿವಣ್ಣ ನುಡಿದರು.

"ದಣಿದು ಬಂದಿದ್ದೀರಿ.... ಏನಾದರೂ ಮೊದಲು ಉಪಹಾರ ತೆಗೆದುಕೊಂಡು ವಿಶ್ರಮಿಸಿಕೊಳ್ಳಿ."

—ಇಷ್ಟು ನುಡಿದು ಜಾನಕಮ್ಮ ಒಳಗೆ ಹೊರಟರು.

ಶಿವಣ್ಣನಿಗೆ ಉಪಹಾರ-ವಿಶ್ರಾಂತಿ ಯಾವುದೂ ಬೇಕಿರಲಿಲ್ಲ!.. ಅವರ ಹಸಿದ ಹೃದಯಕ್ಕೆ.. ಮೃದುಲೆಯ ನೆನಪು ಬೇಕಿತ್ತು! ಹೊರಟಿದ್ದ ಜಾನಕಮ್ಮನನ್ನು ಅಲ್ಲೆ ತಡೆದು ನಿಲ್ಲಿಸಿ,

"ಮೊದಲು ನನ್ನ ಮೃದುಲೆಯ ವಿಷಯ ವಿವರವಾಗಿ ತಿಳಿಸಿ....ಅದೇ ನನ್ನ ದಣಿವಿಗೆ ಪರಿಹಾರವಾದೀತು."

"ಏನು ಹೇಳಲಿ ಶಿವಣ್ಣಾ..? ಮೃದುಲೆಯ ಅದೃಷ್ಟಕ್ಕೆ ಏನು ಕೊರತೆ ಇತ್ತು?.. ಆದರೆ ನನ್ನ ದುರದೃಷ್ಟಕ್ಕೆ ಯಾರು ಏನು ಮಾಡಿಯಾರು ಹೇಳಿ, ಶಿವಣ್ಣಾ?"

ಜಾನಕಮ್ಮ ಈ ವರೆಗೆ ತಡೆಹಿಡಿದಿದ್ದ ಕಣ್ಣೀರಿಗೆ ದಾರಿಯಾಯಿತು. ಶಿವಣ್ಣನ ಮನಸ್ಸು ಹಗುರಾಗಿ ತಿಳಿಯಾಗತೊಡಗಿತ್ತು. ಆದರೆ ಈ ಮಾತಿನಿಂದ ನೊಂದುಕೊಂಡ ಅವರು,

"ಏನು ಹೇಳಿ ಜಾನಕಮ್ಮ? ನನ್ನ ಮೃದು

ಲೆಗೆ ಮದುವೆಯಾಗಿಲ್ಲವೇ ?"

"ಮದುವೆಯಾಗಿತ್ತು.. ರತಿ-ಮನ್ಮಥರ ಜೋಡಿ ಎಂದರು ಜನರೆಲ್ಲ. ಸುಖ-ಸಂಪತ್ತಿಗೆ ಕಡಿಮೆ ಇರಲಿಲ್ಲ. ಆದರೆ ಮೊದಲ ಹೆರಿಗೆಯಲ್ಲಿ ಕಣ್ಣು ಮುಚ್ಚಿದಳು.."

ಜಾನಕಮ್ಮ ಬಿಕ್ಕಿಬಿಕ್ಕಿ ಅತ್ತುಬಿಟ್ಟರು.

ಶಿವಣ್ಣ ಕಲ್ಲುಗೊಂಬೆಯಂತೆ ಕುಳಿತುಬಿಟ್ಟಿದ್ದಾರೆ. ಕಣ್ಣಿನಲ್ಲಿ ಒಂದೇ ಒಂದು ಹನಿಯೂ ಇಲ್ಲ.

ಜಾನಕಮ್ಮ ಎಷ್ಟೋ ಸಮಯ ಕಾದರು.. ಶಿವಣ್ಣ ಕುಳಿತಲ್ಲಿಂದ ಏಳಲಿಲ್ಲ. ಏಳುವ ಲಕ್ಷಣವೂ ಕಂಡುಬರಲಿಲ್ಲ !

ಜಾನಕಮ್ಮ ಏನೊ ನೆನಪಿಸಿಕೊಂಡು,

"ಶಿವಣ್ಣ, ಮೃದುಲೆಯ ಮಗಳು ರೂಪಾ ಒಳಗಿದ್ದಾಳೆ. ನೋಡುತ್ತೀರಾ ?" ಎಂದರು.

ಶಿವಣ್ಣ ತುಟಿ ಎರಡು ಮಾಡಲಿಲ್ಲ.

ಅಷ್ಟರಲ್ಲಿ ಮತ್ತೆ ಒಳಗಿಂದ ಹಾಡುವ ಸ್ವರ ಕೇಳಬಂತು :

**ಜೋ ಜೋ ಶೀ ಕೃಷ್ಣ । ಪರಮಾನಂದಾ ।**
**ನಂದ ಗೋಪಿಯ ಕಂದ । ಕಂದ**
**ಮುಕುಂದಾ ॥ ಜೋ ಜೋ ॥**

ಕುಳಿತಿದ್ದ ಶಿವಣ್ಣ ಒಮ್ಮೆಲೇ ಎದ್ದು ನಿಂತರು. ಕೋಣೆಯೊಳಕ್ಕೆ ಕಾಲಿರಿಸಿದರು.

ಅದೇ ಪ್ರಾಯ ! ಅದೇ ನೋಟ ! ಅದೇ ಚೆಲುವು ! ಎಲ್ಲವೂ ಅವಳದೇ !

ಪುಟ್ಟ ಹುಡುಗಿ ತೊಟ್ಟಿಲು ತೂಗುತಿತ್ತು !

ಬಿಳಿಯ ಬೆಕ್ಕಿನಮರಿ ಒಳಗೆ ನಿದ್ರಿಸುತ್ತಿತ್ತು !

ಶಿವಣ್ಣನ ಜೀವವನ್ನೇ ಯಾರೊ ಎಳೆದಂತಾಯಿತು.

.."ನನ್ನ ಮೃದುಲಾ" ಎಂದವರೇ ರೂಪಾನ್ನ ತಬ್ಬಿಕೊಂಡು ಎದೆಗವಚಿ ಮುತ್ತಿಟ್ಟರು ಶಿವಣ್ಣ ! *



## ಪ್ರಥಮ ಪರೀಕ್ಷೆ

ಪ್ರಾಚೀನ ಗ್ರೀಕ್ ದೇಶದ ವೀರರಲ್ಲಿ ಅತಿ ವೀರರೂ ಶೂರರೂ ಶಿಸ್ತಿನವರೂ ಆದವರೆಂದರೆ ಸ್ಪಾರ್ಟಾ ರಾಜ್ಯದವರು.

ಇತಿಹಾಸಕಾರ ಹೆರೋಡೋಟಸನ ಹೇಳಿಕೆಯ ಪ್ರಕಾರ ಅವರ ಈ ಗಂಡಸುತನಕ್ಕೆ ಕಾರಣ ಅವರ ನ್ಯಾಯಶಾಸ್ತ್ರಿ ಲೈಕರ್ಗಸನು ಪ್ರಾರಂಭಿಸಿದ ಸಂಪ್ರದಾಯ. ಹೊಸದಾಗಿ ಹುಟ್ಟಿದ ಪ್ರತಿಯೊಂದು ಮಗುವನ್ನು ಹೊಲದಲ್ಲಿ ಇಟ್ಟುಬರಬೇಕೆಂದು ಆತ ವಿಧಿಸಿದ್ದ. ಈ ಪರೀಕ್ಷೆಯಲ್ಲಿ ಬದುಕಿದ ಮಕ್ಕಳನ್ನು ಶೌರ್ಯ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದವೆಂದು ಭಾವಿಸಿ ಅವುಗಳನ್ನು ಯುದ್ಧಕಲೆಯಲ್ಲಿ ತರಬೇತು ಮಾಡಲಾಗುತ್ತಿತ್ತು.

---

## ತಿದ್ದುಪಡಿ

ಮಾರ್ಚ್ ತಿಂಗಳ ಕಸ್ತೂರಿಯಲ್ಲಿ ಪ್ರಕಟವಾದ 'ಇರವನ್' ಎಂಬ ಪುಸ್ತಕವಿಭಾಗವನ್ನು ಸಂಗ್ರಹಿಸಿದವರು ಶ್ರೀ ಎಮ್. ಟಿ. ಸುಬ್ರಹ್ಮಣ್ಯ ಇವರು. ಕಣ್ಣು ತಪ್ಪಿ ಅವರ ಹೆಸರು ಪ್ರಕಟವಾಗದೆ ಉಳಿಯಿತು. ಅದಕ್ಕಾಗಿ ವಿಷಾದಿಸುತ್ತೇವೆ. — ಸಂ.

# ಇದುವೆ ಜೀವ, ಇದು ಜೀವನ

ಆಗ ನಾವು ಕಡೂರಿನಲ್ಲಿ ಎಸ್. ಎಸ್. ಎಲ್. ಸಿ. ಪರೀಕ್ಷೆಗಾಗಿ ಓದುತ್ತಿದ್ದೆವು. ಸಹವ್ಯಾಸಂಗದ ಫಲ ಪಡೆಯಲು ಒಂದು ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡು ಇರತೊಡಗಿದೆವು. ಪರೀಕ್ಷೆ ಮುಗಿಯಿತು. ರಜೆ ಬಂದಿತು. ರಜೆಯಲ್ಲಿ ನನಗೆ ಅವಸರ ಕೆಲಸವಿದ್ದುದರಿಂದ ಬೇಗ ನಮ್ಮೂರಿಗೆ ಹೋಗಿಬಿಟ್ಟೆ. ನನ್ನ ಸಾಮಾನುಗಳನ್ನು, ಒಂದು ಪೆಟ್ಟಿಗೆಯನ್ನು ಕಡೂರಿನಲ್ಲಿಯೇ ಬಿಟ್ಟು ಹೋಗಿದ್ದೆ. ಊರಿನಿಂದ ಹಿಂದಿರುಗಿ ಬಂದು ನೋಡಲು ಕೋಣೆಗೆ ಬೀಗ ಹಾಕಿತ್ತು. ವಿಚಾರಿಸಲು ನನ್ನ ಸ್ನೇಹಿತರೆಲ್ಲರೂ ಕೋಣೆಯ ಬಾಡಿಗೆ ತೀರಿಸಿ, ಖಾಲಿ ಮಾಡಿ ತಮ್ಮ ಊರಿಗೆ ಹೊರಟು ಹೋದರೆಂದು ತಿಳಿಯಿತು. ನನ್ನ ಪೆಟ್ಟಿಗೆಯಲ್ಲಿದ್ದ ಪದಾರ್ಥವೊಂದು ನನಗೆ ಅಗತ್ಯ ಬೇಕಾಗಿತ್ತು. ಆದರೆ ಪೆಟ್ಟಿಗೆಯೆಲ್ಲಿ? ಅದು ತುಂಬ ಭಾರವಿದ್ದುದರಿಂದ, ನನ್ನ ಮಿತ್ರರು ತಮ್ಮ ಸಾಮಾನಿನೊಡನೆ ಅದನ್ನು ಒಯ್ಯುವುದು ಕಷ್ಟಸಾಧ್ಯವಾಗಿತ್ತು. ಅದು ಕಡೂರಿನಲ್ಲಿಯೇ ಯಾರ ಮನೆಯಲ್ಲೋ ಇರಬೇಕೆಂದು ಊಹಿಸಿ ಅದರ ಪತ್ತೆಗೆ ತೊಡಗಿದೆ. ನನ್ನ ಆ ಮಿತ್ರರಲ್ಲೊಬ್ಬ, ಶ್ರೀನಿವಾಸನ ಸಂಬಂಧಿಗಳು ಆ ಊರಿನಲ್ಲಿಯೇ ಇದ್ದರು. ಅವರನ್ನು ನೋಡಿದ್ದೆ. ಹೆಸರು ತಿಳಿದಿರಲಿಲ್ಲ. ಮನೆ ನೋಡಿರಲಿಲ್ಲ.

ಆ ದಿನ ರಾತ್ರಿ ನನ್ನ ಪರಿಚಯಸ್ಥರೊಬ್ಬರ ಮನೆಯಲ್ಲಿ ಮಲಗಿದ್ದು, ಮಾರನೇ ದಿನ ಅವರ ಕಚೇರಿಯ ಕಾವಲಿಗೆ ಹೋದೆ. ಕೊನೆಗೆ ಅವರು ಸಿಕ್ಕರು. ಮನೆಗೆ ಕರೆದುಕೊಂಡು ಹೋಗಿ ಪೆಟ್ಟಿಗೆಯನ್ನು ಕೊಟ್ಟರು. ಪೆಟ್ಟಿಗೆ ಅವರಲ್ಲಿಯೇ ಇತ್ತು.

ಪೆಟ್ಟಿಗಯ ಬಾಗಿಲು ತೆರೆದು ನೋಡಿದೆ. ಸಂದಿನಿಂದ ಒಳಗೆ ತೂರಿಸಲ್ಪಟ್ಟದ್ದ ಒಂದು ಕಾಗದ ಸಿಕ್ಕಿತು. ಅದರಲ್ಲಿ ಹೀಗಿತ್ತು :

“ ವೆಂಕಟೇಶ ,

ನಿನ್ನ ಪೆಟ್ಟಿಗೆಯನ್ನು ನನ್ನ ನೆಂಟರಾದ ಗೋಪಾಲರಾಯರ ವಶಕ್ಕೆ ಕೊಟ್ಟಿದ್ದೇನೆ. ಅವರ ಮನೆ, ಪೋಸ್ಟಾಫೀಸ್ ಬೀದಿಯಲ್ಲಿದೆ. ಮನೆ ನಂಬರು A. 113. ಹೋಗಿ ತೆಗೆದುಕೊ.

“ ಇನ್ನೇನೂ ವಿಶೇಷವಿಲ್ಲ.

ಇತಿ,

ಶ್ರೀನಿವಾಸ.”

— ಎಚ್. ವೆಂಕಟೇಶ

ಮಧ್ಯಾಹ್ನದ ಮೂರು ಗಂಟೆಯ ಉರಿಬಿಸಿಲಿನಲ್ಲಿ ಕೈಯಲ್ಲಿ ಒಂದು ಹಾಸಿಗೆ ಸುರುಳಿ ಹಿಡಿದ ಸುಮಾರು ೬೫ ವರ್ಷದ ಹಿರಿಯರೊಬ್ಬರು ಹೆಂಡತಿ ಹಾಗೂ ಹತ್ತು ವರ್ಷದ ಮೊಮ್ಮಗನನ್ನು ಕೂಡಿಕೊಂಡು ಸಿಟಿ ಮಾರ್ಕೆಟಿನ ಬಸ್‌ಸ್ಟ್ಯಾಂಡ್ ಬಳಿಯಲ್ಲಿ, ಅವರಿವರನ್ನು ಏನೇನೋ ವಿಚಾರಿಸುತ್ತ ತಿರುಗಾಡುತ್ತಿದ್ದರು. ಗಾಬರಿಗೊಂಡ ಮುಖ; ಏನೋ ಆಪತ್ತಿನಲ್ಲಿದ್ದಂತೆ ನೋಡಿದವರಿಗೆ ಅನಿಸುತ್ತಿತ್ತು. ಅಲ್ಲಿಯೇ ನಿಂತಿದ್ದ ನನ್ನ ಬಳಿಗೆ ಬಂದು ಹೇಳಿದರು:

"ನಾನು ಇಲ್ಲಿಯೇ ಸಮೀಪದ.. ನಗರದವ. ಆರಾಧನೆಗೆಂದು ಇವರನ್ನು ಕರೆದುಕೊಂಡು ಬಂದೆ..ಕಾಲಸಿಯ ಬಸ್ಸಿಗಾಗಿ ಕಾದಿದ್ದಾಗ ಯಾರೋ ಜೇಬಿನಲ್ಲಿಯ ಪರ್ಸು ಹಾರಿಸಿದರು. ೩೫ ರೂಪಾಯಿ ಹೋಯಿತು. ಏನು ಮಾಡಬೇಕೆಂಬುದು ತೋಚಲೊಲ್ಲದು.." ನನ್ನ ಮುಖವನ್ನು ಒಂದು ಕ್ಷಣ ನೋಡುತ್ತ ನಿಂತರು. ಅವರು ಹೇಳಿದ್ದು ನಿಜವೇ ಸುಳ್ಳೇ ಎಂದು ಯೋಚಿಸುವುದಕ್ಕೂ ವ್ಯವಧಾನವಿಲ್ಲ. ನನ್ನ ಅಭಿಪ್ರಾಯ ಅವರಿಗೆ ಹೇಳಿ ಕೈಯಲ್ಲಿ ಎರಡು ರೂಪಾಯಿ ಕೊಟ್ಟೆ. ನನ್ನ ವಿಳಾಸ ಕೇಳಿ ತೆಗೆದುಕೊಂಡರು.

ರಾತ್ರಿ ಊಟಕ್ಕೆ ಕುಳಿತಾಗ ಈ ಸಂಗತಿಯನ್ನು ಕೇಳಿ ನನ್ನಾಕೆ "ಸರಿ. ಒಳ್ಳೆಯ ಕೆಲಸ ಮಾಡಿದಿರಿ. ನಾವು ಆರಾಧನೆಗೆ ಹೋಗಿ ನಾಲ್ಕು ಕಾಸು ಹಾಕಲಿಲ್ಲ! ಹಾಗೆ ದೇವರಿಗೆ ಹೋಗದ್ದು ಹೀಗೆ ಹೋಯಿತು" ಎಂದಳು. ಆರು ವರ್ಷದ ನನ್ನ ಮಗು "ದೇವರಿಗೆ ಕೊಟ್ಟ ದುಡ್ಡು ತಿರುಗಿ ಸಿಕ್ಕುತ್ತೆಯೇ?'' ಎಂದ. "ಹೂಂ" ಎಂದು ತಲೆ ಅಲ್ಲಾಡಿಸಿದೆ.

ಕೆಲ ತಿಂಗಳ ನಂತರ ಮಾರ್ಕೆಟ್ಟಿನಿಂದ ಮನೆಗೆ ಬರುತ್ತಿದ್ದಾಗ ಬಳಿಯಲ್ಲಿಯೇ ಒಬ್ಬನು ಬೆತ್ತದ ಸಾಮಾನು ಮಾರುತ್ತಿದ್ದದ್ದು ಕಂಡಿತು. ಅದರಲ್ಲಿಯ ಹೂವಿನ ಬುಟ್ಟಿ ಬಹಳ ಸುಂದರವಾಗಿತ್ತು. ಕೊಳ್ಳಲು ಹೋದೆ. ಪರ್ಸು ತೆಗೆದು ನೋಡಿದಾಗ ಎರಡು ರೂಪಾಯಿ ಕಡಿಮೆ! ಇನ್ನೊಮ್ಮೆ ಕೊಂಡರಾಯಿತೆಂದು ಹೇಳಿ ಹಿಂತಿರುಗುವುದರಲ್ಲಿದ್ದೆ.

"ಸಾರ್!" ಕೆಲವು ತಿಂಗಳ ಹಿಂದೆ ಆರಾಧನೆಗೆ ಬಂದಿದ್ದ ಅದೇ ಮುದುಕರು. ನನ್ನ ಹತ್ತರ ಬಂದು, "ಕ್ಷಮಿಸಬೇಕು ಸಾರ್. ನೀವು ಕೊಟ್ಟ ಎಡ್ರೆಸ್ ಕಳೆದು ಹೋಯಿತು....ನಿಮ್ಮನ್ನು ಕಂಡು ನಿಮ್ಮ ಸಹಾಯದ ಋಣ ಎಂದು ತೀರಿಸಬಲ್ಲೆನೋ ಎಂದು ಚಡಪಡಿಸುತ್ತಿದ್ದೆ. ...ನಿಮ್ಮ ಹೇಳಿಕೆಯಂತೆ ವೈರ್ ಮಾಡಿ ಮರುದಿನವೇ ದುಡ್ಡು ತರಿಸಿಕೊಂಡೆ," ಎಂದು ನನ್ನ ಎರಡು ರೂಪಾಯಿ ಕೊಟ್ಟರು. ಅವರನ್ನು ಬಲವಂತದಿಂದ ಆ ರಾತ್ರಿ ಮನೆಗೆ ಕರೆದುಕೊಂಡು ಹೋದೆ. ಬೆತ್ತದ ಬುಟ್ಟಿಯನ್ನು ಕೊಂಡುಕೊಂಡೇ ನಡೆದೆ.

ಆ ಬೆತ್ತದ ಬುಟ್ಟಿಯನ್ನು ನೋಡಿ ನನ್ನಾಕೆಗೆ ಬಲು ಹಿಗ್ಗು. "ಇದು ಎಲ್ಲಿಯದು?" ಎಂದಳು. "ದೇವರು ಕೊಟ್ಟದ್ದು" ಎಂದೆ.

— ನೆಂ. ಬೆಂಗಳೂರು

ಬೆಂಗಳೂರಿನಲ್ಲಂತೂ ಗಂಡಸರು ಮಾಡಬಲ್ಲದ್ದನ್ನೆಲ್ಲ ಹೆಂಗಸರೂ ಮಾಡಬಲ್ಲರೆಂದು ತೋರಿಸಲು ಸಿದ್ಧರಾದ ಮಹಿಳೆಯರಿದ್ದಾರೆಂದು ತೋರಿಸುವ ಒಂದು ಘಟನೆ ಮೊನ್ನೆ ಸಂಭವಿಸಿತು.

ನಾವು ಕೆಲ ಗೆಳೆಯರು ಒಂದು ಬಸ್ಸು ಹತ್ತಿ ಕುಳಿತಿದ್ದೆವು. ನಮ್ಮ ಸೀಟಿನ ತುದಿಯಲ್ಲಿ ಸುಶಿಕ್ಷಿತಳ ಹಾಗೆ ಕಾಣುವ, ಬೆಲೆಬಾಳುವ ಬಟ್ಟೆ ಧರಿಸಿದ ತರುಣಿಯೊಬ್ಬಳು ಸ್ವಲ್ಪ ಮುದುಡಿ ಕುಳಿತಿದ್ದಳು. ಹೆಂಗಸರಿಗೆ ಪ್ರತ್ಯೇಕ ವ್ಯವಸ್ಥೆಯಿರುವ ಬೆಂಗಳೂರು ಬಸ್ಸಿನಲ್ಲಿ ಗಂಡಸರ ಸೀಟಿಗೆ ದಾಳಿಯಿಟ್ಟ ಅವಳ ಆಧುನಿಕತೆ ನಮ್ಮನ್ನಾಕರ್ಷಿಸಿತು. ನಮ್ಮ ವ್ಯಂಗ್ಯ ಹರಟೆ ಅವಳನ್ನೇ ಲಕ್ಷಿಸಿ ಅನ್ಯೋಕ್ತಿ ರೂಪದಲ್ಲಿ ಹರಿಯತೊಡಗಿತು. ಅದರಿಂದ ರೋಸಿಯೋ ಎಂಬಂತೆ ಅವಳು ಅಲ್ಲಿಂದೆದ್ದು ಮೂರು ಸಾಲು ಮುಂದೆ ಹೋಗಿ ಇನ್ನೊಂದು

ಸೀಟಿನ ಖಾಲಿ ಸ್ಥಳವನ್ನು ಆಶ್ರಯಿಸಿದಳು.

ಅಷ್ಟರಲ್ಲಿ ಕಂಡಕ್ಟರ್ ಟಿಕೆಟ್ ಕೊಡುತ್ತ ಬಂದ. ನಮ್ಮ ಸಾಲು ಮುಗಿಸಿ ಮುಂದಿನ ಸಾಲಿಗೆ ಹೋದಾಗ ಆ ಸೀಟಿನ ಪ್ರಥಮ ಸ್ಥಾನದಲ್ಲಿದ್ದ ಒಬ್ಬ ತರುಣ ನಗುತ್ತ, ಆ ತರುಣಿಯ ಕಡೆ ಬೊಟ್ಟು ತೋರಿಸಿ "ಮುಂದಿನ ಸಾಲಿನಲ್ಲಿರುವ ನನ್ನ ಹೆಂಡತಿ ನನ್ನ ಟಿಕೇಟ್ ಕೊಳ್ಳುತ್ತಾಳೆ" ಎಂದ. ನಾವೆಲ್ಲ ಗಾಬರಿಯಾದೆವು.

ಆ ಸಾಲಿನಲ್ಲಿ ಟಿಕೇಟ್ ಕೊಡುವಾಗ ಆ ತರುಣಿ ಒಂದೇ ಟಿಕೇಟಿನ ಹಣ ಕೊಟ್ಟದ್ದು ನೋಡಿ ಕಂಡಕ್ಟರ್, "ಏನು ನಿಮ್ಮ ಯಜಮಾನರ ಟಿಕೇಟ್ ಕೊಳ್ಳಲು ಮರೆತಿರಾ?" ಎಂದು ಪರಿಹಾಸಪೂರ್ವಕ ಕೇಳಿದ. ಅವಳು ಸಿಡಿದೆದ್ದು, "ಎಲ್ಲಿಯ ಯಜಮಾನರು? ನನಗೆ ಮದುವೆಯೇ ಆಗಿಲ್ಲ. ತಮಾಷೆ ಮಾಡುತ್ತೀರಾ? ರಿಪೋರ್ಟ್ ಮಾಡ್ತೀನಿ'' ಎಂದು ಎಗರಾಡಿದಳು. ಕಂಡಕ್ಟರ್ ಪೆಚ್ಚಾಗಿ ಆ ತರುಣನನ್ನು ತೋರಿಸಿದ. ಯುವತಿ ಕ್ರೋಧದಿಂದ "ಶೇಮ್ ಶೇಮ್!" ಎಂದು ಇಂಗ್ಲೀಷಿನಲ್ಲಿ ಧಿಕ್ಕಾರ ಮಾಡಿದಳು.

ಬಸ್ಸಿನಲ್ಲಿದ್ದವರ ರೋಷವೆಲ್ಲ ತರುಣನ ಮೇಲೆ ತಿರುಗಿತು. ತರುಣ ಮಾತ್ರ ಹೆದರಲಿಲ್ಲ. "ನೋಡಿ, ಮನೆ ಬಿಟ್ಟು ಹೊರಡುವಾಗ ಖಂಡಿತ ನನ್ನ ಪರ್ಸು ನನ್ನ ಪ್ಯಾಂಟಿನ ಕಿಸೆಯಲ್ಲಿತ್ತು, ಈಗ ಇಲ್ಲ. ನನ್ನ ಹೆಂಡತಿ ಹೊರತು ಮತ್ತಾರೂ ನನ್ನ ಕಿಸೆಗೆ ಕೈ ಹಾಕುವುದಿಲ್ಲ. ಆದ್ದರಿಂದ ಅದು ಅವಳ ಹತ್ತಿರವೇ ಇರಬೇಕು. ನೋಡಿ ಬೇಕಾದರೆ" ಎಂದು ಅವಳನ್ನೇ ದಿಟ್ಟಿಸಿ ನಕ್ಕ. ಅವಳು "ಸುಳ್ಳು ಸುಳ್ಳು" ಎಂದು ಕೂಗುತ್ತಿದ್ದಂತೆಯೇ "ಹಾಗಾದರೆ ನೋಡಿರಿ" ಎನ್ನುತ್ತ ಅವಳ ಕೈಚೀಲವನ್ನು ಸೆಳೆದುಕೊಂಡು ಕ್ಷಣಾರ್ಧದಲ್ಲಿ ಒಂದು ಮನಿಪರ್ಸನ್ನು ಹೊರ ತೆಗೆದು ಕಂಡಕ್ಟರನ ಕೈಲಿ ಕೊಟ್ಟು "ಇದನ್ನು ತೆರೆದು ನೋಡಿ. ಅದರಲ್ಲಿ ನನ್ನ ಫೋಟೋ ಇದ್ದರೆ ಅದು ನನ್ನದೇ ಎಂದೊಪ್ಪಿ'' ಎಂದ.

ಆತ ಹೇಳಿದ್ದು ನಿಜವಾಗಿತ್ತು. ಆ ತರುಣಿ ತಲೆ ತಗ್ಗಿಸಿದಳು. ಬಸ್ಸೆಲ್ಲ ನಗು ತುಂಬಿತು. ತರುಣ ಅಲ್ಲಿಗೇ ಬಿಡದೆ, "ನೀವು ನನ್ನ ಹೆಂಡತಿಯಲ್ಲವೆ?" ಎಂದು ಕೇಳಿದ. ಅವಳು ಕ್ಷಮೆ ಬೇಡಿದಳು. ಆದರೆ ಆತ ಬಿಡಲಿಲ್ಲ. "ನೀವು ನನ್ನ ಹೆಂಡತಿಯೆಂದು ಇಷ್ಟು ಜನರ ಮುಂದೆ ಒಪ್ಪಬೇಕು. ಇಲ್ಲವೆ ಪೋಲೀಸ್ ಸ್ಟೇಶನ್ನಿಗೆ ಹೊರಡಬೇಕು'' ಎಂದು ಪಟ್ಟು ಹಿಡಿದ.

ಕಡೆಗೆ ಅವಳು ಎದ್ದು ನಿಂತು ಅವನಿಗೆ ಕೈ ಮುಗಿದು "ನಾನು ನಿಮ್ಮ ಹೆಂಡತಿ'' ಎಂದು ಹೇಳಿ ಹಾಗೇ ಬಸ್ಸಿನಿಂದಿಳಿದು ಕಣ್ಮರೆಯಾದಳು. ತರುಣ ಪಾಕೀಟನ್ನು ಮತ್ತೆ ಜೇಬಿಗೆ ತುರುಕಿದ.

— ಎಲ್. ಆರ್. ದೇಶಪಾಂಡೆ, ಗಲಗಲಿ



ಯಾರನ್ನಾದರೂ ಪರಮಸುಖಿಯಾಗಿ ಮಾಡಬೇಕೆನಿಸಿದಾಗ ದೇವರು ಮೊದಲು ಅವನ ಕತ್ತೆ ಕಳೆಯುವಂತೆ ಮಾಡಿ ಆ ಮೇಲೆ ಅದು ಮರಳಿ ಸಿಗುವಂತೆ ಮಾಡುತ್ತಾನೆ.

— ನಾಸರುದ್ದೀನ್ ಹೋಜಾ (ತುರ್ಕಿ ಸಂತ)

ಅದಕ್ಕಿಂತ ಉದಾತ್ತ ಚತುಷ್ಪಾದ
ಜಗತ್ತಿನಲ್ಲಿದ್ದಿರಲಾರದು

# ಹರಿ ಎಂಬ ಗಜರತ್ನ

ಶಿವಾಜಿ ಶಂಕರ ಕಾರ್ಲೇಕರ

ಸೌರಾಷ್ಟ್ರದ 'ಸಾವರಕುಂಡ' ಎಂಬ ಊರಿಗೆ ನೀವು ಹೋದರೆ ಊರಹೊರಗೆ ಅಮೃತಶಿಲೆಯ ಒಂದು ಸ್ಮಾರಕವನ್ನು ಕಾಣು ವಿರಿ. ಅದರ ಮೇಲೆ "ಕಾರ್ಲೇಕರ ಗ್ರ್ಯಾಂಡ್ ಸರ್ಕಸ್ಸಿನ ಗಜರತ್ನ ಹರಿ ಇಲ್ಲಿ ಚಿರಕಾಲ ನಿದ್ರಿ ಸುತ್ತಿದೆ" ಎಂದು ಬರೆದಿದೆ.

ಆ ಗುಣವಂತ ಗಜರತ್ನದ ಚೇತೋಹಾರಿ ಕತೆಯನ್ನೆ ನಾನೀಗ ಹೇಳುತ್ತೇನೆ. ಹರಿ ಹೆಸ ರಿಗೆ ತಕ್ಕಂತೆ ನಿಜವಾಗಿಯೂ ಪ್ರೇಕ್ಷಕರ ಮನ ಸ್ಸನ್ನು ಹರಣ ಮಾಡುತ್ತಿತ್ತು.

ನಾನು ಹುಟ್ಟಿದ ದಿನವೇ ನಮ್ಮ ಸರ್ಕಸ್ಸಿನಲ್ಲಿ ಹರಿ ಪ್ರವೇಶಿಸಿತು. ಅಂತೆಯೆ ಇರಬೇಕು, ನನ್ನ ತಂದೆ ಪ್ರೊ. ಶಂಕರರಾವ ಕಾರ್ಲೇಕರರು ಅದನ್ನು ಬಹಳ ಆತ್ಮೀಯವಾಗಿ ಪ್ರೀತಿಸುತ್ತಿದ್ದರು. ನಮ್ಮಲ್ಲಿ ಬಂದಾಗ ಅದು ಕೇವಲ ಎರಡೇ ವರ್ಷದ್ದಿತ್ತು. ತನ್ನ ಪುಟ್ಟ ಸೊಂಡಿಲನ್ನು ಎತ್ತಿ ಹರಿ ತಾಯಿಯ ಸ್ತನಪಾನ ಮಾಡತೊಡಗಿತೆಂದರೆ ನೋಡುವವರಿಗೆ ಅದೊಂದು ಮೋಜಿನ ವಿಷಯವೆನಿಸುತ್ತಿತ್ತು. ಸುಂದರ ಆಕಾರ,ಡೌಲಿನ ನಡಿಗೆ ಇವುಗಳಿಂದ ಅದು ಬಲು ಮುದ್ದು



ಮುದ್ದಾಗಿ ತೋರುತ್ತಿತ್ತು. ಡೌಲಿನಿಂದ ನಡೆಯುವ ಆನೆಯು ಒಳ್ಳೇ ಕಾಲ್ಗುಣದ್ದೆಂದು ಹೇಳುತ್ತಾರೆ. ಮತ್ತು ಆ ಮೇರೆಗೆ ಹರಿ ಸರ್ಕಸ್ಸಿನಲ್ಲಿ ಸೇರಿದ ಮೇಲೆ ನಮ್ಮ ಸರ್ಕಸ್ಸು ದಿನ ದಿನಕ್ಕೆ ಹೆಚ್ಚಿನ ಉತ್ಕರ್ಷವನ್ನೇ ಹೊಂದುತ್ತ ಹೋಯಿತು.

ಹರಿ ಸ್ವಲ್ಪ ದೊಡ್ಡದಾಗುತ್ತಲೆ ಪ್ರೊ. ಶಂಕರರಾಯರು ಅದಕ್ಕೆ ಬೇರೆ ಬೇರೆ ಆಟಗಳನ್ನು ಕಲಿಸ ತೊಡಗಿದರು. ಹರಿಯ ಬುದ್ಧಿ ಹರಿತವಾಗಿತ್ತು. ಅದು ಬೇಗ ಬೇಗ ಕಲಿಯುತ್ತಿತ್ತು. ಮೊಟ್ಟ ಮೊದಲು ಹಿಂಗಾಲುಗಳ ಮೇಲೆ ನಿಲ್ಲಲಿಕ್ಕೆ ಕಲಿಸಿದರು. ಆ ಮೇಲೆ ಎರಡೇ ಕಾಲುಗಳಿಂದ ನಡೆಯಲಿಕ್ಕೆ ಕಲಿಸಿದರು. ಆಗ ನಮಲ್ಲಿ ಇದ್ದ ಇಪ್ಪತ್ತೈದು ಆನೆಗಳಲ್ಲಿ ಹರಿಯೆ ಚಿಕ್ಕದು. ಎಲ್ಲ ಆನೆಗಳು ಮೈದಾನಿಗೆ ಬಂದಾಗ ಹರಿ ಅವೆಲ್ಲವುಗಳ ಹಿಂದೆ ಉಳಿಯುತ್ತಿತ್ತು. ಎಲ್ಲ ಆನೆಗಳು ಸರ್ಕಸ್ ಮಾಡುವಾಗ ಇದು ಬರಿ ನಿಂತುಕೊಳ್ಳುತ್ತಿತ್ತು. ಆಗ ಅದೂ ಒಂದು ತಮಾಷೆಯೆ ಅನಿಸುತ್ತಿತ್ತು.

ಮೊದಲಿನಿಂದಲೂ ಹರಿಗೆ ಪ್ರೊ. ಶಂಕರರಾಯರ ಕೈಯಿಂದಲೇ ಆಹಾರ ಪಡೆಯುವ ರೂಢಿಯಾಗಿದ್ದುದರಿಂದ ಬೇರಾರು ತಿನ್ನಿಸಹೋದರೂ ಅದು ಮುಟ್ಟುತ್ತಿರಲಿಲ್ಲ. ಶಂಕರರಾಯರು ಕಾರ್ಯನಿಮಿತ್ತ ಪರವೂರಿಗೆ ಹೋದರೆ ಆ ದಿನ ಹರಿಗೆ ಉಪವಾಸವೇ. ಶಂಕರರಾಯರಲ್ಲಿ ಅಂಥ ಪ್ರೀತಿ ಆ ಮೂಕ ಪ್ರಾಣಿಗೆ.

ಬರಬರುತ್ತಾ ಹರಿ ಶಂಕರರಾಯರಿಂದ ಫುಟ್‌ಬಾಲ್ ಆಡಲಿಕ್ಕೂ ಕಲಿಯಿತು. ಅದರೆದುರು ಚೆಂಡನ್ನು ಒಗೆದರೆ ಅದು ತನ್ನ ಮುಂಗಾಲಿನಿಂದ ಪುಟಿಸುತ್ತಿತ್ತು. ಆ ಮೇಲೆ ಅದಕ್ಕೆ ಒಂದು ಮೋಜಿನ ಆಟ ಕಲಿಸಿದರು. ಯಾರೇ ತನ್ನ ಬೆನ್ನ ಮೇಲೆ ಕೂತರೂ ಅದು ಒಂದು ವಿಶಿಷ್ಟ ಬಗೆಯಲ್ಲಿ ಮೈ ಅಲುಗಾಡಿಸಿ ಅವರನ್ನು ಹಾರಿಸಿ ನೆಲದ ಮೇಲೆ ಕೆಡವಿಬಿಡುತ್ತಿತ್ತು. ಸರ್ಕಸ್ಸಿನ ಆಟ ಸುರುವಾದ ಮೇಲೆ ಶಂಕರರಾಯರು "ಈ ಆನೆಯ ಬೆನ್ನಮೇಲೆ ಎರಡೇ ನಿಮಿಷ ಯಾರಾದರೂ ಕೂತರೆ ಅವರಿಗೆ ಐದು ರೂಪಾಯಿ ಬಕ್ಷೀಸು ಕೊಡಲಾಗುತ್ತದೆ" ಎಂದು ಸಾರುತ್ತಿದ್ದರು. ಧೈರ್ಯದಿಂದ ಬಂದವರೆಲ್ಲ ಅವಮಾನ ಹೊಂದಿ ಹೋಗುತ್ತಿದ್ದರು.

ನಮ್ಮ ಕ್ಯಾಂಪು ಕೊಲ್ಲಾಪುರದಲ್ಲಿ ಇದ್ದಾಗ ಒಂದು ಸ್ವಾರಸ್ಯದ ಘಟನೆ ನಡೆಯಿತು. ಎಂದಿನಂತೆ "ಹರಿಯ ಬೆನ್ನ ಮೇಲೆ ಕೂತು ತೋರಿಸಿದವರಿಗೆ ಐದು ರೂಪಾಯಿ ಬಹುಮಾನ" ವೆಂದು ಶಂಕರರಾಯರು ಸಾರಿದರು. ಆಗ ಭೀಮಕಾಯದ ಜಟ್ಟಿಗಳೊಬ್ಬರು ಮುಂದೆ ಬಂದರು. ಪಹೆಲವಾನೀ ಪದ್ಧತಿಯಲ್ಲಿ ರುಮಾಲು ಸುತ್ತಿದ್ದರು. ಮೈಯಲ್ಲಿ ಮಲಮಲ್ ಅಂಗಿ ತೊಟ್ಟಿದ್ದರು. ಧೋತರ ಉಟ್ಟು ಕಾಲಲ್ಲಿ ಕೊಲ್ಲಾಪುರೀ ಮೆಟ್ಟುಗಳನ್ನು ಹಾಕಿದ್ದರು. ಜಟ್ಟಿ ಆನೆಯ ಹತ್ತಿರ ಬಂದರು. ಈ ಹುಲು ಮರಿಯಾನೆ ತಮಗೇನು ಮಾಡಬಲ್ಲದೆಂದು ಬಗೆದು ಅದರ ಹತ್ತಿರ ಹೋದರು. ಬೆನ್ನ ಮೇಲೆ ಕೈ ಆಡಿಸಿದರು. ಆದರೂ ಆನೆ ಸುಮ್ಮನಿತ್ತು. ಇಂಥ ಸಾಧು ಪ್ರಾಣಿಗೆ ಹೆದರುವವರು ಎಂಥ ಮೂರ್ಖರೆಂದು ಯೋಚಿಸಿ ಜಟ್ಟಿಗಳು ಅದರ ಬೆನ್ನ ಮೇಲೆ ಹತ್ತಿ ಕೂತರು. ಕ್ಷಣಾರ್ಧವೂ ಕಳೆದಿರಲಾರದು, ಆನೆ ಮೈ ಅಲುಗಾಡಿಸಿತು. ಪಹೆಲವಾನರು ಎರಡು ಅಡಿ ಎತ್ತರಕ್ಕೆ ಹಾರಿ ದೂರ ಹೋಗಿಬಿದ್ದರು. ಮೆಟ್ಟು ಒತ್ತಟ್ಟಿಗೆ, ರುಮಾಲು ಒತ್ತಟ್ಟಿಗೆ. ವಿಪರೀತ ಪೆಟ್ಟು ಬೇರೆ ಬಿದ್ದಿತ್ತು. ಜನರ ನಗೆಗೆ ಪಾರವೇ ಇಲ್ಲದಂತಾಯಿತು.

ಹರಿ ಇನ್ನೊಂದು ಕೆಲಸ ಮಾಡುತ್ತಿತ್ತು. ಕಟ್ಟಿಗೆಯ ಚೌಕೋನದ ಮೇಲೆ ನಿಲ್ಲುತ್ತಿತ್ತು. ಆ ಮೇಲೆ ಅದರ ನಾಲ್ಕೂ ಕಾಲುಗಳಲ್ಲಿ ಗೆಜ್ಜೆಗಳನ್ನು ಕಟ್ಟುತ್ತಿದ್ದರು. ಸೊಂಡಿಲಲ್ಲಿ ಒಂದು ಮುಖವೀಣೆಯನ್ನು ಕೊಡುತ್ತಿದ್ದರು. ಹಿಂದಿನ ಮಗ್ಗಲಿಗೆ ಒಬ್ಬ ಮೃದಂಗ

ವನ್ನು ಹಿಡಿದುಕೊಂಡು ನಿಲ್ಲುತ್ತಿದ್ದನು. ಆಗ ಹರಿ ಬಾಯಿಯಿಂದ ಮುಖವೀಣೆಯನ್ನು ಬಾರಿಸಿ ಬಾಲದಿಂದ ಮೃದಂಗವನ್ನು ಬಾರಿಸಿ ಕುಣಿಯ ಲಾರಂಭಿಸುತ್ತಿತ್ತು. ಪ್ರೇಕ್ಷಕರು ಹರ್ಷಗೊಂಡು ಕೂಗುತ್ತಿದ್ದರು. ಚಪ್ಪಾಳೆ ತಟ್ಟುತ್ತಿದ್ದರು.

ಆ ಮೇಲೆ ಹರಿ ರಾಯರ ಶೀವಿಯಲ್ಲಿ ಸ್ಟೂಲೊಂದರ ಮೇಲೆ ಕೂತು ಗಂಟೆ ಬಾರಿಸಿ ಆಳನ್ನು ಕರೆಸುತ್ತಿತ್ತು. ಆಳು ತಟ್ಟೆಯಲ್ಲಿ ಬುಂದೀ ಉಂಡೆಗಳನ್ನು ಇಟ್ಟುಕೊಂಡು ಬರುತ್ತಿದ್ದ. ಅಷ್ಟೂ ಉಂಡೆಗಳನ್ನು ಸೊಂಡಿಲಿಂದ ಎತ್ತಿ ತಿಂದು ಆದ ಮೇಲೆ ಪುನಃ ಘಂಟಾವಾದನ. ಪುನಃ ಸೇವಕ ಪ್ರವೇಶ. ಈ ಸಲ ಸೇವಕ ಸೆರೆಯ (ಶರಬತ್ತಿನ) ಬಾಟಲಿಯನ್ನು ತರುತ್ತಿದ್ದ. ಹರಿ ರಾಯರು ಸೆರೆ ಕುಡಿದು ಸೊಂಡಿಲಿಂದ ಡ್ರಾವರ್ ಎಳೆಕೊಂಡು ಒಳಗಿನ ಒಂದು ರೂಪಾಯಿಯನ್ನು ಆಳಿನ ಕೈಗಿತ್ತು ಕಳಿಸುತ್ತಿದ್ದರು.

ಇಷ್ಟಾದರೆ ಹರಿಯ ಕೆಲಸ ಮುಗಿಯಿತು. ಹರಿ ಎದ್ದು ಎರಡೇ ಕಾಲ ಮೇಲೆ ನಿಂತು ಪ್ರೇಕ್ಷಕರಿಗೆ ತಲೆಬಾಗಿ ಅಭಿವಾದನೆ ಮಾಡುತ್ತ ಎರಡೇ ಕಾಲುಗಳಿಂದ ನಡೆಯುತ್ತ ತಂಬುವಿನ ಹೊರಗೆ ಹೋಗುತ್ತಿತ್ತು.

ವಯಸ್ಸು ಹೆಚ್ಚಾದಂತೆ ಗಾತ್ರ ಬೆಳೆಯಿತು. ಕೋರೆಗಳು ಬಂದವು. ಎರಡೂ ಕೋರೆಗಳಿಗೆ ಬಂಗಾರದ ತಗಡಿನ ವೇಷ್ಟನವನ್ನು ಕೂಡಿಸಿದರು. ಮುತ್ತಿನಿಂದ ದಂಡೆಗಳನ್ನು ಹೆಣೆದ ಜೂಲನ್ನು ಬೆನ್ನ ಮೇಲೆ ಹೊದಿಸುತ್ತಿದ್ದರು. ಹಣೆಯ ಮೇಲೆ ಬೆಳ್ಳಿಯ ಕವಚ. ಶಂಕರ ರಾಯರು ಮಕ್ಕಳಂತೆ ಬೆಳೆಸಿದ್ದ ಪ್ರಾಣಿಗಳಲ್ಲಿ ಹರಿ ಕಟ್ಟಕಡೆಯದು, ಮತ್ತು ಎಲ್ಲಕ್ಕೂ ಪ್ರೀತಿಯದು. ಸಾವಿರಾರು ರೂಪಾಯಿ ವೆಚ್ಚ ತಗಲಿದರೂ ಚಿಂತಿಸುವಂತಿರಲಿಲ್ಲ. ಶುದ್ಧ ತುಪ್ಪ, ಬೆಲ್ಲ ಮತ್ತು ಕಣಕಗಳಿಂದ ಮಾಡಿದ ಆಹಾರ ಇದಕ್ಕೆ ನಿತ್ಯ ಸಲ್ಲಬೇಕು. ಆ ಮೇಲೆ ಹರಿಗಾಗಿ ಒಂದು ಮೂರು ಗಾಲಿಯ ಸೈಕಲ್ಲೂ ಸಿದ್ಧವಾಯಿತು. ಮುಂದಿನ ಗಾಲಿಯನ್ನು ಒಂದು ಮಗ್ಗಲಿಗೆ ತುಸು ಹೊರಳಿಸಲಾಗಿತ್ತು. ಹಿಂದಿನ ಗಾಲಿಗಳು ತುಸು ಚಿಕ್ಕವು. ಅವುಗಳ ಮೇಲೆ ಕಬ್ಬಿಣದ ಒಂದು ದಪ್ಪನ್ನ ತಗಡನ್ನು ಹಾಸಿದಂತೆ ಕೂಡಿಸಲಾಗಿತ್ತು. ಮೂರೂ ಗಾಲಿಗಳಿಗೆ ರಬ್ಬರಿನ ಟಾಯರುಗಳಿದ್ದವು. ಮುಂದಿನ ಗಾಲಿಯ ಎರಡೂ ಮಗ್ಗಲಿಗೆ ಪೆಡಲ್‌ಗಳಂತೆ ಎರಡು ತಟ್ಟೆಗಳನ್ನು ಕೂಡಿಸಲಾಗಿತ್ತು. ಹಿಂದಿನ ತಗಡಿನ ಮೇಲೆ ಹಿಂಗಾಲುಗಳನ್ನಿಟ್ಟು ಮುಂದಿನ ಎರಡೂ ಕಾಲುಗಳನ್ನು ಈ ತಟ್ಟೆಗಳ ಮೇಲೆ ಊರಿ ಹರಿ ಸೈಕಲ್ ನಡೆಸುತ್ತಿತ್ತು. ಮುಂದಿನ ಗಾಲಿ ಮೊದಲೆ ಒಂದು ಬದಿಗೆ ತಿರುಗಿಸಿದಂತೆ ಇದ್ದುದರಿಂದ ಸೈಕಲ್ ದುಂಡಗ್ಗೆ ಸುತ್ತು ಹಾಕುತ್ತಿತ್ತು. ಈ ಸೈಕಲ್ ಮಾಡಿಸಲಿಕ್ಕೆ ಆಗ ಏಳು ಸಾವಿರ ರೂಪಾಯಿ ಖರ್ಚಾಗಿದ್ದವು. ಅಂಥ ಸೈಕಲನ್ನು ಯಾವ ಸರ್ಕಸ್ಸೂ ಇಟ್ಟಿಲ್ಲ.

ಹರಿಯ ಕುಶಾಗ್ರ ಬುದ್ಧಿ ಎಷ್ಟು ಇತ್ತೆಂದರೆ ಮಾತಾಡುವ ಪ್ರಾಣಿಯಾಗಿದ್ದರೆ ಅದು ಮನುಷ್ಯರನ್ನೂ ಹಿಮ್ಮೆಟ್ಟಿಸುತ್ತಿತ್ತು. ಗುಜರಾತದ ಬಡೋದೆಯ ಹತ್ತಿರ ಡಭೋಯಿ ಎಂಬ ಊರಲ್ಲಿ ನಮ್ಮ ಕ್ಯಾಂಪು ಇತ್ತು. ಅದು ಮಳೆಗಾಲ. ಭಾರೀ ಮಳೆ ಆಗಿತ್ತು. ಡಭೋಯಿ ಹತ್ತಿರ ಹರಿಯುತ್ತಿದ್ದ ಹೊಳೆಗೆ ಮಹಾಪೂರ ಬಂದಿತ್ತು. ನೀರಿನೊಂದಿಗೆ ಅನೇಕ ದನಗಳೂ ಜನರೂ ಕೊಚ್ಚಿ ಬಂದರು. ವನ್ಯಪ್ರಾಣಿಗಳೊಂದಿಗೇ ಜೀವನಕಳೆದ ಶಂಕರ ರಾಯರ ಅಂತಃಕರಣ ಪೂರ್ಣ ಮಾನವೀಯವಾಗಿತ್ತು. ಮಹಾಪೂರದ ಅನಾಹುತವನ್ನು ಕಣ್ಣಾರೆ ಕಂಡು ಸುಮ್ಮನಿರಲಾಗದೆ ಮಾಹುತನನ್ನು ಕರೆದು ಎಲ್ಲ ಆನೆಗಳನ್ನು ನದಿಯ ಪ್ರವಾಹದಲ್ಲಿ ನಿಲ್ಲಿಸಿ ಹರಿದು ಬರುವ ಜನರನ್ನು ಸೊಂಡಿಲದಿಂದ ಎತ್ತಿ ದಂಡೆಗೆ ತಂದು ಬಿಡುವಂತೆ ಮಾಡಲು ಹೇಳಿದರು. ಇಪ್ಪತ್ತೈದು ಆನೆಗಳು ಆ ದಿನ ಎಷ್ಟೋ ಪ್ರಾಣಗಳನ್ನು ಉಳಿಸಿದವು. ಚಿಕ್ಕ ಹರಿ ಒಂದೇ ಇಪ್ಪತ್ತೈದು ಜನರನ್ನು

ಮೃತ್ಯುವಿನ ದವಡೆಯಿಂದ ಪಾರುಮಾಡಿತು.

ಈ ಸುದ್ದಿ ಆಗ ಬಡೋದೆಯ ಮಹಾರಾಜರಾಗಿದ್ದ ದಾನಶೂರ ಸಯಾಜಿರಾವ್ ಗಾಯಕವಾಡರ ಕಿವಿಗೆ ಮುಟ್ಟಿತು. ಅವರು ಕೂಡಲೆ ಶಂಕರರಾಯರನ್ನು ಬಡೋದೆಗೆ ಕರೆಸಿದರು. ಅವರೊಂದಿಗೆ ಹರಿಗೂ ಆಮಂತ್ರಣವಿತ್ತು. ಶಂಕರರಾಯರಿಗೆ ಹತ್ತು ಸಾವಿರ ರೂಪಾಯಿಗಳನ್ನು ಕೊಟ್ಟು ಗೌರವಿಸಿದರಲ್ಲದೆ ಹರಿಯ ಕಾಲಿಗೆ ಬಂಗಾರದ ಕಡಗವನ್ನು ಹಾಕಿ ಸರಕಾರೀ ಬ್ಯಾಂಡಿನೊಂದಿಗೆ ಊರೆಲ್ಲ ಮೆರವಣಿಗೆ ಮಾಡಿ ಮೂಕಪ್ರಾಣಿಗೆ ಸನ್ಮಾನ ಮಾಡಿದರು. ಸಾವಿರಾರು ಪೌರರು ಮೆರವಣಿಗೆಯನ್ನು ನೋಡಿ ಮೆಚ್ಚಿದರು.

ಬಡೋದಾ ಸಂಸ್ಥಾನದಲ್ಲಿ ನ್ಯಾರೊ ಗೇಜ್ ರೇಲ್ವೆ ಇದೆ. ಗಾಡಿಗಳು ಚಿಕ್ಕವು. ಆದ್ದರಿಂದ ಆನೆಗಳನ್ನು ನಡೆಸಿಕೊಂಡೇ ಹೋಗಬೇಕಾಗುತ್ತಿತ್ತು. ಆದರೆ ಹರಿ ಎಲ್ಲ ಆನೆಗಳಂತಲ್ಲ; ಮಾಲಿಕರ ಪ್ರೀತಿಯ ಪುತ್ರಕ! ಅವರು ಹರಿಗೆ ಒಂದು ಯುಕ್ತಿಯನ್ನು ಹೇಳಿಕೊಟ್ಟಿದ್ದರು. ಗಾಡಿಯಲ್ಲಿ ಇದ್ದಾಗ ಮುಂದಿನ ಬಲಗಾಲನ್ನೂ ಹಿಂದಿನ ಎಡಗಾಲನ್ನೂ ಎತ್ತಿಹಿಡಿದು ಓಡುವ ಗಾಡಿಯಲ್ಲಿ ಸಮತೂಕ ಉಳಿಸಿಕೊಳ್ಳುವುದೇ ಅದು. ಮೂಕ ಪ್ರಾಣಿ ಒಂದು ಸ್ಟೇಶನ್ನಿನಿಂದ ಇನ್ನೊಂದು ಸ್ಟೇಶನ್ ವರೆಗೆ ಇದೇ ರೀತಿ ಎರಡೇ ಕಾಲ ಮೇಲೆ ನಿಂತು ಪ್ರವಾಸ ಮಾಡಿತು.

ಇಂಥ ಬುದ್ಧಿವಂತ ಆನೆಯ ಅಂತ್ಯ ಮಾತ್ರ ಬಹಳ ದುಃಖದಾಯಕವಾಯಿತು. ಸಾವರಕೊಂಡದಲ್ಲಿ ನಮ್ಮ ಕ್ಯಾಂಪಿತ್ತು. ಶಂಕರರಾಯರು ಏನೊ ಕೆಲಸಕ್ಕೆ ಪುಣೆಗೆ ಹೋದವರು ಮೂರು ವಾರಗಳ ವರೆಗೆ ವಿಷಮಜ್ವರದಿಂದ ಹಾಸಿಗೆ ಹಿಡಿದರು. ಇತ್ತ ಹರಿ ತನ್ನ ಒಡೆಯನಿಲ್ಲದೆ ತಾನು ಅನ್ನ ನೀರನ್ನೇ ಮುಟ್ಟಲಾರೆನೆಂದು ಸತ್ಯಾಗ್ರಹ ಹೂಡಿತು. ಆ ಮೂಕಪ್ರಾಣಿ ಉಪವಾಸವಿರುವುದನ್ನೂ ಹೌಹಾರಿ ಅತ್ತಿತ್ತ ತನ್ನ ಒಡೆಯನನ್ನು ಹುಡುಕಾಡುವುದನ್ನೂ ನೋಡಿ ಬಹಳ ಖೇದವೆನಿಸುತ್ತಿತ್ತು. ಸದಾಕಾಲ ಹರಿ ಕಣ್ಣೀರು ಸುರಿಸಲಾರಂಭಿಸಿತು. ತನ್ನ ಒಡೆಯ ಯಾವಾಗ ಬಂದು ತನ್ನ ಬೆನ್ನ ಮೇಲೆ ಕೈ ಆಡಿಸುವನೆಂದು ಆಸೆಯಿಂದ ದಾರಿ ಕಾಯತೊಡಗಿತು. ಇಪ್ಪತ್ತೊಂದು ದಿವಸ ಪ್ರತೀಕ್ಷೆ ನಡೆಸಿ ಆ ಏಕನಿಷ್ಠ ಪ್ರಾಣಿ ಕೊನೆಗೆ ಮೈ ಚೆಲ್ಲಿತು. ಮತ್ತೆ ಏಳಲಿಲ್ಲ. ಈ ವಾರ್ತೆಯನ್ನು ಕೇಳಿದ ಶಂಕರರಾಯರಿಗೆ ಒಮ್ಮೆಲೆ ಮೂರ್ಛೆ ಬಂತು. ನಾಲ್ಕು ದಿನ ಅವರೂ ಉಪೋಷಣೆ ಮಾಡಿದರು. ಹರಿಯ ನಿಧನದ ದೆಸೆಯಿಂದ ಮೂರು ದಿನ ಸರ್ಕಸ್ ಬಂದು ಮಾಡಲಾಯಿತು. ಹರಿಯನ್ನು ಹುಗಿದ ಸ್ಥಳದಲ್ಲಿ ಹರಿಯ ಸ್ಮರಣಾರ್ಥವಾಗಿ ಒಂದು ಅಮೃತ ಶಿಲೆಯ ಗೋರಿಯನ್ನು ಕಟ್ಟಲಾಯಿತು. ಅದರ ಮೇಲೆ ಬರೆಯಲಾಯಿತು; ಕಾರ್ಲೇಕರ ಗ್ರ್ಯಾಂಡ ಸರ್ಕಸ್ಸಿನ ಗಜರತ್ನ 'ಹರಿ' ಇಲ್ಲಿ ಚಿರ ಕಾಲ ನಿದ್ರಿಸುತ್ತಿದೆ."

ಹುಗಿಯುವ ಮುಂಚೆ ಎರಡೂ ಹಲ್ಲುಗಳನ್ನು ಕೊರೆದು ಇಟ್ಟುಕೊಂಡೆವು. ಅವು ಇಂದಿಗೂ ನಮ್ಮ ದೇವರ ಮನೆಯಲ್ಲಿ ಇವೆ. ನೋಡಿದಾಗೊಮ್ಮೆ ಹಳೇ ಸ್ಮೃತಿಯನ್ನು ಮರುಕಳಿಸಿ ಕಣ್ಮುಂದೆ ತರುತ್ತವೆ.

*



ಒಮ್ಮೆ ಕೈಲಾಸಂರವರು "ಜಗತ್ತೇ ಒಂದು ರಂಗಭೂಮಿಯೆಂದು ಷೇಕ್ಸ್ಪಿಯರ್ ಹೇಳುತ್ತಾನೆ. ಆದರೆ ಅದು ಸುಳ್ಳು! ಸುಸ್ತಾದಾಗ ಸುಧಾರಿಸಿಕೊಳ್ಳುವುದಕ್ಕೆ ಸಮಾಜದಲ್ಲಿ ಸೈಡ್ ವಿಂಗ್ ಎಲ್ಲಿ?" ಎಂದು ಹೇಳಿದರು.

— ಪಿ. ಮೋಘರಾಜನ್

ಅವನು ಕಿವುಡನಾಗಿದ್ದ, ಆದರೆ ಸುದೂರ
ಅಂತರಿಕ್ಷ ಯಾತ್ರೆಯ ಕನಸು ಕಂಡ !



# ಗ್ರಹಾಂತರ ಯಾನದ ಪಿತಾಮಹ

# ಕಾನ್‌ಸ್ಟಾಂಟೀನ್ ಝಿಯೋಲ್ಕೊವಸ್ಕಿ

ರಾಧಾಕೃಷ್ಣ ರಾವ್

ರಶಿಯನ್ನರು ತಮ್ಮ ಮೊದಲನೇ ಸ್ಪುಟ್ನಿಕ್ಕನ್ನು ೧೯೫೭ ಸೆಪ್ಟೆಂಬರದಲ್ಲೇ ಹಾರಿಸಬೇಕೆಂದು ಶತ ಪ್ರಯತ್ನ ಮಾಡಿದರು. ಆದರೆ ಹಲವು ಅನಾನುಕೂಲಗಳ ದೆಸೆಯಿಂದ ಸೆಪ್ಟೆಂಬರ ದಾಟಿ ನಾಲ್ಕು ದಿನಗಳ ನಂತರ ಅವರ ಕೃತಕ ಉಪ ಗ್ರಹ ಗಗನವನ್ನು ಸೇರಿತು. ಅವರು ಈ ವಿಲಂಬಕ್ಕಾಗಿ ನೊಂದುಕೊಂಡದ್ದು ಅಷ್ಟಿಷ್ಟಲ್ಲ.

ಸೆಪ್ಟೆಂಬರದಲ್ಲೇ ಸ್ಪುಟ್ನಿಕ್ಕು ಹಾರಿಸಿಬಿಡಬೇಕೆಂಬ ಅವರ ಛಲದ ಹಿಂದೆ ಅವರ ರಾಷ್ಟ್ರ ವೀರನೊಬ್ಬನನ್ನು ಗೌರವಿಸಬೇಕೆಂಬ ಹಂಬಲವಿತ್ತು. ಅವನ ಹೆಸರು ಕಾನ್‌ಸ್ಟಾಂಟೀನ್ ಝಿಯೋಲ್ಕೊವಸ್ಕಿ. "ಭೂಮಿ ಮಾನವನ ತೊಟ್ಟಿಲಾಗಿದೆ ನಿಜ, ಆದರೆ ಮಾನವ ಕಡೆತನಕ ತೊಟ್ಟಿಲಲ್ಲೇ ಇರಲಾರ" ಎಂದು ಸಾರಿದ ಝಿಯೋಲ್ಕೊವಸ್ಕಿ ಗ್ರಹಾಂತರ ಪ್ರಯಾಣದ ಪ್ರಪ್ರಥಮ ಕನಸುಗಾರನಾಗಿದ್ದ. ಮಾನವ ಒಂದಲ್ಲ ಒಂದು ದಿನ ಸೂರ್ಯನ ಸುತ್ತಮುತ್ತಲ ಆಕಾಶವನ್ನೆಲ್ಲ ಗೆದ್ದುಕೊಂಡು ಬೇಕಾದಂತೆ ವಿಹರಿಸಲಿದ್ದಾನೆ' ಎಂದು ದೃಢವಾಗಿ ಹೇಳಿ ಆತ ಅದನ್ನು ಸಾಧಿಸಲು ಬೇಕಾದ ಬಹುಭಾಗ ವೈಜ್ಞಾನಿಕ ಪೂರ್ವ ಸಿದ್ಧತೆಯನ್ನು ಪೂರೈಸಿದ್ದ. ಆತ ಹುಟ್ಟಿದ್ದು ೧೮೫೭ ಸೆಪ್ಟೆಂಬರದಲ್ಲಿ. ಅವನ ಶತಮಾನೋತ್ಸವ ಕಾಲದಲ್ಲೇ ಪ್ರಪ್ರಥಮ ಕೃತಕ ಚಂದ್ರನನ್ನು ಹಾರಿಸಿ ಗ್ರಹಾಂತರ ಯಾನದ ಮೊದಲ ಹೆಜ್ಜೆ ಇಟ್ಟು ಬಿಡಬೇಕೆಂದು ರಶಿಯನ್ನರು ಆಶಿಸಿದ್ದು ಸಹಜವೇ.

ಝಿಯೋಲ್ಕೊವಸ್ಕಿಯ ಹಿರಿಮೆಯೆಂದರೆ, ಭೂಮಿಯ ಅನೇಕ ಕನಸುಗಾರರು ಇನ್ನೂ ಹಕ್ಕಿಯಂತೆ ಗಾಳಿಯಲ್ಲಿ ಹಾರಬೇಕೆಂದಿದ್ದ ಸಮಯದಲ್ಲಿ ಆತ ಈ ಭೂಮಿಯ ಪರ್ಲು ಹರಿದುಕೊಂಡು ಕೋಟ್ಯಂತರ ಮೈಲು ದೂರದಲ್ಲಿದ್ದ ಅನ್ಯಗ್ರಹಗಳಿಗೆ ಹಾರುವ ಎಣಿಕೆ ಹಾಕತೊಡ

ಗಿದ್ದ. ತಾನೋ, ಬರಿ ಬಡಪಾಯಿ ಶಾಲಾ ಮಾಸ್ತರ!

ಝಿಯೋಲ್ಕೊವಸ್ಕಿಯ ಜೀವನ ಸಾಮಾನ್ಯರಿಗೆ ಅಸಾಧ್ಯವೆನಿಸಬಹುದಾದ ಕಷ್ಟಗಳನ್ನು ಎದುರಿಸಿ ಯಶಸ್ಸಿನ ಶಿಖರವನ್ನೇರಿದ ರಶಿಯನ್ ತರುಣನ ಕಥೆಯಾಗಿದೆ. ಆತ ಬಡ ತಂದೆ ತಾಯಿಗಳ ಮಗ ಹತ್ತನೇ ವಯಸ್ಸಿನಲ್ಲಿ ಅವನಿಗೊಂದು ಘೋರ ಜ್ವರ ಬಂದು ಅವನ ಜೀವವನ್ನು ಬಿಟ್ಟು ಕಿವಿಯನ್ನು ತೆಗೆದುಕೊಂಡು ಹೋಯಿತು. ಅದರೊಡನೆ ಅವನ ಶಾಲಾಶಿಕ್ಷಣವೂ ಸಮಾಪ್ತಿಹೊಂದಿತು. ಕಿವುಡನಿಗೆ ಎಲ್ಲಿಯ ವಿದ್ಯೆ?

ನಿಶ್ಶಬ್ದ ಪ್ರಪಂಚದಲ್ಲಿ ಝಿಯೋಲ್ಕೊವಸ್ಕಿಯ ಬುದ್ಧಿ ಇನ್ನಷ್ಟು ತೀವ್ರವಾಯಿತು. ಆತ ಪುಸ್ತಕ ಜೀವಿಯಾದ. ಕವಿತೆಗಳನ್ನು ಬರೆಯುವ, ಹಕ್ಕಿಗಳ ಅಸ್ಥಿಪಂಜರಗಳನ್ನು ಸಂಗ್ರಹಿಸುವ, ಫೋಟೋ ತೆಗೆಯುವ ಹವ್ಯಾಸಗಳು ಅವನಿಗೆ ಅಂಟಿಕೊಂಡವು.

ಕೊನೆಗೆ ಅವನನ್ನು ಹಿಡಿದುಕೊಂಡ ಹುಚ್ಚು ಗಣಿತ ಮತ್ತು ಭೌತಶಾಸ್ತ್ರದ್ದು. ೧೫ ನೇ ವಯಸ್ಸಿಗೇ ಆತ ಪುಸ್ತಕ ಬಲದಿಂದ ಈ ಶಾಸ್ತ್ರಗಳನ್ನು ಸಾಕಷ್ಟು ಕೈವಶ ಮಾಡಿಕೊಂಡ. ಆಗಲೇ ಅವನ ದೃಷ್ಟಿ ಅಸೀಮ ಆಕಾಶದತ್ತ ನಟ್ಟಿತ್ತು. ಭೌತ ಶಾಸ್ತ್ರದ ಅಭ್ಯಾಸದಲ್ಲಿ ಕೇಂದ್ರಾಕರ್ಷಣ ಶಕ್ತಿಯ ಪರಿಚಯವಾದೊಡನೆ ಆತ ಅದನ್ನೇಕೆ ಅಂತರಿಕ್ಷಯಾನಕ್ಕೆ ಉಪಯೋಗಿಸಬಾರದು? ಎಂದುಕೊಂಡ. ಅದರ ಬಗ್ಗೆ ತುದಿಮೊದಲಿಲ್ಲದ ಚಿಂತನೆಯ ನಂತರ ಆತ ಒಂದು ದಿನ "ತಿಳಿಯಿತು!" ಎಂದು ಕುಣಿದಾಡಿದ. ಅಂತರಿಕ್ಷಯಾನದ ಸಮಸ್ಯೆಗಳನ್ನೆಲ್ಲ ತೀರಿಸಿಬಿಟ್ಟಿದ್ದೇನೆ ಎಂದು ಅವನಿಗೆ ಮನವರಿಕೆಯಾಗಿತ್ತು. ಆದರೆ ಒಪ್ಪೊತ್ತು ಮಾತ್ರ. ಮರುದಿನ ಬೆಳಗ್ಗೆ ಏಳುವಾಗ ಆತನಿಗೆ ತನ್ನ ಯೋಜನೆಗಳಲ್ಲಿದ್ದ ಹುಳುಕುಗಳು ಹೊಳೆದು ನಿರಾಶೆಯುಂಟಾಗಿ ಬಿಟ್ಟಿತು. ಆದರೆ ಅವನಿಗಾಗ ೧೬ ವರ್ಷ ಮಾತ್ರ. ಇನ್ನೂ ಬೇಕಾದಷ್ಟು ಸಮಯ ಇತ್ತು.

ಸ್ವಯಂಶಿಕ್ಷಣದಿಂದ ಆತ ಶಿಕ್ಷಕ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಅಧ್ಯಾಪನ ವೃತ್ತಿಯನ್ನು ಕೈಕೊಂಡ. ಅಂದಿನಿಂದ ಆತ ೪೦ ವರ್ಷ ಕಾಲ ಗಣಿತ, ಭೌತ ಶಾಸ್ತ್ರಗಳ ಶಿಕ್ಷಕನಾಗಿ ದುಡಿದ.

೧೮೮೦ ರಲ್ಲಿ ಝಿಯೋಲ್ಕೊವಸ್ಕಿ ಸ್ವತಂತ್ರವಾಗಿ ಸಂಶೋಧನೆ ನಡೆಸಿ ಸೆಂಟ್ ಪೀಟರ್ಸ್‌ಬರ್ಗಿನ ಭೌತ-ರಸಾಯನ ಸಂಘಕ್ಕೆ ಕಳಿಸಿದ ಕೆಲ ಬರಹಗಳು ಆ ಸಂಘದ ಪಂಡಿತರನ್ನು ಅಪ್ರತಿಭಗೊಳಿಸಿದವು. ಅನಿಲಗಳು, ನಕ್ಷತ್ರಗಳ ವಿಕಿರಣ ಮೊದಲಾದ ವಿಷಯಗಳಲ್ಲಿ ಆತ ಮಂಡಿಸಿದ ಸಿದ್ಧಾಂತಗಳಲ್ಲಿ ಹೊಸದೇನೂ ಇರಲಿಲ್ಲ. ಆತ ಹುಟ್ಟುವ ಒಂದೆರಡು ವರ್ಷ ಮೊದಲೇ ಇತರ ವಿಜ್ಞಾನಿಗಳು ಆ ಅಂಶಗಳನ್ನು ಕಂಡುಹಿಡಿದಿದ್ದರು. (ಪಾಪ, ಝಿಯೋಲ್ಕೋವಸ್ಕಿಗೆ ಮಾತ್ರ ಅದು ಗೊತ್ತಿರಲಿಲ್ಲ.) ಆದರೆ ತಲೆ ನರೆತ ವಿಜ್ಞಾನಿಗಳು ಭಾರಿ ಪ್ರಯೋಗಶಾಲೆಗಳಲ್ಲಿ ಪ್ರಯತ್ನಿಸಿ ಕಂಡುಹಿಡಿದ ಸಂಗತಿಗಳನ್ನು ಕಾಲೇಜನ್ನೇ ಕಾಣದ ೨೩ ವರ್ಷದ ಹುಡುಗನೊಬ್ಬ ಸ್ವತಂತ್ರವಾಗಿ ಕಂಡುಹಿಡಿದಿದ್ದಾನೆಂಬುದು ಅವರನ್ನು ಚಕಿತಗೊಳಿಸಿತ್ತು.

ಮೊದಲೇ ಬೇರೆಯವರು ಕಂಡುಹಿಡಿದ ಸಂಗತಿಗಳನ್ನೇ ತಾನು ಕಂಡುಹಿಡಿದಿದ್ದೆನೆಂಬುದನ್ನರಿತು ಅವನಿಗೆ ನಿರಾಶೆಯಾಗದಿರಲಿಲ್ಲ. ಆದರೆ ತಾನು ಸ್ವತಂತ್ರವಾಗಿ ಸಾಗಿದ್ದರೂ ಸರಿ ದಾರಿಯಲ್ಲೇ ಸಾಗುತ್ತಿದ್ದೇನಲ್ಲ ಎಂಬ ಸಮಾಧಾನದಿಂದ ಆತ ತನ್ನ ಪ್ರಯತ್ನಗಳನ್ನು ಮುಂದೆ ಸಾಗಿಸಿದ. ವಿಮಾನಗಳನ್ನು ಕುರಿತು ಅವನೀಗ ಚಿಂತಿಸತೊಡಗಿದ್ದ. ಅವುಗಳ ಆಕೃತಿಯನ್ನು ಗಾಳಿಗೆ ತಡೆಯೊಡ್ಡದಂತೆ ರೂಪಿಸಿದರೆ ಹಾರಲು ಸುಲಭವಾಗುವುದು ಎಂಬ ಹೊಸ ಕಲ್ಪನೆ ಅವನಿಗೆ ಬಂದಿತ್ತು. ಅವನಿನ್ನೂ ೨೫ ವರ್ಷದವನಾ

ಗಿದ್ದರೂ ಇತರರು ಪ್ರೊಪೆಲ್ಲರ್ ಮಾದರಿಯ ವಿಮಾನಗಳ ರಚನೆಯ ಯತ್ನದಲ್ಲಿದ್ದಾಗ ಆತ ಅದಕ್ಕೂ ಎಷ್ಟೋ ಮುಂದೆ ಹೋಗಿ ಜೆಟ್ ಪದ್ಧತಿಯ ವಿಮಾನಗಳನ್ನು ರಚಿಸಬಹುದೆಂಬ ಅಂಶವನ್ನು ತನ್ನ "ಅಂತರಿಕ್ಷ ಯುಗ" ಎಂಬ ಪುಸ್ತಕದಲ್ಲಿ ಚರ್ಚಿಸಿದ್ದ.

ವಿಮಾನಗಳ ರಚನೆಯಲ್ಲೇ ಆತ ಮುಂದುವರಿದಿದ್ದರೆ ಬಹುಶಃ ಆತ ಪ್ರಥಮ ವಿಮಾನ ಯೋಜಕನೇ ಆಗಬಹುದಿತ್ತೇನೋ. ಆದರೆ ಅಷ್ಟರಲ್ಲಿ ಇನ್ನೊಮ್ಮೆ ಅವನಿಗೆ ಅಸ್ವಸ್ಥವಾಯಿತು. ಈ ಸಲ ಅವನು ಒಂದು ವರ್ಷ ಕಾಲ ಹಾಸಿಗೆ ಹಿಡಿಯಬೇಕಾಯಿತು. ಕೆಲ ಕಾಲ ಅವನ ಬಾಯಿಯೂ ಹೋಗಿಬಿಟ್ಟಿತು. ಇಷ್ಟೂ ಸಾಲದೆಂಬಂತೆ ಅವನ ಪುಸ್ತಕಾಲಯ ಮತ್ತು ಪ್ರಯೋಗಶಾಲೆಗೆ ಬೆಂಕಿ ಬಿದ್ದು ಆತ ತಯಾರಿಸಿದ್ದ ವಿಮಾನ ಮಾದರಿಗಳ ಸಹಿತ ಎಲ್ಲವನ್ನೂ ಆಹುತಿಗೊಂಡಿತು.

ಈ ಎರಡನೇ ವಿಪತ್ತಿನಿಂದ ಚೇತರಿಸಿಕೊಂಡಿದ್ದ ಆತ ಸಹಾಯಕ್ಕಾಗಿ ರಶಿಯದ ಸೇನಾಪತಿ ಮಂಡಲದ ಮುಂದೆ ಕೈಚಾಚಿದ. ತಾನು ಯೋಜಿಸಿದ ವಿಮಾನಗಳು ಯಶಸ್ವಿಯಾದರೆ ಯುದ್ಧ ವಿದ್ಯೆಯಲ್ಲೇ ಕ್ರಾಂತಿಯಾದೀತೆಂದು ಬರೆದು ವಿವರಗಳನ್ನು ಕಳಿಸಿದ. ಆದರೆ ೩೩ ವರ್ಷದ ಈ ಮರುಳು ಮಾಸ್ತರನ ಹೊಸ ವಿಚಾರಗಳು ರಶಿಯದ ಸೇನಾಪತಿಗಳನ್ನು ಆಕರ್ಷಿಸಲಿಲ್ಲ. ಅಂದಿನ ರಶಿಯನ್ ಅಧಿಕಾರಿಗಳಿಗೆ ಹೊಸ ವಿಚಾರಗಳು ಪಥ್ಯವಾಗಿರಲಿಲ್ಲ.

ಆದರೂ ಝಿಯೋಲ್ಕೊವಸ್ಕಿಯ ಲೇಖಗಳು ಕೆಲವರನ್ನು ಆಕರ್ಷಿಸಿ ತಕ್ಕಮಟ್ಟಿಗೆ ಧನಸಹಾಯವೂ ಬಂತು. ಆತ ೧೮೯೭ ರಲ್ಲಿ ಲೋಹಮಯವಾದೊಂದು ವಿಮಾನವನ್ನು ಕಟ್ಟಿದ. ಅದರ ಪರೀಕ್ಷೆಗಾಗಿ ಒಂದು ಗಾಳಿ ಕೊಳವೆಯನ್ನೂ ನಿರ್ಮಿಸಿದ. ಇವೆರಡರಲ್ಲೂ ಆತ ವಿಮಾನ ರಚನೆಯಲ್ಲಿ ಪ್ರಸಿದ್ಧರಾದ ಜರ್ಮನಿಯ ತ್ಸೆಪೆಲಿನ್ ಮತ್ತು ಅಮೇರಿಕದ ರೈಟ್ ಬಂಧುಗಳಿಗಿಂತ ಹತ್ತಾರು ವರ್ಷ ಮುಂದಿದ್ದ.

ಸೇನಾಪತಿ ಮಂಡಲದ ಅನಾಸ್ಥೆಯೂ ಸ್ವತಃ ಝಿಯೋಲ್ಕೊವಸ್ಕಿಯ ಕಲ್ಪನಾ ಶಕ್ತಿಯೂ ಅವನನ್ನು ವಾಯುಯಾನವನ್ನು ನಡುವೆ ಕೈ-ಬಿಟ್ಟು ಭೂಮಿಯ ಈ ತೆಳ್ಳನ್ನ ಗಾಳಿಯ ಪರೆಯನ್ನು ದಾಟಿಹೋಗುವ ಯೋಜನೆಯತ್ತ ನೂಕಿರಬೇಕು. ಗ್ರಹಾಂತರಗಳಿಗೆ ಹಾರುವ ವಿಚಾರ ಆಗ ಹೊಸದೇನೂ ಆಗಿರಲಿಲ್ಲ. ಪ್ರಸಿದ್ಧ ಫ್ರೆಂಚ್ ವೈಜ್ಞಾನಿಕ ಕಾದಂಬರಿಕಾರ ಜೂಲ್ಸ್ ವರ್ನ್ ಒಂದು ಭಾರಿ ತೋಫಿನಿಂದ ಮನುಷ್ಯನನ್ನು ಅಂತರಿಕ್ಷಕ್ಕೆ ಹಾರಿಸುವ ಕಲ್ಪನೆಯನ್ನು ಮಂಡಿಸಿದ್ದ. ಇತರರು "ಗುರುತ್ವಾಕರ್ಷಣ ನಿರೋಧಕ ಕವಚ"ಗಳ ಕಲ್ಪನಾ ವಿಲಾಸವನ್ನು —ಅದರ ಅರ್ಥವೇನೋ ಯಾರಿಗೂ ತಿಳಿದಿರಲಿಲ್ಲ !—ಹರಿಬಿಟ್ಟಿದ್ದರು.

ಆದರೆ ೧೮೯೫ ರಲ್ಲಿ ಝಿಯೋಲ್ಕೊವಸ್ಕಿ ಈ ವಿಚಾರವನ್ನು ಪ್ರಪ್ರಥಮವಾಗಿ ಒಂದು ಲೇಖದಲ್ಲಿ ಚರ್ಚಿಸಿದಾಗಲೇ ಅವನದು ಬರಿ ಕಲ್ಪನಾ ವಿಲಾಸವಲ್ಲವೆಂದು ತೋರಿಸಿತು. ಅಂತರಿಕ್ಷಯಾನದಲ್ಲಿರುವ ತೊಡಕುಗಳನ್ನೆಲ್ಲ ಆತ ಆಗಲೇ ಗಮನಿಸಿದ್ದ. ಆಕಾಶಬಾಣ ಮೂಲಕವೇ ಅಂತರಿಕ್ಷಯಾತ್ರೆ ಸಾಧ್ಯ: ಅದಕ್ಕೆ ಅಂದಿನ ಆಕಾಶಬಾಣಗಳಂತೆ ಘನರೂಪಿ ಇಂಧನ ಪ್ರಯೋಜನವಿಲ್ಲ, ದ್ರವರೂಪಿ ಇಂಧನ ಬೇಕು: ಅದರಲ್ಲಿ ಕುಳಿತುಕೊಳ್ಳಲಿರುವ ಜನರಿಗೆ ಬಲವಾದ ಮೊಹರು ಮಾಡಿದ ಪ್ರತ್ಯೇಕ ಕೋಣೆ ಬೇಕು, ಇಲ್ಲದಿದ್ದರೆ ಅಂತರಿಕ್ಷದ ನಿರ್ವಾತ ಪ್ರದೇಶದಲ್ಲಿ ಅವರು ಅಪಾಯಕ್ಕೊಳಗಾಗುವರು— ಇವೆಲ್ಲವನ್ನಾತ ಆಗಲೆ ಹೇಳಿಟ್ಟಿದ್ದ.

ಕೆಲ ವರ್ಷ ಯಾರೂ ಇದನ್ನು ಲಕ್ಷಿಸಲೇ ಇಲ್ಲ. ಆದರೆ ಝಿಯೋಲ್ಕೊವಸ್ಕಿ ತನ್ನ ಸರ್ವ ಸಮಯವನ್ನು ಈಗ ಈ ವಿಷಯಕ್ಕೇ ಮೀಸಲಿರಿಸಿಬಿಟ್ಟಿದ್ದ. ಅವನು ತನ್ನ ಯೋಜನೆಯನ್ನು ಸಿದ್ಧಾಂತಿಸಿ ಒಂದು ಗ್ರಂಥವನ್ನೇ ಬರೆದ. ಐದು

ವರ್ಷ ಅದು ಪ್ರಕಾಶಕರಿಲ್ಲದೆ ಕೊಳೆತನಂತರ ೧೯೦೩ ರಲ್ಲಿ ಪ್ರಕಟವಾಯಿತು. "ಜೆಟ್ ಪ್ರಚೋದಿತ ಯಂತ್ರಮೂಲಕ ಅಂತರಿಕ್ಷ ಪರಿಶೀಲನೆ" ಎಂದು ಅದರ ಹೆಸರಾಗಿತ್ತು.

ಈ ಸಿದ್ಧಾಂತದಲ್ಲಿ ಮಂಡಿಸಿದ ಅನೇಕ ತತ್ವಗಳು ಇಂದು ಸ್ಪುಟ್ನಿಕ್ಕುಗಳನ್ನೂ ಚಂದ್ರನೌಕೆಗಳನ್ನೂ ಈಗ ಶುಕ್ರನೌಕೆಯನ್ನೂ ಹಾರಿಸಿದ ಆಕಾಶ ಬಾಣಗಳಲ್ಲಿ ಉಪಯೋಗಿಸಲ್ಪಟ್ಟಿವೆಯೆಂಬುದು ಝಿಯೋಲ್ಕೊವಸ್ಕಿಯ ವಾಸ್ತವಿಕ ಬುದ್ಧಿಯನ್ನೂ ವೈಜ್ಞಾನಿಕ ವಿಚಾರ ಸ್ಪಷ್ಟತೆಯನ್ನೂ ತೋರಿಸುತ್ತದೆ. ಅಂದಿನಿಂದ ೨೩ ವರ್ಷ ಕಾಲ ಆತ ಅಸಂಖ್ಯ ಲೇಖಗಳ ಮೂಲಕ ತನ್ನ ಸಿದ್ಧಾಂತವನ್ನು ವಿಸ್ತರಿಸಿದನು. ಪ್ರಾರಂಭದಲ್ಲೇ ಅವನು "ಭೂಮ್ಯಾಕಾಶಗಳ ಕನಸು" ಎಂಬ ಲೇಖದಲ್ಲಿ ಭೂಮಿಗೆ ಕೆಲ ನೂರು ಮೈಲು ದೂರದಲ್ಲಿ ಶಾಶ್ವತವಾದೊಂದು ಉಪಗ್ರಹ ಭ್ರಮಿಸುವಂತೆ ಮಾಡಿ ಅದರಿಂದ ಗ್ರಹಾಂತರಗಳಿಗೆ ಆಕಾಶಬಾಣಗಳನ್ನು ಹಾರಿಸಬೇಕು ಎಂದು ಸೂಚಿಸಿದ್ದ. ಈಗ ವಿಜ್ಞಾನಿಗಳು ಮಾಡಬೇಕೆಂದಿರುವುದೂ ಅದೇ. ಮೊನ್ನೆ ಶುಕ್ರಗ್ರಹಕ್ಕೆ ಹಾರಿಸಿದ ಯಾನವನ್ನು ಇಂಥ ತಾತ್ಕಾಲಿಕ ಉಪಗ್ರಹದಿಂದಲೇ ಹಾರಿಸಲಾಯಿತು.

೨೫ ವರ್ಷ ಕಾಲ ಝಿಯೋಲ್ಕೊವಸ್ಕಿ ತನ್ನ ಕನಸನ್ನು ನನಸು ಮಾಡುವ ಸಲುವಾಗಿ ನಾನಾ ತರದ ಆಕಾಶಬಾಣ ಮಾದರಿಗಳನ್ನು ನಿರ್ಮಿಸುತ್ತಲೇ ಹೋದ. ಇವುಗಳಲ್ಲಿ ಎಲ್ಲವೂ ವ್ಯವಹಾರ್ಯವಾಗಿದ್ದವೆಂದಲ್ಲ. ಆದರೆ ಕೆಲವು ಮಾದರಿಗಳಿಂದ ದೂರಗಾಮಿ ಆಕಾಶ ಬಾಣಗಳನ್ನು ನಿರ್ಮಿಸಲು ಬೇಕಾಗುವ ಮಹತ್ವದ ವೈಜ್ಞಾನಿಕ ತತ್ವಗಳನ್ನಾತ ಮತ್ತಾರಿಗಿಂತಲೂ ಮೊದಲೇ ಮುಂಗಂಡಿದ್ದನೆಂಬುದು ವ್ಯಕ್ತವಾಗುತ್ತದೆ. ಈ ತತ್ವಗಳನ್ನು ಜರ್ಮನ್ನರು ತಮ್ಮ ಯುದ್ಧ ಕಾಲದ ಆಕಾಶ ಬಾಣಾಸ್ತ್ರಗಳಲ್ಲಿ ಉಪಯೋಗಿಸಿಕೊಂಡು ಮಿತ್ರರನ್ನು ಸಾಕಷ್ಟು ತೊಂದರೆಗೊಳಪಡಿಸಿದರು.

ಹದಿನಾರನೇ ವಯಸ್ಸಿನಿಂದ ಗ್ರಹಾಂತರ ಪ್ರಯಾಣದ ಚಿಂತನೆ ಮಾಡುತ್ತಿದ್ದ ಝಿಯೋಲ್ಕೊವಸ್ಕಿ ೧೯೨೬ ರಲ್ಲಿ ಬರೆದ ತನ್ನ ಆತ್ಮಚರಿತ್ರೆಯಲ್ಲಿ ತನ್ನ ಆಶೆಯನ್ನು ಪೂರ್ತಿ ಮಾಡಿಕೊಳ್ಳಲು ತನಗೆ ಸಾಧ್ಯವಾಗಿಲ್ಲೆಂದು ಹಳಹಳಿಸಿದ್ದಾನೆ. ಅವನು ಕಣ್ಮುಂದೆಯೆ ಮನುಷ್ಯ ವಿಮಾನ ಯುಗದಲ್ಲಿ ಪ್ರವೇಶಿಸಿದ್ದ. ಆ ಓಟದಲ್ಲಿ ಗಂಭೀರವಾಗಿ ಝಿಯೋಲ್ಕೊವಸ್ಕಿ ಭಾಗ ವಹಿಸಿದ್ದರೆ ಬಹುಶಃ ಆತನಿಗೆ ಸುಲಭ ಕೀರ್ತಿಯೂ ಅಪಾರ ಧನವೂ ಲಭಿಸಬಹುದಾಗಿತ್ತು. ಗ್ರಹಾಂತರ ಆಕಾಶಬಾಣಕ್ಕೆ ಇನ್ನೂ ಕಾಲ ಪಕ್ವವಾಗಿರಲಿಲ್ಲ.

ಒಂದು ತೊಡಕೆಂದರೆ ಝಿಯೋಲ್ಕೊವಸ್ಕಿ ಎಷ್ಟು ದೊಡ್ಡ ಗಣಿತ-ಭೌತ ವಿಜ್ಞಾನಿಯಾಗಿದ್ದನೋ ಅಷ್ಟು ದೊಡ್ಡ ಎಂಜಿನಿಯರನಾಗಿರಲಿಲ್ಲ. ಅದೇ ಅವನ ಸೋಲಿಗೆ ಕಾರಣವಾಗಿರಬಹುದು. ಆದರೆ ಝಿಯೋಲ್ಕೊವಸ್ಕಿಯ ಜೀವನವನ್ನು ಸೋಲೆಂದು ಹೇಳುವ ಧೈರ್ಯ ಯಾರಿಗಿದೆ? ಇಂದು ರಶಿಯನ್ನರೂ ಅಮೇರಿಕನ್ನರೂ ಕೃತಕ ಉಪಗ್ರಹಗಳನ್ನು ಹಾರಿಸುವುದಕ್ಕೆ ಉಪಯೋಗಿಸುತ್ತಿರುವ ತಂತ್ರಗಳಲ್ಲಿ ಯಾವುದೂ ಝಿಯೋಲ್ಕೊವಸ್ಕಿಯ ಉಚ್ಛಿಷ್ಟವಾಗದೆ ಇಲ್ಲ. ದ್ರವರೂಪಿ ಜಲಜನಕವನ್ನು ಇಂಧನವಾಗಿ ಉಪಯೋಗಿಸುವ ಯೋಚನೆ ಆತನದೇ. ಶ್ರೇಣೀ (multi-stage) ಆಕಾಶ ಬಾಣದ ಉಪಾಯವನ್ನು ಅವನು ಆರಂಭದಲೇ ಸೂಚಿಸಿದ್ದ. ಹಲವು ಆಕಾಶ ಬಾಣಗಳನ್ನು ಒಂದಕ್ಕೊಂದು ಜೋಡಿಸಿ ಹಾರಿಸಬೇಕೆಂದೂ ಅದರಲ್ಲಿರುವ ಇಂಧನ ಉರಿದುಹೋದ ಮೇಲೆ ಅದು ಶ್ರೇಣಿಯಿಂದ ಬಿಡುಗಡೆ ಹೊಂದುವಂತೆ ಮಾಡಿದರೆ ಮುಂದಿನ ಪ್ರಯಾಣದಲ್ಲಿ ಅನವಶ್ಯಕ ಭಾರ ಕಡಿಮೆಯಾಗುತ್ತದೆಂದೂ ಅವನು ಹೇಳಿದ್ದ. ಈ ಕಲ್ಪನೆಯಿಲ್ಲದೆ ಇಂದಿನ ಕೃತಕ ಉಪಗ್ರಹಗಳು ಅಸಾಧ್ಯವಾಗುತ್ತಿದ್ದವು.

ಅಂತರಿಕ್ಷಯಾನ ಮಾಡಿದ ಆಕಾಶ ಬಾಣಗಳು ತಿರುಗಿ ಭೂಮಿಗೆ ಬರಬೇಕಲ್ಲ. ತಿರುಗಿ ಬರುವಾಗ ಅದರ ರಭಸದ ದೆಸೆಯಿಂದ ವಾತಾವರಣ ಘರ್ಷಣೆಯ ಮೂಲಕ ಅದು ಉರಿದು ಹೋಗಲಿಕ್ಕಿಲ್ಲವೆ? ಈ ಪ್ರಶ್ನೆಯನ್ನು ಆತ ಯೋಚಿಸದೆ ಬಿಟ್ಟಿರಲಿಲ್ಲ. ಇದಕ್ಕಾಗಿ ಆಕಾಶ ಬಾಣವು ಭೂಮಿಯ ಸುತ್ತ ವಿಶಿಷ್ಟ ಪಥದಲ್ಲಿ ತಿರುಗುತ್ತ ಅದರ ವೇಗ ಕುಗ್ಗುವಂತೆ ಮಾಡಬಹುದೆಂದಾತ ಸೂಚಿಸಿದ್ದ. ಶ್ರೇಣೀ ಆಕಾಶ ಬಾಣಗಳಲ್ಲಿ ಅರ್ಧ ದಾರಿಯಲ್ಲಿ ಕಳಚಿ ಹಾಕಲಾದ ಖಾಲಿ ಆಕಾಶಬಾಣಗಳನ್ನು ಜೋಡಿಸಿ ಒಂದು ಶಾಶ್ವತ ಅಂತರಿಕ್ಷ ನಿಲ್ದಾಣವನ್ನು ರಚಿಸುವ ವಿಚಾರದಲ್ಲಿ ಆತ ತನ್ನ ಕೊನೆಯ ದಿನಗಳಲ್ಲಿ ಉತ್ಸಾಹದಿಂದ ಸಂಶೋಧನೆಗಳನ್ನು ಸಾಗಿಸಿದ್ದ.

೭೮ ನೇ ವಯಸ್ಸಿನಲ್ಲಿ, ೧೯೩೫ ರಲ್ಲಿ ಝಿಯೋಲ್ಕೊವಸ್ಕಿ ಮರಣ ಹೊಂದಿದ. ಆತ ಗ್ರಹಾಂತರಗಳಿಗೆ ಹೋಗುವ ಆಕಾಶ ಬಾಣಗಳನ್ನು ಕಾಣದೆಯೆ ಇಹಲೋಕವನ್ನು ತ್ಯಜಿಸಬೇಕಾಯಿತು. ನಿಜ ಆದರೆ ತನ್ನ ಆತ್ಮಚರಿತ್ರೆ ಬರೆಯುವಾಗಿದ್ದ ಅಯಶಸ್ವಿ ಭಾವನೆ ಸಾಯುವಾಗ ಅವನಲ್ಲಿ ಉಳಿದಿರಲಿಲ್ಲ. ಜೆಟ್ ಎಂಜನನ್ನು ರೂಪಿಸಲು ತನಗೆ "೪೦ ವರ್ಷ ಹಿಡಿದದ್ದು ನೋಡಿ ಮಂಗಳ ಗ್ರಹಕ್ಕೆ ಹಾರಲು ಮಾನವ ಎಷ್ಟು ಶತಮಾನ ಕಾಯಬೇಕೋ ಎಂದಿದ್ದೆ. ಆದರೆ ಈಗ ಕಾಲ ಸಂಕೋಚಗೊಂಡಿದೆ" ಎಂದಾತ ಸಾಯುವ ಎರಡು ವರ್ಷ ಮೊದಲು ಜಗತ್ತನ್ನು ಕುರಿತು ಬಿತ್ತರಿಸಿದ ಭಾಷಣದಲ್ಲಿ ಆಶೆಯಿಂದಲೇ ಮಾತಾಡಿದ್ದ.

ಅವನ ಕಾರ್ಯಕ್ಕಾಗಿ ದೊರೆತ ಪ್ರಶಂಸೆಯೂ ಕಡಿಮೆಯಾಗಿರಲಿಲ್ಲ. ೧೯೧೭ ರಲ್ಲಿ ಕ್ರಾಂತಿಯಾದ ನಂತರ ಸರಕಾರದ ಪ್ರೋತ್ಸಾಹ ಅವನಿಗೆ ಧಾರಾಳವಾಗಿ ಲಭಿಸಿತು. ೧೯೨೪ ರಲ್ಲಿ ಸೋವಿಯಟ್ ರಶಿಯ ಅವನನ್ನು "ಅಂತರಿಕ್ಷಯಾನದ ಪಿತಾಮಹ" ಎಂದು ಸಾರಿತು. ೧೯೨೩ ರಲ್ಲಿ ಅವನ ವಿಚಾರಗಳನ್ನೊಳಗೊಂಡ "ಆಕಾಶ ಬಾಣದಿಂದ ಗ್ರಹಾಂತರ ಪ್ರಯಾಣ" ಎಂಬೊಂದು ಪುಸ್ತಕ ಹರ್ಮನ್ ಓಬರ್ತ ನೆಂಬವನಿಂದ ಜರ್ಮನ್ ಭಾಷೆಯಲ್ಲಿ ಬರೆಯಲ್ಪಟ್ಟ ನಂತರ ಜಗತ್ತಿನ ಕುತೂಹಲದೃಷ್ಟಿಯೂ ಅವನತ್ತ ಹೊರಳಿತು. ಆತ ಬರೆದ "ಪೃಥ್ವಿಯಾಚೆಗೆ" ಎಂಬ ಕಾದಂಬರಿ ಅತ್ಯಂತ ಜನಪ್ರಿಯವಾಯಿತು.

ಸೋವಿಯಟ್ ಸರಕಾರ ಅವನ ೭೫ ನೇ ಜನ್ಮದಿನೋತ್ಸವವನ್ನು ವಿಜೃಂಭಣೆಯಿಂದ ಆಚರಿಸಿತು. ಸ್ಟಾಲಿನ್ ಸ್ವತಃ ಅವನಿಗೊಂದು ಶುಭಾಶಯದ ತಂತಿ ಕಳಿಸಿದ. ಮೂರು ವರ್ಷಗಳ ನಂತರ ಆತ ಸತ್ತ ಮೇಲೆ ಅವನ ಮನೆಯನ್ನು ರಾಷ್ಟ್ರೀಯ ಸ್ಮಾರಕವಾಗಿ ಮಾಡಲಾಯಿತು. ಆತ ಬಹುಕಾಲ ವಾಸಿಸಿದ್ದ ಕಾಲುಗಾ ಪಟ್ಟಣದಲ್ಲಿ ಒಂದು ಶಿಲಾಸ್ತಂಭ ಅವನ ಧ್ಯೇಯವಾಕ್ಯವನ್ನು ಇಂದಿಗೂ ಉದ್ಘೋಷಿಸುತ್ತಿದೆ.

"ಮಾನವಕುಲ ಚಿರಂತನವಾಗಿ ಭೂಬದ್ಧವಾಗಿ ಉಳಿಯದು. ಅದು ಜಗತ್ತಿನ ಮತ್ತು ಅಂತರಿಕ್ಷದ ಅನುಸಂಧಾನದಲ್ಲಿ ಮೊದಲು ಅಂಜಂಜುತ್ತ ವಾತಾವರಣವನ್ನು ದಾಟಿಹೋಗುವುದು. ಅನಂತರ ಸೂರ್ಯನ ಸುತ್ತಲ ಆಕಾಶವನ್ನೆಲ್ಲ ಗೆಲ್ಲುವುದು." ★



ಕಾಂಗೋಕ್ಕೆ ಹೋದ ಸಂ. ರಾ.
ಯೋಧನೊಬ್ಬನಿಗೆ ಬಂದ
ರೋಮಾಂಚಕ ಅನುಭವ

# ನಾಗರಾಣಿಯ ಕ್ರೌರ್ಯ

ಸಂ. ರಾ. ಯೋಧ



ಮುಕ್ತಾ ರಾಜೆ

ಬೆಲ್ಜಿಯನ್ ಕಾಂಗೋಕ್ಕೆ ಬೆಲ್ಜಿಯಂ ಸ್ವಾತಂತ್ರ್ಯವನ್ನಿತ್ತ ನಂತರ ಯಾದವೀಕಲಹಕ್ಕಾರಂಭವಾಗಿ ಅಲ್ಲಿಯ ಸ್ಥಿತಿ ಹದಗೆಡುತ್ತಲೇ ಹೋಯಿತು. ಸಂಯುಕ್ತರಾಷ್ಟ್ರ ಸಂಘವು ಅಲ್ಲಿಗೆ ತನ್ನ ಸೈನ್ಯವನ್ನು ಕಳಿಸಲು ನಿಶ್ಚಯಿಸಿ ಭಾರತದ ಶ್ರೀ ರಾಜೇಶ್ವರ ದಯಾಲರನ್ನು ತನ್ನ ಪ್ರತಿನಿಧಿಯನ್ನಾಗಿ ನೇಮಿಸಿತು. ಜಗತ್ತಿನ ಲಕ್ಷ್ಯವೆಲ್ಲ ಕಾಂಗೋದ ಮೇಲೆ ಕೇಂದ್ರೀಕೃತವಾಯಿತು. ಆದರೆ ಈ ರಾಜಕೀಯ ಕೋಲಾಹಲದ ನಡುವೆ ಒಂದು ಅತ್ಯಂತ ರೋಮಾಂಚಕಾರಿಯಾದ ಸತ್ಯ ಕಥೆ ಜನರ ಗಮನಕ್ಕೆ ಬರಲೇ ಇಲ್ಲ. ಕಾಂಗೋಕ್ಕೆ ಹೋಗಿದ್ದ ಸ್ವೀಡನ್ನಿನ ಒಂದು ಸೈನಿಕ ಪಥಕದ ಕ್ಯಾಪ್ಟನ್ ನೆಲ್ಸ್ ಬೋಹೆಮನ್ನರ ಕಥೆ ಇದು. ಅವರೀಗ ಅಲ್ಲಿಂದ ತಿರುಗಿ ಬಂದಿದ್ದು ಸ್ವೀಡನ್ನಿನ ಒಂದು ಆಸ್ಪತ್ರೆಯಲ್ಲಿ ಚಿಕಿತ್ಸೆ ಹೊಂದುತ್ತಿದ್ದಾರೆ. ಅವರ ಮೈಮೇಲೆಲ್ಲ ಉಗುರಿನ ಭೀಕರ ಗಾಯಗಳ ಕಲೆಗಳಿವೆ. ಸರ್ಪಗಳ ದೇವಿ ರುವಾನಳ ಚಿತ್ರ ಅವರ ಕಣ್ಮುಂದೆ ಸುಳಿದಾಗಲೆಲ್ಲ ಅವರ ಮೈಕೂದಲು ಈಗಲೂ ನೆಟ್ಟಗಾಗುತ್ತದೆ.

ಕಾಂಗೋದ ದಟ್ಟಡವಿಗಳಲ್ಲಿ ಇನ್ನೂ ಕೆಲ ಮೂಲನಿವಾಸಿಗಳು ವಾಸಿಸುತ್ತಾರೆ. ಅವರಲ್ಲೆಲ್ಲ ಬಾಕೂಟು ಕುಲ ಭೀಕರವಾದದ್ದು. ಇವರಿನ್ನೂ ನರಭಕ್ಷಕರಾಗಿದ್ದಾರೆ. ಸರ್ಪಗಳನ್ನು ಪೂಜಿಸುವ ಇವರು ಪರಮ ವೀರರು. ಅವರ ವಾಸಸ್ಥಾನಕ್ಕೆ ಉಳಿದ ಯಾವ ಕುಲದ ಮನುಷ್ಯನೂ ಹೋಗುವ ಸಾಹಸ ಮಾಡುವುದಿಲ್ಲ. ಈ ಬಾಕೂಟು ಕುಲದ ರಾಣಿ ರುವಾನಾ ಈ ಜನ

" ಧರ್ಮಯುಗ " ದಿಂದ

ರಿಂದ ಅತಿ ನಿಂದ್ಯ ಕಾರ್ಯಗಳನ್ನು ಮಾಡಿಸುತ್ತಿದ್ದಳು. ಇಡೀ ಬಾಕೂಟು ಕುಲ ಅವಳ ಸಂಕೇತದಂತೆ ನಡೆಯುತ್ತಿತ್ತು. ಆಶ್ಚರ್ಯವೆಂದರೆ ಈ ಬಾಕೂಟು ಜನರ ದೇವಿಯಾದ ರುವಾನಾ ಅಚ್ಚ ಬಿಳಿ ಬಣ್ಣದವಳಾಗಿದ್ದಳು. ರುವಾನಾಳ ಶೋಧಕ್ಕಾಗಿ ಸಂಯುಕ್ತ ರಾಷ್ಟ್ರ ಸಂಘವು ಕಳಿಸಬಯಸಿದ ಸೈನಿಕ ತಂಡಕ್ಕೆ ನೆಲ್ಸ್ ಬೋಹೆಮನ್ನರನ್ನು ಕ್ಯಾಪ್ಟನ್ನನ್ನಾಗಿ ಮಾಡಲಾಯಿತು. ಬಾಕೂಟು ಜನರು ಕರಿ ತೊಗಲಿನವರನ್ನು ಸ್ವತಃ ಕೊಂದು ತಿನ್ನುವರಾದರೂ ಬಿಳಿ ಚರ್ಮದವರ ವಧೆ ರುವಾನಾಳ ಮುಖಾಂತರ ಸರ್ಪಗಳ ಪೀಠದ ಮೇಲೆ ಜರುಗುತ್ತಿತ್ತು ಎಂದು ವದಂತಿಯಿತ್ತು. ಬಾಕೂಟು ಜನರು ಹಿಡಿದು ರುವಾನಳ ಬಳಿ ಒಯ್ದಾಗ ಅವಳಿಗೆ ಎಲ್ಲವನ್ನೂ ತಿಳಿಸಿ ಹೇಳಬೇಕು ಎಂದು ಬೊಹೆಮನ್ನರಿಗೆ ಹೇಳಿದ್ದರು. ಕೇಳಿಕೆಯ ಮಾತಿನಂತೆಯೆ ಎಲ್ಲ ನಡೆಯಿತು. ಕ್ಯಾಪ್ಟನ್ ಬೊಹೆಮನ್ನರ ಸಂಗಡಿಗರನ್ನೆಲ್ಲ ಕೊಂದ ನಂತರ ಬಾಕೂಟು ಜನರು ಅವರನ್ನು ಬಂಧಿಸಿ ಒಂದು ಅಂಧಕಾರಮಯ ಗುಡಿಸಲಿನಲ್ಲಿ ಒಯ್ದು ಚೆಲ್ಲಿದರು. ಅಲ್ಲಿ ಅವರು ಎಚ್ಚರ ತಪ್ಪಿದರು.

ಅವರಿಗೆ ಎಚ್ಚರ ಬಂದಾಗ ಅವರ ಸಮ್ಮುಖದಲ್ಲಿ ಅತ್ಯಂತ ಸುಂದರಿಯಾದ, ಆದರೆ ಅಷ್ಟೇ ಭಯಂಕರ, ಕ್ರೂರ ದೃಷ್ಟಿಯುಳ್ಳ ವಿಚಿತ್ರ ವೇಷದ, ಅರೆನಗ್ನ ಸ್ತ್ರೀ ನಿಂತಿದ್ದಳು. ಬೊಹೆಮನ್ ಇಂಗ್ಲೀಷಿನಲ್ಲಿ ಕೇಳಿದರು, "ನೀನು ರುವಾನಾ ಏನು ?"

ಅವಳು ಉತ್ತರವಾಗಿ ತಿರಸ್ಕಾರದಿಂದ ನೆಲದ ಮೇಲೆ ಉಗುಳಿದಳು.

ಬೊಹೆಮನ್ ಫ್ರೆಂಚ್‌ಭಾಷೆಯಲ್ಲಿ "ನಾನು ಸಂಯುಕ್ತ ರಾಷ್ಟ್ರಸಂಘದ ಪ್ರತಿನಿಧಿ. ನಿನ್ನನ್ನು ಹುಡುಕುವುದಕ್ಕಾಗಿಯೆ ನನ್ನನ್ನು ಕಳಿಸಿದ್ದಾರೆ" ಎಂದರು.

ಆ ಸುಂದರಿ ಫ್ರೆಂಚ್ ಭಾಷೆಯಲ್ಲಿ ಉತ್ತರವಿತ್ತಳು: "ಇಂದು ನೀನು ಸಾಯಬೇಕಾಗುವುದು. ಸರ್ಪಗಳ ಪೀಠದ ಮೇಲೆ ಇಂದು ನಿನ್ನನ್ನು ಬಲಿ ಕೊಡಲಾಗುವುದು."

"ಆದರೆ ನನ್ನ ಮಾತುಗಳನ್ನಿಷ್ಟು...."

"ನಮಗೆ ನಿನ್ನ ಮಾತುಗಳು ಬೇಕಿಲ್ಲ. ರಕ್ತ ಬೇಕು," ರುವಾನಾ ಗುಡುಗಿದಳು.

ಇಷ್ಟೆಂದು ಅವಳು ಅಲ್ಲಿಂದ ಹೋಗಿಬಿಟ್ಟಳು. ಕಾಂಗೊ ಈಗ ಸ್ವತಂತ್ರ ರಾಜ್ಯವಾಗಿದೆಯೆಂದು ಅವಳಿಗೆ ಹೇಗೆ ತಿಳಿಸಿ ಹೇಳಬೇಕೆಂಬುದು ಕ್ಯಾಪ್ಟನ್ನರಿಗೆ ತಿಳಿಯಲಿಲ್ಲ. ಈಗ ಕಾಂಗೋದ ಕಾಡು ಕುಲದವರನ್ನು ನಾಗರಿಕರನ್ನಾಗಿ ಮಾಡಲು ಬಯಸುತ್ತಿದ್ದಾರೆ. ಸರಕಾರ ಅವರಿಗೆ ಸಕಲ ಸಹಾಯ ಮಾಡಲು ಸಿದ್ಧವಿದೆ ಎಂದು ಹೇಗೆ ತಿಳಿಹೇಳಬೇಕು?

ಇಲ್ಲಿಗೆ ಬರುವ ಮೊದಲು ಯಾವುದನ್ನು ಕಪೋಲ ಕಲ್ಪಿತವೆಂದು ಬೊಹೆಮನ್ ಭಾವಿಸಿದ್ದರೊ ಅವೆಲ್ಲ ಈಗ ನಿಜವೆಂದು ಪ್ರತ್ಯಯಕ್ಕೆ ಬರತೊಡಗಿತ್ತು. ಬಾಕೂಟು ಜನರು ಜೀವಂತ ಮನುಷ್ಯರ ರಕ್ತವನ್ನು ತೆಗೆದು ಅದರಲ್ಲಿ ಬೇರೆ ಬೇರೆ ರಸಗಳನ್ನು ಕೂಡಿಸಿ ಕುಡಿಯುತ್ತಾರೆ. ಇನ್ನೂ ಅನೇಕ ಬಗೆಯ ಅಸಹ್ಯ ಕಾರ್ಯಗಳನ್ನು ಮಾಡುತ್ತಾರೆ ಎಂಬೆಲ್ಲ ಮಾತುಗಳು ನಿಜವಿರಬೇಕು ಎಂದು ಅವರಿಗೆ ನಂಬಿಗೆಯಾಗತೊಡಗಿತು. ಇಂಥ ಕಾಡು ಜನರಿಗೆ ಸಂಯುಕ್ತ ರಾಷ್ಟ್ರ ಸಂಘದ ಸಂದೇಶವನ್ನು ಮುಟ್ಟಿಸುವುದು ಹೇಗೆ ಎಂಬುದು ಅವರ ಬುದ್ಧಿಗೆ ಹೊಳೆಯದಾಗಿತ್ತು.

ರುವಾನಾ ಹೋದಳು. ಇಬ್ಬರು ಬಾಕೂಟು ಸಿಪಾಯಿಗಳು ಬೊಹೆಮನ್ನರ ಕಾವಲಿಗೆ ನಿಂತರು. ಅವರಿಬ್ಬರೂ ಭಯಂಕರವಾಗಿ ಕಾಣಿಸುತ್ತಿದ್ದರು. ಎದೆ, ಹೆಗಲು ಮತ್ತು ತಲೆಗಳಿಗೆ ಅಚ್ಚ ಕೆಂಪು ಬಣ್ಣವನ್ನು ಬಳಿದುಕೊಂಡಿದ್ದರು. ಅವರ ಉಗುರುಗಳು ವಿಪರೀತ ಬೆಳೆದಿದ್ದವು.

ಬೊಹೆಮನ್ನರ ಅಂಗಾಂಗಗಳೆಲ್ಲ ಬಹಳ

ನೋಯುತ್ತಿದ್ದವು. ಅವರಿಗೆ ಅಸಹ್ಯ ನೀರಡಿಕೆ ಯಾಗಿತ್ತು. ಅವರು ನೀರನ್ನು ಯಾಚಿಸಿದಾಗ ಆ ಬಾಕೂಟು ಯೋದ್ಧರು ಹುಡುಗಿಯರಂತೆ ಕಿಸಕ್ಕನೆ ನಕ್ಕು ಅವರ ಯಾತನೆಯನ್ನು ಕಂಡು ನಲಿಯತೊಡಗಿದರು.

ಸಂಜೆಯಾಗುತ್ತ ಬಂತು. ಅತ್ಯಂತ ಅಪಸ್ವರ ದಲ್ಲಿ ತಾಳದ ಕಲ್ಪನೆಯೂ ಇಲ್ಲದೆ ನಗಾರಿಗಳು ಬಾರಿಸತೊಡಗಿದವು. ಒಡೆದ ಕೊಳಲಿನ ಅಪ-ಶ್ರುತಿಯಂಥ ಸ್ವರದಲ್ಲಿ ಜನರು ಹಾಡತೊಡಗಿ ದರು. ಬೊಹೆಮನ್ನರ ದೇಹದ ಒಂದೊಂದು ನರವೂ ಪೀಡೆಯಿಂದ ಹೊಡೆದುಕೊಳ್ಳುತ್ತಿತ್ತು. ಸಮಯ ತ್ವರಿತಗತಿಯಲ್ಲಿ ಸಾಗುತ್ತಿತ್ತು. ಅಕ ಸ್ಮಾತ್ತಾಗಿ ನಗಾರಿಯ ಸಪ್ಪಳ ನಿಂತಿತು. ಬೊಹೆ ಮನ್ನರ ಗುಡಿಸಲಿನಲ್ಲಿ ಒಂದು ವಿಚಿತ್ರ ಜೀವಿ ಪ್ರವೇಶಿಸಿತು. ಯಾವುದೋ ಕಾಡು ಪ್ರಾಣಿ-ಯಿರಬೇಕು ಎಂದು ಬೊಹೆಮನ್ ಮೊದಲು ತಿಳಿದರು. ಆದರೆ ಲಕ್ಷ್ಯಗೊಟ್ಟು ನೋಡಿದಾಗ ಅದೊಂದು ಕಾಲಿನಿಂದ ತಲೆಯ ವರೆಗೆ ದೊಡ್ಡ ಬುರಕೆಯನ್ನು ಧರಿಸಿದ ವ್ಯಕ್ತಿಯೆಂದು ಅವರಿಗೆ ಗೊತ್ತಾಯಿತು. ಅದರ ಎರಡು ಕಾಲುಗಳು ಮತ್ತು ಎರಡು ಕೈಗಳು ಕಾಣಿಸುತ್ತಿದ್ದವು. ಆ ಬುರಕಾ ವಿಷಸರ್ಪದ ಹೆಡೆಯಂತಿತ್ತು. ವಿಷದ ಹಲ್ಲುಗಳಿರಬೇಕಾದಲ್ಲಿ ಹಂದಿಯ ಹಲ್ಲುಗಳ ಚಿತ್ರ ಬರೆದಿದ್ದರು.

ಈತ ಬಾಕೂಟು ಜನರ ಪುರೋಹಿತ ಎಂದು ಬೊಹೆಮನ್ನರಿಗೆ ಅಂದಾಜಾಯಿತು. ಆತನ ಹಿಂದೆ ಆರು ತರುಣಿಯರು ಬಂದರು. ಅವರ ಕರಿ ದೇಹ ಹಿಲಾಲುಗಳ ಬೆಳಕಿನಲ್ಲಿ ಅಪೂರ್ವ ರೀತಿಯಲ್ಲಿ ಮಿನುಗುತ್ತಿತ್ತು. ಈ ತರುಣಿಯರ ನಡುವಿದ್ದ ರುವಾನಾಳ ಮುಖದ ಮೇಲಿನ ಪ್ರತಿ ಯೊಂದು ಗೆರೆಯಲ್ಲಿಯೂ ದುಷ್ಟ ವಾಸನೆ ಎದ್ದು ಕಾಣುತ್ತಿತ್ತು. ಕಾವಲುಗಾರರಿಗೆ ಹೊರಟು ಹೋಗಲು ಅವಳು ಆಜ್ಞಾಪಿಸಿ "ರುವಾನಾ ಬಂದಿದ್ದಾಳೆ. ಸರ್ಪಗಳ ಪೀಠವನ್ನೇರಲು ಸಿದ್ಧನಾಗು" ಎಂದು ಬೊಹೆಮನ್ನರಿಗೆ ಹೇಳಿದಳು.

ಕ್ಯಾಪ್ಟನ್ನರು ಮಾತಾಡಬಯಸಿದರು. ಆದರೆ ಅವರ ನಾಲಿಗೆ ಅಂಟಿಕೊಂಡುಬಿಟ್ಟಿತು. ಇದೆಲ್ಲ ಮೂರ್ಖತನ, ನನ್ನ ಮಾತು ಕೇಳು ಎಂದು ಕೂಗಿ ಹೇಳಲು ಅವರು ಬಯಸಿದರು. ಆದರೆ ಶಬ್ದಗಳು ಗಂಟಲಲ್ಲಿಯೆ ಉಳಿದುಬಿಟ್ಟವು. ಅವರು ಆ ರಾಕ್ಷಸಿ ದೇವಿಯನ್ನು ಮಿಕಿ ಮಿಕಿ ನೋಡುತ್ತ ಬಿದ್ದುಕೊಂಡರು. ರುವಾನಾ ಒಬ್ಬ ತರುಣಿಯ ಕೈಲಿದ್ದ ಜಲಪಾತ್ರೆಯನ್ನು ತೆಗೆದು ಕೊಂಡು ಅದರಲ್ಲಿದ್ದ ಸುಗಂಧಿತ ಜಲವನ್ನು ಕ್ಯಾಪ್ಟನ್ನರ ತಲೆಯ ಮೇಲೆ ಚಿಮುಕಿಸಿದಳು, ಅಪವಿತ್ರ ವ್ಯಕ್ತಿಯನ್ನು ಶುದ್ಧಗೊಳಿಸುವವಳಂತೆ. ಆ ಮೇಲೆ ಮೊಣಕಾಲೂರಿ ಕುಳಿತು ಮಾಂತ್ರಿಕ ರಂತೆ ಮಂತ್ರ ಗುಣಗುಣಿಸುತ್ತ ಬೊಹೆಮನ್ನರ ಮೈಮೇಲೆಲ್ಲ ಕೈಯಾಡಿಸಿದಳು. ಆಮೇಲೆ ಅವರ ಮೈಮೇಲಿನ ಅರಿವೆಯನ್ನು ಎಳೆದು ತೆಗೆದು ಚಪ್ಪಾಳೆ ಬಾರಿಸಿದಳು. ಆಗ ಅವಳ ಸಂಗಡ ಬಂದಿದ್ದ ಆರೂ ತರುಣಿಯರು ಬೊಹೆಮನ್ನರ ಮೈಮೇಲೆ ಬಿದ್ದು ಪರಚತೊಡಗಿದರು. ಅವರ ಮೈಮೇಲಿನ ಅರಿವೆಗಳನ್ನೆಲ್ಲ ಹರಿದು ಹಾಕಿದರು. ಕೈಕಾಲುಗಳನ್ನು ಕಟ್ಟಿದ್ದುದರಿಂದ ಬೊಹೆಮ-ನ್ನರು ಯಾವ ಪ್ರತಿಕಾರವನ್ನೂ ಮಾಡುವಂತಿರ ಲಿಲ್ಲ. ಆ ತರುಣಿಯರು ಅವರನ್ನು ಪರಚಿ, ಚಿವುಟಿ, ಕಚ್ಚಿ ಅವರು ಚಡಪಡಿಸುವುದನ್ನು ಕಂಡು ಸಂತಸದಿಂದ ಕೇಕೆ ಹಾಕಿದರು. ತಮ್ಮ ಉಗುರುಗಳಿಂದ ಅವರ ಎದೆ, ಬೆನ್ನು, ಕಾಲು ಗಳ ಮೇಲೆ ಸುಂದರ ಸರ್ಪಾಕೃತಿಗಳನ್ನು ಬರೆ ದರು. ಅವರ ಮೈಯಿಂದ ರಕ್ತ ಹರಿಯತೊಡಗಿ ದಾಗ ತಮ್ಮ ನಾಲಗೆಗಳಿಂದ ನೆಕ್ಕತೊಡಗಿದರು.

ಈ ರೀತಿ ಪರಮ ಯಾತನೆಗೊಳಪಡಿಸಿದ ನಂತರ ಆ ತರುಣಿಯರಿಗೆ ಸಾಕುಮಾಡಲು ರುವಾನಾ ಆದೇಶವಿತ್ತಳು. ಅವರು ಹೊರಟು ಹೋದ ನಂತರ ರುವಾನಾ ಕಿಂಚಿತ್ ಕರುಣ ಸ್ವರದಲ್ಲಿ ಹೇಳಿದಳು : " ನೀವು ನನ್ನ ಈ ಪವಿತ್ರ

ಕನ್ಯೆಯರನ್ನು ಕ್ಷಮಿಸುವಿರೆಂದು ಆಶಿಸಿದ್ದೇನೆ. ಅವರು ನಿರುಪಾಯರು. ತಮ್ಮ ಧರ್ಮ ಕಟ್ಟಳೆಗೆ ಬದ್ಧರಾಗಿದ್ದಾರೆ."

ವೇದನೆಯಿಂದ ಚಡಪಡಿಸುತ್ತಿದ್ದ ಕ್ಯಾಪ್ಟನ್ ಬೊಹೆಮನ್ ಸಿಟ್ಟಿನಿಂದ, "ನಿನ್ನ ತಲೆ ಕೆಟ್ಟಿರುವುದೇ ನಿಜ" ಎಂದರು.

"ಹೌದು. ನನಗೂ ಒಮ್ಮೊಮ್ಮೆ ಹಾಗನಿಸುತ್ತದೆ."

"ನೀನು ನಿಜವಾಗಿಯೂ ನಿನ್ನನ್ನು 'ದೇವಿ' ಎಂದು ತಿಳಿದುಕೊಂಡಿರುವಿಯಾ ?"

"ನಾನೇನೂ ಅಷ್ಟು ಮೂರ್ಖಳಲ್ಲ. ಬಾಕೂಟು ಜನರು ನನ್ನನ್ನು ತಮ್ಮ ದೇವಿಯೆಂದು ತಿಳಿಯುತ್ತಾರೆಂಬುದು ಮಾತ್ರ ನಿಜ. ಅಲ್ಲ ಎಂದು ಅವರಿಗೆ ಗೊತ್ತಾದರೆ ಅವರು ನನ್ನನ್ನೇ ಕೊಂದು ಹಾಕುವರು. ಈ ದೇವೀತ್ವವೇ ನನ್ನನ್ನು ಬದುಕಿಸುವ ತಾಯತವಾಗಿದೆ."

"ನೀನೇಕೆ ಓಡಿಹೋಗುವುದಿಲ್ಲ ?"

"ಬಾಕೂಟು ಜನ ತಮ್ಮ ದೇವದೇವತೆಗಳನ್ನು ಪೂಜಿಸುತ್ತಾರೆ, ಆದರೆ ನಂಬುವುದಿಲ್ಲ" ರುವಾನಾ ಹೇಳಿದಳು.

"ಅಂದರೆ ನೀನು ಇಲ್ಲಿಯೇ ನಿನ್ನ ಜೀವನವನ್ನೆಲ್ಲ ಕಳೆಯುವಿಯಾ ?"

ರುವಾನಾ ನಿಟ್ಟುಸಿರು ಬಿಟ್ಟು ನುಡಿದಳು. "ಇನ್ನೇನು ಮಾಡಲಿ? ನನ್ನ ಜೀವನ ಇಲ್ಲಿಯೆ ಕಳೆಯಬೇಕಾಗಿದೆ. ಈಗ ನಾನು ನಿಮ್ಮನ್ನು ಬದುಕಿಸಬೇಕೆಂದರೂ ಬದುಕಿಸಲಾರೆ. ನಿಮ್ಮನ್ನು ಉಳಿಸಲು ಯತ್ನಿಸಿದರೆ ನಾವಿಬ್ಬರೂ ಬಾಕೂಟು ಜನರಿಂದ ಕೊಲ್ಲಲ್ಪಡುವೆವು. ಬಹಳವೆಂದರೆ ಪೀಠದ ಮೇಲೆ ನಿಮಗೆ ಆದಷ್ಟು ಕಡಿಮೆ ಯಾತನೆಯಾಗುವಂತೆ ನಾನು ಮಾಡಬಲ್ಲೆ. ಆದಷ್ಟು ಬೇಗ ನಿಮಗೆ ಮರಣ ಬರುವಂತೆ ಮಾಡುವೆನೆಂದು ನಂಬಿ."

"ಆದರೆ ಬೇರೆ ಯಾವುದಾದರೂ ಹಾದಿಯನ್ನು ಹುಡುಕಲು ಬಾರದೆ? ಯಾವುದೊಂದ ಉಪಾಯದಿಂದ .."

"ಇಲ್ಲ." ಆಮೇಲೆ ಬಾಕೂಟು ಜನರು ತಾವು ಹಿಡಿದು ತಂದವರೊಡನೆ ಇದೇ ರೀತಿಯಾಗಿ ನೂರಾರು ವರ್ಷಗಳಿಂದ ನಡೆದುಕೊಳ್ಳುತ್ತ ಬಂದಿದ್ದಾರೆಂದು ರುವಾನಾ ಹೇಳಿದಳು. ಅವರ ಪುರೋಹಿತರ ಬದಲು ತಾನು ಈಗ ಅವರ ಕಾರ್ಯವನ್ನು ಮಾಡುತ್ತಿರುವುದೇ ಈ ಸಂಪ್ರದಾಯದಲ್ಲಿ ಆಗಿರುವ ಬದಲಾವಣೆಯೆಂದು ತಿಳಿಸಿದಳು.

ಜನರನ್ನು ಕೊಂದ ಬಳಿಕ ನೀನೂ ಅವರ ರಕ್ತವನ್ನು ಕುಡಿಯುವಿಯಾ? ಎಂದು ಬೊಹೆಮನ್ ಕೇಳಿದಾಗ ನಿರುಪಾಯಳಾಗಿ ತಾನು ಹಾಗೆ ಮಾಡುವುದಾಗಿ ರುವಾನಾ ಹೇಳಿದಳು. ಅವಳು ತನ್ನ ಕತೆಯನ್ನು ಹೇಳಿದಳು. ಅವಳು ತನ್ನ ೧ಳನೆಯ ವಯಸ್ಸಿನಲ್ಲಿ ಪ್ಯಾರಿಸ್ಸಿನ ಒಂದು ಶಾಲೆಯಲ್ಲಿ ಕಲಿಯುತ್ತಿದ್ದಳು. ಆಗ ಅವಳ ಹೆಸರು ಜೆನೆಟಿ ಫೆಬ್ರೆ ಎಂದಿತ್ತು. ಒಂದು ದಿನ ಅವಳು ತನ್ನ ತಂದೆತಾಯಿಗಳೊಡನೆ ಕಾಂಗೋದ ಒಂದು ನದಿಯಲ್ಲಿ ನೌಕಾವಿಹಾರ ಮಾಡುತ್ತಿದ್ದಾಗ ಒಂದೆಡೆ ದೋಣಿ ಮಗುಚಿಕೊಂಡಿತು. ತಂದೆ-ತಾಯಿ ಸತ್ತರೊ ಬದುಕುಳಿದರೊ ಅವಳಿಗೆ ಗೊತ್ತಿರಲಿಲ್ಲ. ಅವಳು ಮಾತ್ರ ಒಂದು ಅಡವಿಯಲ್ಲಿ ಏಕಾಂಗಿಯಾಗಿ ಬಿದ್ದುಕೊಂಡಿದ್ದಳು. ತನ್ನ ಎದುರು ಒಂದು ದೊಡ್ಡ ಸರ್ಪವನ್ನು ಕಂಡು ಅವಳು ಮತ್ತೆ ಮೂರ್ಛೆ ಹೋಗಿದ್ದಳು. ಸರ್ಪ ಅವಳ ಮೈಗೆ ಸುತ್ತು ಹಾಕಿ ಕುಳಿತುಕೊಂಡಿತ್ತು. ಆ ಅವಸ್ಥೆಯಲ್ಲಿಯೆ ಬಾಕೂಟು ಜನರು ಅವಳನ್ನು ಕಂಡರು. ಇದೊಂದು ರಹಸ್ಯಮಯ ಶಕುನವೆಂದು ಅವರು ಭಾವಿಸಿದರು. ಯಾವುದೋ ಹಳೆಯ ಭವಿಷ್ಯವಾಣಿ ಈ ರೂಪದಲ್ಲಿ ನಿಜವಾಗಿತ್ತು. ಸರ್ಪಗಳ ದೇವಿ ರುವಾನಾ ಪ್ರಕಟವಾಗಿದ್ದಳು ಅವರ ದೃಷ್ಟಿಯಲ್ಲಿ.

"ಕಳೆದ ಹನ್ನೆರಡು ವರ್ಷಗಳಲ್ಲಿ ನೀನೆಷ್ಟು ಜನರನ್ನು ಕೊಂದಿರುವಿ ? " ಬೊಹೆಮನ್ ಕೇಳಿ

ದರು.

"ಬಹಳ ಜನರನ್ನು ಕೊಂದಿದ್ದೇನೆ. ಅವರಲ್ಲಿ ನಾಲ್ವರು ಬಿಳಿಯರಿದ್ದರು. ಅವರಲ್ಲೊಬ್ಬ ಕ್ಯಾಪ್ಟನ್‌ನಿದ್ದ. ಬಾಕೂಟು ಜನ ಆಗಾಗ ಬೇರೆ ಕುಲದವರನ್ನು ಹಿಡಿದು ತಂದು ಕೊಲ್ಲುತ್ತಾರೆ."

ತಾನು ಸರ್ಪಪೀಠದ ಮೇಲೆ ಸಾಯುವಾಗ ಜೆನೆಟಿ ಫೆಬ್ರೆಯನ್ನು ಕೊಂದೇ ಸಾಯುವೆ ಎಂದು ಕ್ಯಾಪ್ಟನ್ ಬೊಹೆಮನ್ ಮನದಲ್ಲಿಯೆ ಅಂದುಕೊಂಡರು.

ಮತ್ತೆ ಒಮ್ಮಿಂದೊಮ್ಮೆ ನಗಾರಿಗಳ ಸಪ್ಪಳ ಕೇಳಿಸತೊಡಗಿತು. ಅದನ್ನು ಕೇಳಿದೊಡನೆ ರುವಾನಾಳ ಹಗಲುಗನಸು ಮುಗಿದಂತಾಗಿ ಅವಳು ಯಂತ್ರವತ್ ಎದ್ದು ನಿಂತು "ಸಮಯ್ಯವಾಯಿತು" ಎಂದಳು. ಮತ್ತೆ "ಹೆದರಬೇಡಿ. ನಿಮಗೆ ಆದಷ್ಟು ಕಡಿಮೆ ಯಾತನೆಯಾಗುವಂತೆ, ಮಾಡುತ್ತೇನೆ" ಎಂದಳು. ಅಷ್ಟರಲ್ಲಿ ಪುನಃ ಆ ಆರು ತರುಣಿಯರು ಒಳಗೆ ಬಂದರು. ಅವರ ಕರಿ ದೇಹದ ಕೆಂಪು ಕಣ್ಣುಗಳು ಕ್ರೂರವಾಗಿ ಹೊಳೆಯುತ್ತಿದ್ದವು. ಅವರು ಬಂದವರೇ ಕ್ಯಾಪ್ಟನ್ನರನ್ನು ಹೆಣವನ್ನೆತ್ತಿದಂತೆ ಎತ್ತಿಕೊಂಡು ರುವಾನಾಳ ನೇತೃತ್ವದಲ್ಲಿ ಸರ್ಪಪೀಠಕ್ಕೆ ಒಯ್ದರು. ಪೀಠ ಸಮೀಪಿಸಿದಂತೆ ಬಾಕೂಟು ಜನರ ಅಪಸ್ವರದ ಸಂಗೀತ ಕಳೆಯೇರುತ್ತಿತ್ತು. ಬೊಹೆಮನ್ನರನ್ನು ಪೀಠದ ಮೇಲೆ ಚೆಲ್ಲಿ ಅವರ ಮೊಣಕಾಲುಗಳ ನಡುವೆ ಒಂದು ಪೆಟ್ಟಿಗೆ ತುರುಕಿದರು.

ಎರಡೂ ಕೈಗಳನ್ನು ಮೇಲೆತ್ತಿ ಹಿಡಿದುಕೊಂಡು ರುವಾನಾ ಮೆಲ್ಲಗೆ ಪೀಠವನ್ನೇರಿ ಬಂದಳು. ಪೂಜೆಗಾಗಿ ನೆರೆದಿದ್ದ ಆ ಕಾಡು ಜನರತ್ತ ಮುಖ ತಿರುಗಿಸಿ ಅವಳು ನಿಂತಾಗ ಅವರೆಲ್ಲ ಒಮ್ಮಿಂದೊಮ್ಮೆ ಸ್ತಬ್ಧರಾದರು. ಪ್ರಾರ್ಥನೆ ಹೇಳಿದ ನಂತರ ಅವಳು ಬೊಹೆಮನ್ನರ ಮೊಣಕಾಲುಗಳ ನಡುವಿದ್ದ ಪೆಟ್ಟಿಗೆಯಿಂದ ಒಂದು ವಿಷಸರ್ಪವನ್ನು ಹೊರಗೆ ತೆಗೆದಳು. ಜನರೆಲ್ಲ ಸಂತೋಷದಿಂದ ಅರಳಿದರು. ರುವಾನಾ ಆ ಸರ್ಪವನ್ನು ಬೊಹೆಮನ್ನರ ಎದೆಯ ಮೇಲಿಟ್ಟಾಗ ಅವರ ಮುಖ ಇನ್ನಿಷ್ಟು ಅಗಲವಾಯಿತು. ರುವಾನಾ ಮೆಲ್ಲಗೆ "ಸತ್ತವರಂತೆ ನಿಶ್ಚಲವಾಗಿ ಬಿದ್ದುಕೊಂಡಿರಿ. ಅಂದರೆ ಸರ್ಪ ಕಚ್ಚುವುದಿಲ್ಲ" ಎಂದು ಬೊಹೆಮನ್ನರಿಗೆ ಹೇಳಿದಳು.

ಧಾರ್ಮಿಕ ವಿಧಿಗಳು ನೆರವೇರುತ್ತಿದ್ದಂತೆ ಆರು ಸರ್ಪಗಳು ಬೊಹೆಮನ್ನರ ಎದೆಯ ಮೇಲೆ ಹರಿದಾಡತೊಡಗಿದ್ದವು. ತುಸು ಅಲುಗಾಡಿದರೆ ಸರ್ಪ ಕಡಿದೀತೆಂಬ ಭಯದಿಂದ ಅರ್ಧಮೃತರಂತಾದ ಬೊಹೆಮನ್ ಶಿಲೆಯಂತೆ ಬಿದ್ದುಕೊಂಡಿದ್ದರು. ಆದರೆ ಏನನ್ನಾದರೂ ಮಾಡಬೇಕು, ಕೂಡಲೆ ಮಾಡಬೇಕು ಎಂಬ ವಿಚಾರ ಅವರಲ್ಲಿ ಸುತ್ತುತ್ತಿತ್ತು. ರುವಾನಾ ಒಂದು ಹೆಜ್ಜೆ ಹಿಂದೆ ಸರಿದು ತಮ್ಮತ್ತ ತಿರುಗಿದಾಗ ಮರಣದ ಕ್ಷಣ ಬಂತು ಎಂದು ಅವರಿಗೆ ತಿಳಿಯಿತು. ಆಗ ಅವರು ತಮ್ಮೆಲ್ಲ ಶಕ್ತಿಯಿಂದ ಎದೆಯನ್ನು ಮೇಲೆತ್ತಿ ಝಾಡಿಸಿದಾಗ ಆರೂ ಸರ್ಪಗಳು ಕೆಳಗೆ ಹಾರಿ ಬಿದ್ದವು. ನೆರೆದಿದ್ದ ಆ ಕಾಡು ಜನರಲ್ಲಿ ಗಡಿಬಿಡಿಯೆದ್ದಿತು. ಆ ಸರ್ಪಗಳಲ್ಲಿ ರುವಾನಾಳ ಕಾಲಿನ ಬಳಿ ಬಿದ್ದಿದ್ದ ಕೃಷ್ಣಸರ್ಪವೊಂದು ಅವಳ ಹಿಮ್ಮಡವನ್ನು ಕಚ್ಚಿಬಿಟ್ಟಿತು. ಉಳಿದ ಸರ್ಪಗಳೆಲ್ಲ ಪೀಠದಿಂದ ಕೆಳಗಿಳಿದು ಓಡತೊಡಗಿದಾಗ ಜನರೆಲ್ಲ ಹೌಹಾರಿ ಪಲಾಯನ ಮಾಡತೊಡಗಿದರು.

ಒಂದು ನಿಮಿಷ ನಿಶ್ಚಲವಾಗಿ ನಿಂತ ರುವಾನಾ ತನ್ನನ್ನು ಕಡಿದ ಸರ್ಪದ ಮೈಮೇಲೆ ಬಹು ಪ್ರೀತಿಯಿಂದ ಕೈಯಾಡಿಸಿದಾಗ ಬೊಹೆಮನ್ನರು ದಂಗಾಗಿ ಹೋದರು. ಕಣ್ಣಲ್ಲಿ ನೀರು ತುಂಬಿಕೊಂಡು ಅವಳು, "ನನ್ನ ಸಾವು ಈ ಪೀಠದ ಮೇಲೆಯೆ ಆಗಬೇಕೆಂದು ನನ್ನ ದೇವತೆಯ ಇಚ್ಛೆ ಇತ್ತು. ಸರ್ಪಾತ್ಮಗಳು ರುವಾನಾಳ ಮರಣವನ್ನು ಬಯಸಿರುವುದರಿಂದ ಅವಳೀಗ

ಸಾಯಲೇಬೇಕು," ಎಂದಳು.

ಮುಕ್ತಿಯ ಆನಂದದಿಂದ ಅವಳ ಕಣ್ಣುಗಳಲ್ಲಿ ನೀರು ತುಂಬಿತ್ತೊ ಅಥವಾ ಸಾವು ಬಂತೆಂದು ಬಂದಿತ್ತೊ ಹೇಳುವುದು ಸಾಧ್ಯವಿಲ್ಲವಾದರೂ ಅವಳ ಮುಖದ ಮೇಲೊಂದು ವಿಚಿತ್ರ ಬಗೆಯ ಸಂತೋಷದ ಹೊಳಪಿದ್ದುದು ಮಾತ್ರ ನಿಜವಾಗಿತ್ತು. ಅವಳು ಸರ್ರನೆ ಪೀಠದ ಒಂದು ತುದಿಗೆ ಹೋಗಿ ಸರ್ಪಾಕೃತಿಯ ಹಿಡಿಕೆಯಿದ್ದ ಒಂದು ಹರಿತವಾದ ಚೂರಿಯನ್ನೆತ್ತಿಕೊಂಡಳು. ಹಾ! ಇನ್ನು ತನ್ನನ್ನು ಇರಿದುಕೊಳ್ಳುವಳು ಎಂದು ಬೋಹೆಮನ್ ತಿಳಿದರು. ರುವಾನಾ ಹೇಳಿದಳು. "ಈ ಚೂರಿಯಿಂದಲೇ ನಾನಿಲ್ಲಿ ನೂರಾರು ಜನರ ಕೊಲೆ ಮಾಡಿದ್ದೇನೆ. ಆದರೆ ನಿಮ್ಮನ್ನು ಮುಕ್ತ ಮಾಡಬೇಕೆಂದೇ ದೇವರ ಇಚ್ಛೆಯಾಗಿರಬೇಕು." ಇಷ್ಟೆಂದು ಅವಳು ಬೊಹೆಮನ್ನರನ್ನು ಕಟ್ಟಿ ಹಾಕಿದ್ದ ಹಗ್ಗವನ್ನು ಕತ್ತರಿಸಿದಳು. ಕಂಪಿತ ಸ್ವರದಲ್ಲಿ ಆ ಆರು ತರುಣಿಯರನ್ನು ಕರೆದು ಅವರ ಭಾಷೆಯಲ್ಲಿ ಏನನ್ನೊ ಹೇಳಿದಳು. ಬೊಹೆಮನ್ನರನ್ನು ಮಮತೆಯ ಕಂಗಳಿಂದ ನೋಡಿದಳು. ವಿಷ ಏರುತ್ತ ಬಂದು ಅವಳ ಬಿಸಿ ಜೀವ ತಣ್ಣಗಾಯಿತು.

ಆದರೆ ಯಾರೂ ಅವಳ ಮರಣಕ್ಕಾಗಿ ಶೋಕಿಸಲಿಲ್ಲ. ಅವಳು ಅವರ ಸರ್ಪದೇವತೆಯ ಇಚ್ಛೆಯನ್ನು ಪೂರೈಸುವ ಸಾಧನವಾಗಿದ್ದಳು. ಅಷ್ಟೆ. ಆ ಜನ ರುವಾನಾಳ ಕೊನೆಯ ಆಜ್ಞೆಯನ್ನು ಪಾಲಿಸಿದರು. ಕ್ಯಾಪ್ಟನ್ ಬೊಹೆಮನ್ನರನ್ನು ಒಂದು ದೋಣಿಯಲ್ಲಿ ಕೂಡ್ರಿಸಿ ನದಿಯಲ್ಲಿ ಬಿಟ್ಟುಬಿಟ್ಟರು.

ಕೆಲದಿನಗಳ ನಂತರ ಸಾವಿನ ಅಂಚಿನಲ್ಲಿದ್ದ ಬೊಹೆಮನ್ನರನ್ನು ಬೇರೊಂದು ಕುಲದವರು ಕಂಡರು. ಅವರ ಊರಲ್ಲಿ ಬೊಹೆಮನ್ನರು ಸಾವಕಾಶವಾಗಿ ಮತ್ತೆ ಜೀವ ಜಗತ್ತಿಗೆ ಬಂದರು. ಅಲ್ಲಿಂದ ಮುಂದೆ ಸ್ವೀಡನ್ನಿಗೆ ಬಂದು ಈಗ ಆಸ್ಪತ್ರೆಯಲ್ಲಿ ಚೇತರಿಸಿಕೊಳ್ಳುತ್ತಿದ್ದಾರೆ. *



## ರಾಮನ್ ಪರಿಣಾಮ

ವಿಜ್ಞಾನಿ ಸಿ. ವಿ. ರಾಮನ್ನರು ಸ್ವೀಡನ್ನಿನಲ್ಲಿ ನೋಬೆಲ್ ಪಾರಿತೋಷಕ ಪಡೆಯಲು ಹೋದಾಗ ತಮ್ಮ ಶೋಧವಾದ "ರಾಮನ್ ಪರಿಣಾಮ" ವನ್ನು ವಿಜ್ಞಾನಿಗಳೆದುರು ಸಿದ್ಧಮಾಡಿ ತೋರಿಸಿದರು. ರಾಮನ್ ಪರಿಣಾಮವೆಂದರೆ ದ್ರವಪದಾರ್ಥಗಳ ಮೂಲಕ ಹಾಯುವ ಪ್ರಕಾಶದ ಚದರುವಿಕೆಯನ್ನು ಕುರಿತಾದದ್ದು. ರಾಮನ್ನರು ಅಂದು ಈ ಪ್ರಾತ್ಯಕ್ಷಿಕೆಗಾಗಿ ಆರಿಸಿಕೊಂಡ ದ್ರವವು ಮದ್ಯಾರ್ಕವಾಗಿತ್ತು.

ಪ್ರಾತ್ಯಕ್ಷಿಕೆ ಮುಗಿದ ನಂತರ ಭೋಜನ ಕೂಟ ಪ್ರಾರಂಭವಾಯಿತು. ಅದರಲ್ಲಿ ಮದ್ಯದ ಧಾರಾಳ ಉಪಯೋಗವಾಯಿತು. ಆದರೆ ನೈಷ್ಠಿಕ ಬ್ರಾಹ್ಮಣರಾದ ರಾಮನ್ ಮದ್ಯವನ್ನು ಮುಟ್ಟಲಿಲ್ಲ.

ಆಗ ನೆರೆದ ವಿಜ್ಞಾನಿಯೊಬ್ಬರು ರಾಮನ್ನರಿಗೆ ಅನುನಯ ಮಾಡಿದರು: "ಇರಲಿರಲಿ, ಒಮ್ಮೆ ಸವಿ ನೋಡಿರಿ ರಾಮನ್! ಈ ವರೆಗೆ ನೀವು ಮದ್ಯದ ಮೇಲೆ ರಾಮನ್ ಪರಿಣಾಮವನ್ನು ನಮಗೆ ತೋರಿಸಿದಿರಿ. ಈಗ ರಾಮನ್ನರ ಮೇಲೆ ಮದ್ಯದ ಪರಿಣಾಮವನ್ನು ನೋಡುವ ಅವಕಾಶ ಕೊಡಿರಿ!"










ಹೊಸ ರ್‍ಯಾಪರ್ ಇರುವ, ಹೊಸ ಆಕಾರವಿರುವ, ಹೊಸ ಹಸುರು ಬಣ್ಣವಿರುವ ಹೊಸ ರೆಕ್ಸೋನ ನಿಮ್ಮ ಪ್ರೀತಿಗೆ ಪಾತ್ರವಾಗುವುದು.

**ಹೊಸ ರೆಕ್ಸೋನ–ನಿಮ್ಮ ಚರ್ಮಕ್ಕೆ ಹಿತಕರ**

RP. 169-50 KN
ಹಿಂದುಸ್ಥಾನ್ ಲೀವರ್ ಲಿಮಿಟೆಡ್ ಅವರಿಂದ ರೆಕ್ಸೋನ ಪ್ರೊಪ್ರೈಟರಿ ಲಿಮಿಟೆಡ್, ಆಸ್ಟ್ರೇಲಿಯಾ ಅವರಿಗಾಗಿ ಭಾರತದಲ್ಲಿ ತಯಾರಿಸಲ್ಪಟ್ಟದ್ದು.



# ಸ್ತ್ರೀ-ರಸಾಯನಶಾಸ್ತ್ರ

ರಾಧಾಕೃಷ್ಣ

**ಹೆಣ್ಣಿನ ಬಣ್ಣಗಳು ಅಷ್ಟೇಕೆ ಬದಲಾಗುತ್ತವೆಂಬುದಕ್ಕೆ ಜೀವರಸಾಯನ ಶಾಸ್ತ್ರದ ಉತ್ತರ**

ಅನಾದಿ ಕಾಲದಿಂದಲೂ ಗಂಡಸಿಗೆ ಹೆಂಗಸೊಂದು ಸಮಸ್ಯೆಯಾಗಿದ್ದಾಳೆ. ಅವಳು ಅವನಿಗೆ ಬೇಕು, ಅವಳಿಂದ ಅವನಿಗೆ ಸ್ಫೂರ್ತಿ ಬರುತ್ತದೆ- ಆದರೆ ಅವಳನ್ನು ಅರ್ಥ ಮಾಡಿಕೊಳ್ಳಲು ಅವನಿಂದಾಗಿಲ್ಲ. "ಸ್ತ್ರಿಯಶ್ಚ ಚಿತ್ತಂ.... ದೇವೋ ನ ಜಾನಾತಿ."

ಹೆಣ್ಣಿನ ಆಕರ್ಷಣೆ ಮತ್ತು ಅವಳ ದುರೂಹ್ಯ ಸ್ವಭಾವದ ಮೂಲವೆಲ್ಲಿ? ಎಂದು ಈಚೆಗೆ ಸಂಶೋಧನೆ ನಡೆಸಿದ ಡಾಕ್ಟರರು ಇದಕ್ಕೆಲ್ಲ "ಸ್ತ್ರೀ-ರಸಾಯನ"ವೇ ಕಾರಣ ಎಂದು ಕಂಡು ಹಿಡಿದಿದ್ದಾರೆ. ಸ್ತ್ರೀ ಶರೀರದಲ್ಲಿ ಉತ್ಪಾದನೆ ಹೊಂದುವ "ಹಾರ್ಮೋನು"ಗಳೆಂಬ ರಾಸಾಯನಿಕಗಳು ಅವಳ ಅಂಗಾಂಗಗಳನ್ನು ವ್ಯಾಪಿಸಿ ಕೊಡುವ ಪ್ರಚೋದನೆಗಳೇ ಅವಳನ್ನು ಅವಳಾಗಿ ಮಾಡುತ್ತವೆ.

ಸ್ತ್ರೀಯ ಭೂಷಣವೆನಿಸಿದ ಆ ಕವಿಮನೋಹರ ಲಜ್ಜೆಯನ್ನೇ ತೆಗೆದುಕೊಳ್ಳಿ. ಹನ್ನೊಂದು ಹನ್ನೆರಡು ವರ್ಷಗಳ ವರೆಗೂ ಇಂದಿನ ಹುಡುಗಿಯರು ಹುಡುಗರೊಡನೆ ಸಂಕೋಚವಿಲ್ಲದೆ ಬೆರೆಯುತ್ತಾರೆ. ಆ ಮೇಲೆ ಒಮ್ಮಿಂದೊಮ್ಮೆ ಅವರ ನಡಿಗೆಗೊಂದು ಒಯ್ಯಾರ, ಕಣ್ಣೊಳಗೊಂದು ಕಾಂತಿ, ವರ್ತನೆಯಲ್ಲೊಂದು ನಾಚುಗುಳಿತನ ಮೂಡುತ್ತದೆ. ಅಸ್ತವ್ಯಸ್ತ ವೇಷಗಳಾಗಿದ್ದ ಅವಳಿಗೆ ಹಲ ಕಾಲ ಕನ್ನಡಿಯ ಮುಂದೆ ನಿಂತು ಅಲಂಕರಿಸಿಕೊಳ್ಳುವ ಚಪಲ ಹುಟ್ಟುತ್ತದೆ. ಆಗಲೆ ಅವಳು ಹೆಂಗಸಾಗಿ ಬಿಟ್ಟಿದ್ದಾಳೆ.

ಇದಕ್ಕೇನು ಕಾರಣ? ಅವಳ ಮಿದುಳಿನ ಬುಡದಲ್ಲಿರುವ ಪಿಚುಟರಿ ಗ್ರಂಥಿಗಳು ಈ ವರೆಗೆ ಉತ್ಪಾದಿಸದ ಒಂದು ವಿಶಿಷ್ಟ ಹಾರ್ಮೋನನ್ನು ಉತ್ಪಾದಿಸುತ್ತವೆ. ಅದು ಅವಳ ಅಂಡಾಶಯವನ್ನು ಪರಿಪಕ್ವಾವಸ್ಥೆಗೆ ಬೆಳೆಸುತ್ತದೆ. ಅನಂತರ ಅಂಡಾಶಯಗಳು ಸ್ತ್ರೀ ಹಾರ್ಮೋನುಗಳೆಂಬ ಆ ಅದ್ಭುತ ರಾಸಾಯನಿಕಗಳನ್ನು ಉತ್ಪತ್ತಿ ಮಾಡತೊಡಗುತ್ತವೆ.

ಇವುಗಳ ಮೂರ್ತಿ ಸಣ್ಣದು, ಕೀರ್ತಿ ದೊಡ್ಡದು. ಅವುಗಳ ಪರಿಮಾಣ ಎಷ್ಟು ಕಡಿಮೆಯಾಗಿರುತ್ತದೆಂದರೆ, ಶರೀರದಲ್ಲಿರುವ ಎಲ್ಲ ಸ್ತ್ರೀ-ಹಾರ್ಮೋನುಗಳನ್ನು ಶೋಧಿಸಿ ತೆಗೆದು ತೂಗಬೇಕಾದರೆ ಅತಿ ಸೂಕ್ಷ್ಮ ತಕ್ಕಡಿಯೇ ಬೇಕಾದೀತು. ಆದರೆ ಇಷ್ಟೊಂದು ಹಾರ್ಮೋನುಗಳು ರಕ್ತದಲ್ಲಿ ಬೆರೆಯುವುದರಿಂದಲೇ ಅವಳ ಲೈಂಗಿಕ ಅವಯವಗಳು ಬೆಳೆಯುತ್ತವೆ, ಎಲುಬಿನ ರಚನೆ

ಬದಲಾಗುತ್ತದೆ; ಚರ್ಮ ಮೆದುವಾಗಿ ತಳತಳಿಸುತ್ತದೆ, ರೋಮಗಳು ವಿಶಿಷ್ಟ ಸ್ತ್ರೀ ಸಹಜತೆಯನ್ನು ಅಳವಡಿಸಿಕೊಳ್ಳುತ್ತವೆ; ದನಿ ಮಧುರವಾಗುತ್ತದೆ. ಅವಳ ಅಂಗಾಂಗಗಳು ಸ್ತ್ರೀ ವಿಶಿಷ್ಟ ವಕ್ರರೇಖೆಯನ್ನು ಪಡೆಯುತ್ತವೆ. ಅವಳೀಗ ಋತುವಾಗುತ್ತಾಳೆ. ತಿಂಗಳು ತಿಂಗಳು ಮುಟ್ಟಾಗತೊಡಗುತ್ತಾಳೆ.

ಅದಕ್ಕಿಂತಲೂ ಆಶ್ಚರ್ಯವೆಂದರೆ ಅವಳ ಭಾವನೆಗಳ ಹಾಗು ಜೀವನ ದೃಷ್ಟಿಯ ಬದಲಾವಣೆ. "ಸ್ತ್ರೀ-ರಸಾಯನ"ವಿದು ಪುರುಷನನ್ನು ಆಕರ್ಷಿಸಿ ಮಾತೃತ್ವವನ್ನು ಪಡೆಯುವ ಧ್ಯೇಯದಿಂದ ಅವಳಿಗೆ ಅಪೂರ್ವವಾದ ಲಾವಣ್ಯವನ್ನು ದಯಪಾಲಿಸುತ್ತದೆ.

ಗಂಡಸು ನಿಸರ್ಗದ ಸಂತಾನೋತ್ಪತ್ತಿ ಕ್ರಿಯೆಯಲ್ಲಿ ಒಂದು ಸಾದಾ ಆಯುಧ ಮಾತ್ರ. ಪ್ರಾಯಕ್ಕೆ ಬರುತ್ತಿರುವಾಗಿನಿಂದ ವೃದ್ಧಾಪ್ಯದ ವರೆಗೆ ಹೆಚ್ಚು ಕಡಿಮೆ ನಿರಂತರವಾಗಿ ವೀರ್ಯಾಣುಗಳನ್ನು ಸಿದ್ಧಪಡಿಸುವುದೇ ಅವನ ಲೈಂಗಿಕ ಕಾರ್ಯ. ಇದಕ್ಕಾಗಿ ಏಕಪ್ರಕಾರವಾಗಿ ಅವನ ಅಂಡಗಳು ಪುರುಷ ಹಾರ್ಮೋನುಗಳನ್ನು ಉಂಟುಮಾಡುತ್ತವೆ.

ಆದರೆ ಸ್ತ್ರೀ ಹಾಗಲ್ಲ. ಅವಳ ತಾಯ್ತನದ ಸಂಕೇತವಾದ ಋತುಚಕ್ರದ ಒಂದೊಂದು ಸುತ್ತಿನಲ್ಲಿಯೂ ಅವಳ ಶರೀರದಲ್ಲಿ ವಿವಿಧ ಸ್ತ್ರೀ ಹಾರ್ಮೋನುಗಳು ಬೇರೆ ಬೇರೆ ಪ್ರಮಾಣಗಳಲ್ಲಿ ಸಮತೂಕವನ್ನು ಹೊಂದಬೇಕಾಗುತ್ತದೆ. ಈ ಬದಲಾಗುತ್ತಿರುವ ರಾಸಾಯನಿಕ ಪ್ರಕ್ರಿಯೆಯೇ ಸ್ತ್ರೀಯನ್ನು ಪುರುಷನಿಗೆ ಅರ್ಥವಾಗದಿರುವ ಪದಾರ್ಥವಾಗಿ ಮಾಡಿರುವುದು, ಅವಳನ್ನು ಪುರುಷನು ದುರೂಹ್ಯಜಂತುವೆಂದು ಕರೆಯುವ ಹಾಗೆ ಮಾಡಿರುವುದು. ಏಕೆಂದರೆ ಈ ರಾಸಾಯನಿಕ ಪರಿವರ್ತನೆಯೊಡನೆ ಅವಳ ಮನಸ್ಸಿನ ಸ್ಥಿತಿಯೂ ಪಲ್ಲಟ ಹೊಂದುತ್ತ ಹೋಗುತ್ತದೆ.

ಒಂದು ಸುತ್ತು ಏರಿಳಿತ ೨೮ ದಿನಗಳ ವರೆಗೆ ಸಾಮಾನ್ಯವಾಗಿ ಸಾಗುತ್ತದೆ. ಮುಟ್ಟಾಗುವ ಉದ್ದೇಶವೆಂದರೆ ಗರ್ಭಾಶಯದಲ್ಲಿ ಹೊಸ ಪರೆಯನ್ನು ಬೆಳೆಸುವುದು. ಅವಳ ಅಂಡಾಶಯದಿಂದ ಹೊರಬೀಳುವ ಅಂಡವು ಪುರುಷ ಬೀಜವನ್ನು ಸಂಧಿಸಿ ಗರ್ಭಾಧಾನವಾದುದಾದರೆ ಆ ಫಲಿತ ಅಂಡಕ್ಕೆ ಆಧಾರವಾಗಲು ಈ ಪರೆ ಬೇಕಾಗುತ್ತದೆ. ಒಂದು ಋತುಚಕ್ರದಲ್ಲಿ ಗರ್ಭಾಧಾನವಾಗದಿದ್ದರೆ, ಹೊಸ ಅಂಡಕ್ಕೆ ಆಶ್ರಯವಾಗಿ ಹೊಸ ಪರೆ ರೂಪುಗೊಳ್ಳಲು ಅವಕಾಶ ಮಾಡಿಕೊಡುವುದಕ್ಕಾಗಿ ಹಳೇ ಪರೆಯನ್ನು ಹೊರ ತಳ್ಳುವುದೇ ಮುಟ್ಟಾಗುವಿಕೆ. ಹೀಗೆ ಋತುಚಕ್ರ ಗರ್ಭಧಾರಣೆಯಾಗುವ ವರೆಗೂ ಸಾಗತಕ್ಕದ್ದು.

ಈ ಋತುಚಕ್ರದ ಆವರ್ತವನ್ನು ನಿಯಂತ್ರಿಸುವ ಕೆಲಸ ಎರಡು ಮಹಾ ಪ್ರತಾಪಿ ಹಾರ್ಮೋನುಗಳದು. ಒಂದರ ಹೆಸರು "ಎಸ್ಟ್ರೋಜೆನ್," ಇನ್ನೊಂದರದು "ಪ್ರೊಜೆಸ್ಟರೊನ್." ಒಂದರ ಉತ್ಪತ್ತಿ ಹೆಚ್ಚಿದಾಗ ಇನ್ನೊಂದು ಇಳಿತರವಾಗುತ್ತದೆ, ಇನ್ನೊಂದು ಹೆಚ್ಚಿದಾಗ ಮೊದಲಿನದರ ಸ್ರಾವ ಕಡಿಮೆಯಾಗುತ್ತದೆ.

ಮುಟ್ಟಾಗಿ ೧೪-೧೫ ದಿನಗಳ ವರೆಗೆ ಎಸ್ಟ್ರೋಜೆನ್ ಸ್ರಾವವನ್ನು ಅಂಡಾಶಯಗಳು ಅಧಿಕಾಧಿಕವಾಗಿ ಮಾಡುತ್ತ ಹೋಗುತ್ತವೆ. ಇದರೊಡನೆ ಅಂಡಾಶಯದಲ್ಲಿ ಅಂಡವು ಬಲಿಯುತ್ತ ಹೋಗುತ್ತದೆ. ೧೩ ರಿಂದ ೧೯ ನೇ ದಿನದ ಅವಧಿಯಲ್ಲಿ ಪಕ್ವವಾದ ಅಂಡವು ತನ್ನ ಕವಚವನ್ನು ತೊರೆದು ಅಂಡಾಶಯದಿಂದ ಹೊರಟು ಡಿಂಭನಲಿಕೆಯ ಕಡೆ (Fallopian tube) ಸಾಗುತ್ತದೆ. ಆಗ ಆ ಪರಿತ್ಯಕ್ತ ಕವಚವೇ ತಾತ್ಕಾಲಿಕವಾಗಿ ಪ್ರೊಜೆಸ್ಟರೋನ್ ಹಾರ್ಮೋನನ್ನು ಸ್ರವಿಸುವ ಗ್ರಂಥಿಯಾಗುತ್ತದೆ. ಅಂಡಾಶಯದಿಂದ ಹೊರಟ ಅಂಡಕ್ಕೆ ವೀರ್ಯಾಣು ಸಂಯೋಗವಾಗಿ ಗರ್ಭ ನಿಂತರೆ ಅದಕ್ಕಾಧಾರವಾದ ಪರೆಯನ್ನು ಉಂಟುಮಾಡುವುದು ಈ ಹಾರ್ಮೋ

ನಿನ ಕೆಲಸ. ಆ ಸಾರೆ ಗರ್ಭ ನಿಲ್ಲದೆ ಹೋದರೆ ಪ್ರೊಜೆಸ್ಟರೋನ್ ಗ್ರಂಥಿ ಅಲ್ಲೇ ಒಣಗಿ ಹೋಗುತ್ತದೆ.

ಮುಟ್ಟಿನ ಕೆಲ ದಿನ ಮುಂಚೆ ಎರಡೂ ಹಾರ್ಮೋನುಗಳ ಉತ್ಪತ್ತಿ ತಗ್ಗುತ್ತದೆ. ಇದರ ಫಲವಾಗಿ ಗರ್ಭಕೋಶದ ವರೆಗೆ ರಕ್ತ ಹೋಗುವುದು ನಿಂತು ಹೋಗಿ ಕೊನೆಗೆ ಮುಟ್ಟಿನ ಸ್ರಾವದಲ್ಲಿ ಆ ಪರೆ ಹೊರತಳ್ಳಲ್ಪಡುತ್ತದೆ.

ಈ ಹಾರ್ಮೋನ್ ವ್ಯತ್ಯಾಸದ ಪರಿಣಾಮವೇನು ? ಸ್ತ್ರೀಯ ಮಾನಸಿಕ ಪಲ್ಲಟಗಳನ್ನೆಲ್ಲ ಡಾಕ್ಟರರು ಇದೇ ವ್ಯತ್ಯಾಸಕ್ಕೆ ಆರೋಪಿಸಿದ್ದಾರೆ. ಅಮೇರಿಕದ ಮನೋವೈದ್ಯಳಾದ ಡಾ. ಥೆರೆಸೆ ಬೆನೆಡೆಕ್, ಜೀವರಸಾಯನ ಶಾಸ್ತ್ರ ಡಾ. ಬಿ. ಬಿ. ರುಬೆನ್‌ಸ್ಟೈನ್, ಪ್ಯಾರೀಸಿನ ಡಾ. ಡಬ್ಲ್ಯು. ಆರ್. ಕುಕ್ ಮೊದಲಾದ ಸಂಶೋಧಕರು ನಡೆಸಿದ ಪರಿಶೀಲನೆಗಳು ಇದನ್ನು ದೃಢಪಡಿಸಿವೆ. ಅವರು ಕೆಲ ಹೆಂಗಸರ ಮಾನಸಿಕ ಬದಲಾವಣೆಗಳನ್ನೂ ಯೋನಿಸ್ರಾವದಲ್ಲಿ ದೊರೆತ ಹಾರ್ಮೋನು ಪ್ರಮಾಣಗಳನ್ನೂ ೧೫೨ ಋತು ಚಕ್ರಗಳವರೆಗೆ ನಿರಂತರವಾಗಿ ಹೋಲಿಸಿದರು. ಮನೋವೈದ್ಯರು ಮಾನಸಿಕ ಪಲ್ಲಟಗಳನ್ನು ಯಾವ ಯಾವ ಅವಧಿಯಲ್ಲಿ ಕಂಡರೋ ಆಯಾ ಅವಧಿಯಲ್ಲೇ ಹಾರ್ಮೋನುಗಳ ಪ್ರಮಾಣ ಪಲ್ಲಟವೂ ಆಗಿತ್ತೆಂದು ಅದರಲ್ಲಿ ಸಿದ್ಧವಾಯಿತು.

ಎಸ್ಟ್ರೋಜೆನ್ ಸ್ರಾವ ಅಧಿಕವಾಗಿದ್ದ ಅವಧಿಯಲ್ಲಿ ಹೆಂಗಸರ ಮನಸ್ಸು ಹೆಚ್ಚು ಚುರುಕಾಗಿಯೂ ಸುಖವಾಗಿಯೂ ಹೊಂದಿಕೆಯುಳ್ಳದ್ದಾಗಿಯೂ ಇರುತ್ತದೆಂದು ಕಂಡುಬಂತು. ಆಗ ಕಾಮೋತ್ತೇಜನವೂ ಮಿಗಿಲಾಗಿರುತ್ತದೆ. ಅದು ಸಹಜವೇ. ಈ ಅವಧಿಯ ಕೊನೆಗೇ ಆಗುವುದಾದರೆ ಗರ್ಭಾಧಾನ ಆಗುತ್ತದೆ. ತಮ್ಮೀ ಹಿತವಾದ ಭಾವನೆಗಳನ್ನು ಪ್ರಕಟಿಸಲು ಅವಕಾಶ ದೊರೆಯದೆ ಹೋದರೆ ಈ ಸಮಯದಲ್ಲಿ ಕೆಲ ಹೆಂಗಸರು ಉದ್ವಿಗ್ನರೂ ಶೀಘ್ರಕೋಪಿಗಳೂ ಆಗುವುದುಂಟು.

ತದ್ವಿರುದ್ಧವಾಗಿ, ಎಸ್ಟ್ರೋಜೆನ್‌ಸ್ರಾವ ಕಡಿಮೆಯಾಗಿ ಪ್ರೊಜೆಸ್ಟರೋನ್ ಅಂಶ ಏರತೊಡಗಿದಂತೆ ಅವಳ ಉತ್ತೇಜಿತ ಅವಸ್ಥೆ ಶಾಂತವಾಗುತ್ತ ಬರುತ್ತದೆ. ಕಾಮಾಸಕ್ತಿಯೂ ಹೆಚ್ಚು ನಯವಾಗುತ್ತದೆ.

ಆದರೆ ಎಲ್ಲಕ್ಕೂ ತೀಕ್ಷ್ಣವಾದದ್ದು ಮುಟ್ಟಾಗುವ ಕೆಲ ದಿನ ಮುಂಚೆ ಮತ್ತು ಮುಟ್ಟಿನ ಪ್ರಾರಂಭದಲ್ಲಿ ಎರಡೂ ಹಾರ್ಮೋನುಗಳ ಸ್ರಾವ ಇಳಿಮುಖವಾದಾಗಿನ ಅವಸ್ಥೆ. ಆಗ ಅವರಲ್ಲಿ ದೈಹಿಕ ಅಸ್ವಸ್ಥ, ಅಕಾರಣ ಕೋಪ ತಾಪ, ಅಶಾಂತಿ, ಚಿಂತೆ ಮತ್ತು ಕ್ಲೇಶ ಇವು ಕಾಣಿಸಿಕೊಳ್ಳುತ್ತವೆ. ಪ್ಯಾರೀಸಿನಲ್ಲಿ ನಡೆದ ಒಂದು ಪರಿಶೀಲನೆಯಲ್ಲಿ ಹೆಂಗಸರು ಹಿಂಸಾಚಾರಪೂರ್ವಕ ನಡೆಸಿದ ಕೊಲೆ ಮತ್ತು ದುಷ್ಕರ್ಮಗಳಲ್ಲಿ ನೂರಕ್ಕೆ ೮೪ ರಷ್ಟು ಮುಟ್ಟಾಗುವ ಮುಂಚಿನ ಮತ್ತು ಮುಟ್ಟಾದ ಪ್ರಥಮದ ದಿನಗಳಲ್ಲಿ ಸಂಭವಿಸಿದವೆಂದು ತಿಳಿಯಿತು. ಅಮೇರಿಕದ ಒಂದು ಭಾರೀ ಹೆಂಗಸರ ಸೆರೆಮನೆಯಲ್ಲಿ ಪರಿಶೀಲನೆ ಮಾಡಿದಾಗ ಈ ಅವಧಿಯಲ್ಲಿಯೇ ಹೆಂಗಸರು ನೂರಕ್ಕೆ ೬೯ ರಷ್ಟು ದುಷ್ಕರ್ಮಗಳನ್ನು ಮಾಡಿದ್ದರೆಂದು ವಿದಿತವಾಯಿತು. ಎಲ್ಲ ಕಡೆಗೂ ಗಂಡಂದಿರು ಪರೀಕ್ಷಿಸಿದರೆ ತಮ್ಮ ಹೆಂಡಂದಿರು ತಮ್ಮ ಮೇಲೆ ಹರಿಹಾಯುವ ಅವಧಿಯೂ ಹೆಚ್ಚಾಗಿ ಇದೇ ಎಂದು ಮನಗಂಡಾರು. ಎಲ್ಲಕ್ಕೂ ಕಾರಣ ತಾತ್ಕಾಲಿಕ ಹಾರ್ಮೋನ್ ಕೊರತೆ.

ಲೈಂಗಿಕ ಹಾರ್ಮೋನುಗಳು — ಪುರುಷ ಇರಲಿ ಸ್ತ್ರೀ ಇರಲಿ--ಶರೀರದ ಮೇಲೆ ಮಾಡುವ ಪರಿಣಾಮಗಳು ನಿಜವಾಗಿ ಬೆರಗುಪಡಿಸುವಂಥವು. ನಮ್ಮ ವರ್ತನೆಗಳನ್ನು, ನಮ್ಮ ಮೂಲ ಪ್ರವೃತ್ತಿಗಳನ್ನು ಕೂಡ ಅವು ಬದಲಾಯಿಸಬಲ್ಲವು. ಸ್ತ್ರೀ ಹಾರ್ಮೋನನ್ನು ಕೊಟ್ಟರೆ ಹುಂಜಗಳು ಕಾವುಕೂಡ್ರಲಾರಂಭಿಸುವವು,

ಗಂಡಿಲಿಗಳು ಗೂಡು ಕಟ್ಟುವುದಲ್ಲದೆ ಮೊಲೆ ಹಾಲು ಕೂಡ ಅವುಗಳಲ್ಲಿ ಉಂಟಾಗುವುದು. ಅದೇ ಪ್ರಕಾರ ಗಂಡು ಹಾರ್ಮೋನು ಹೆಣ್ಣು ಪ್ರಾಣಿಗಳಲ್ಲಿ ಹೆಚ್ಚು ಆಕ್ರಮಣ ಶೀಲತೆಯನ್ನುಂಟುಮಾಡುತ್ತವೆ. ಹೇಂಟೆಗಳಿಗೆ ಪುರುಷ ಹಾರ್ಮೋನ್ ಕೊಟ್ಟರೆ ಜುಟ್ಟ ಬೆಳೆಯುತ್ತದೆ.

ಆದರೆ ಮೇಲೆ ಹೇಳಿದವುಗಳಷ್ಟೇ ಸ್ತ್ರೀಗೆ ಸ್ತ್ರೀತ್ವವನ್ನೂ ಪುರುಷನಿಗೆ ಪುರುಷತ್ವವನ್ನೂ ತಂದು ಕೊಡುವವಲ್ಲ. ಮೂತ್ರಪಿಂಡದ ಮೇಲ್ಭಾಗದಲ್ಲಿರುವ ಒಂದಾಣೆಯಷ್ಟು ದೊಡ್ಡ ಆಡ್ರೆನಲ್ ಗ್ರಂಥಿಗಳೂ ಮಹತ್ವದ ಹಾರ್ಮೋನುಗಳನ್ನು ಸ್ರವಿಸುತ್ತವೆ. ಅವುಗಳ ಸ್ರಾವ (ಹೆಂಗಸು-ಗಂಡಸರಿಬ್ಬರಲ್ಲಿಯೂ) ಪುರುಷ ವಿಶಿಷ್ಟ ಗುಣಗಳನ್ನು ಪ್ರಚೋದಿಸುತ್ತವೆ. ಇವುಗಳ ಕ್ರಿಯೆ ಹೆಂಗಸರಲ್ಲಿ ಅತಿರೇಕವಾಗಿದ್ದರೆ ಅವರಿಗೆ ಗಡ್ಡ ಕೂಡ ಬರಬಹುದು. ಬಾಲ್ಯದಲ್ಲೇ ಈ ತೊಂದರೆಯಿದ್ದರೆ ಯೌವನಾರಂಭದಲ್ಲಿ ಹೆಂಗಸರಲ್ಲಿ ಪ್ರಾರಂಭವಾಗಬೇಕಾದ ಬದಲಾವಣೆ ಆಗದೇ ಹೋಗಬಹುದು.

ಲೈಂಗಿಕ ಚಟುವಟಿಕೆಗೂ ಆಡ್ರೆನಲ್ ಗ್ರಂಥಿಗಳಿಗೂ ಸಂಬಂಧವಿದೆ. ಅವುಗಳ ಚಟುವಟಿಕೆ ಹೆಚ್ಚು ಕಡಿಮೆಯಾದರೆ ಸ್ತ್ರೀಯರ ಕಾಮೋತ್ತೇಜನೆಯಲ್ಲೂ ಆಗುತ್ತದೆ. ಮುಟ್ಟು ನಿಂತು, ಅಂಡಾಶಯದಲ್ಲಿ ಹಾರ್ಮೋನುಗಳ ಉತ್ಪಾದನೆ ಕುಂದಿದ ನಂತರ ಅದನ್ನು ತುಂಬಿಕೊಳ್ಳಲು ಆಡ್ರೆನಲ್‌ಗಳು ಹೆಚ್ಚು ಚಟುವಟಿಕೆ ತೋರುತ್ತವೆ. ಇದು ಮಿತಿ ಮೀರಿದರೆ ಮುಪ್ಪಿನ ಹೆಂಗಸರಲ್ಲೂ ಕಾಮೋದ್ರೇಕವಾದೀತು.

ಪಿಚುಟರಿ ಗ್ರಂಥಿಯಾದರೂ ಲೈಂಗಿಕ ಕ್ರಿಯೆಗೆ ಸಂಬಂಧಪಟ್ಟದ್ದೇ. ಅದರ ಹಾರ್ಮೋನ್ ಸ್ರಾವದಲ್ಲಿ ಕೊರತೆ ಬಹಳವಾದರೆ ಹೆಂಗಸರಲ್ಲಿ ಲೈಂಗಿಕ ಬೆಳವಣಿಗೆ ಕುಂಠಿತವಾಗಿ ಅವರು ಬಂಜೆಯರಾಗುತ್ತಾರೆ. ಅದರ ಸಾಧಾರಣ ಕೊರತೆಯೂ ಸರಿಯಾಗಿ ಮುಟ್ಟಾಗಲು ಅಡ್ಡ ಬರುತ್ತದೆ. ಅದರ ಅತಿ ಚಟುವಟಿಕೆಯುಳ್ಳ ಹೆಂಗಸರು ಗಾತ್ರದಲ್ಲಿ ಗಂಡಸರಂತೆ ಆಗಿ ದಿಟ್ಟೆಯರೆನಿಸುವ ಸಂಭವವುಂಟು.

ಹಾರ್ಮೋನುಗಳ ವಿಚಾರ ಹೆಚ್ಚು ತಿಳಿದು ಬಂದಂತೆ ಡಾಕ್ಟರರು ಅನೇಕ ಅಸಾಮಂಜಸ್ಯಗಳನ್ನು ಪರಿಹರಿಸಲು ಅವುಗಳನ್ನುಪಯೋಗಿಸಲಾರಂಭಿಸಿದ್ದಾರೆ. ಉದಾಹರಣೆಗೆ ಕಾಮೋತ್ತೇಜನೆ ತೀರ ಕಡಿಮೆಯಾಗಿರುವ ಹೆಂಗಸರಿಗೆ ಪುರುಷ ಹಾರ್ಮೋನು ಕೊಟ್ಟರೆ ಅವರ ಉತ್ತೇಜನೆ ಸರಿಪಡುತ್ತದೆ. ಮಿತಿಮೀರಿದ ಕಾಮಾತುರತೆಯುಳ್ಳ ಹೆಂಗಸು ಸ್ತ್ರೀಹಾರ್ಮೋನುಗಳ ಸೇವನೆಯಿಂದ ಸ್ತಿಮಿತಕ್ಕೆ ಬರಬಹುದು. ಆದರೆ ಇವುಗಳ ಪ್ರಯೋಗ ತಜ್ಞ ಡಾಕ್ಟರರಿಂದಲೇ ಆಗಬೇಕು. ಇಲ್ಲದಿದ್ದರೆ ಮೀಸೆ ಹೊತ್ತ ಹೆಂಗಸಿನಂಥ ವಿಪರೀತಗಳು ಘಟಿಸಬಹುದು.

ಒಂದು ಸಂಗತಿ ನಿಜ; ಹೆಂಗಸು ತನ್ನ ವಿಶಿಷ್ಟವಾದ ಹಾರ್ಮೋನ್ ರಸಾಯನ ಶಾಸ್ತ್ರದಿಂದ ನಿಯಂತ್ರಿಸಲ್ಪಡುತ್ತಾಳೆ. ಅವಳ ಶಾರೀರಿಕ ರಸಾಯನ ಪುರುಷನಂತೆ ಏಕಪ್ರಕಾರವಾದುದಲ್ಲ. ಆದ್ದರಿಂದಲೇ ಅವಳ ಮನಸ್ಸು ಸ್ತ್ರೀ-ಮನಸ್ಸು. ಇದನ್ನರಿತರೆ ಗಂಡಸು ಅದನ್ನು ತಿದ್ದಲಾರದೆ ಹೋದರೂ ಉಪಾಯದಿಂದ ಅಪಾಯಗಳನ್ನು ತಪ್ಪಿಸಬಲ್ಲ.

*



ದೃಷ್ಟಿಕೋಣವೇ ಬಾಳನ್ನು ನಡೆಸುತ್ತದೆ



# ಬಗೆದಂತೆ ಬಾಳು

ಮೂಲ: **ಗಜಾನನ**
ಅನುವಾದ: **ಬಳ್ಕೂರು ಸುಬ್ರಾಯ ಅಡಿಗ**

ಈ ಬಾರಿ ಸ್ವಾತಂತ್ರ್ಯ ದಿನಾಚರಣೆಯ ಸುಸಂದರ್ಭದಲ್ಲಿ ಅಜ್ಞಾತ ವ್ಯಕ್ತಿಯಿಂದ ಅಭಿನಂದನ ಪತ್ರವೊಂದು ನನ್ನ ಕೈಸೇರಿತು. ಪತ್ರವು ಬಹು ಕಿರಿದಾಗಿದ್ದರೂ ಸುಂದರವಾದ ಕಾಗದದ ಮೇಲೆ ಬಹು ಸುಂದರ ಹಸ್ತಲಿಪಿಯಲ್ಲಿ ಬರೆಯಲ್ಪಟ್ಟಿತ್ತು. ಆ ಕಿರು ಪತ್ರವು ನನ್ನನ್ನು ವಿಚಾರ ಮಗ್ನನನ್ನಾಗಿ ಮಾಡಿತು.

'ನಿಮ್ಮ ಲೇಖನದಲ್ಲಿ ನಿಮ್ಮ ಹೃದಯ ಬುದ್ಧಿಗಳ ಸುಂದರ ಭಾವನೆಗಳು ವ್ಯಕ್ತವಾಗುತ್ತವೆ. ಆ ಬಗ್ಗೆ ನಿಮ್ಮನ್ನು ಪ್ರಶಂಸಿಸುತ್ತೇನೆ'— ಎಂದಿಷ್ಟೇ ಅದರಲ್ಲಿತ್ತು.

ನನ್ನಲ್ಲಿ ಸುಂದರ ಭಾವನೆಗಳಷ್ಟೇ ಇರುವುದಿಲ್ಲ ... ಆದರೆ ಈ ವ್ಯಕ್ತಿಯ ದೃಷ್ಟಿ ಮಾತ್ರ ಆ ಸುಂದರ ಭಾವನೆಗಳ ಕಡೆಗೇ ಹರಿಯಿತು. ಮನುಷ್ಯನು ಈ ದೃಷ್ಟಿಕೋಣವನ್ನೇ ತನ್ನಹಾಗೂ ಪ್ರಪಂಚದ ವ್ಯವಹಾರದಲ್ಲಿ ಉಪಯೋಗಿಸಿಕೊಂಡರೆ ಅವನೆಂದೂ ಪರಾಜಯವನ್ನು ಎದುರುಗೊಳ್ಳಬೇಕಾಗುವುದಿಲ್ಲ. ಆದರೆ ಜನ ಯಾವಾಗಲೂ ತಮ್ಮ ಕೊರತೆಯ ಕಡೆಗೇ ದೃಷ್ಟಿ ಹರಿಸುತ್ತಾರೆ. ಅರ್ಧ ತುಂಬಿದ ಪಾತ್ರೆಯನ್ನು 'ಅರ್ಧ ತುಂಬಿದೆ' ಯೆಂದು ಹೇಳುವವರೆಷ್ಟಿದ್ದಾರೆ? ಎಲ್ಲರೂ 'ಅದು ಅರ್ಧ ಬರಿದಾಗಿದೆ' ಯೆಂದೇ ಹೇಳುತ್ತಾರೆ. 'ಅರ್ಧ ತುಂಬಿದೆ' ಮತ್ತು 'ಅರ್ಧ ಬರಿದಾಗಿದೆ' ಎಂಬ ಎರಡು ರೀತಿಗಳಲ್ಲೀ ಪ್ರಪಂಚ ವಿಭಾಗಿಸಲ್ಪಟ್ಟಿದೆ. ನಾವು ಇವೆರಡರಲ್ಲಿ ಯಾವ ಭಾಗಕ್ಕೂ ಸೇರಬಹುದು. ಪಾತ್ರೆಯ ಅರೆ ತುಂಬಿದ ಭಾಗದತ್ತ ನೋಡಿ ಸಂತಸ ಪಡುವುದಾಗಲಿ, ಅರೆ ಬರಿದಾದ ಭಾಗದತ್ತ ನೋಡಿ ಚಿಂತೆಗೊಳಗಾಗುವುದಾಗಲಿ ನಮ್ಮನ್ನೇ ಅವಲಂಬಿಸಿದೆ.

'ನಮ್ಮ ದೃಷ್ಟಿ ಯಾವ ಭಾಗದ ಮೇಲಿದ್ದರೇನು? ಪಾತ್ರೆಯೇನೋ ಅದೇ ಅಲ್ಲವೆ?'— ಎಂದು ನೀವು ಯೋಚಿಸಬಹುದು. ಆದರೆ ವಿಚಾರ ಇಷ್ಟಕ್ಕೆ ನಿಲ್ಲುವುದಿಲ್ಲ. ನಿಮ್ಮ ಸದ್ಗುಣಗಳನ್ನು ನೋಡಿ ನೀವು ಶಕ್ತಿಶಾಲಿಗಳೆಂದು ಭಾವಿಸಿಕೊಳ್ಳುವಿರೋ ಅಥವಾ ನಿಮ್ಮ ಕೊರತೆಗಳನ್ನು ಕಂಡು ಕೊರಗುತ್ತ ಇರುವಿರೋ ಎಂಬುದೇ ಇದರರ್ಥ. ಜನರು ದಿನಾಲೂ ತಮ್ಮ ಕೊರತೆಗಳನ್ನು ಲೆಕ್ಕಿಸುತ್ತ ಇರುತ್ತಾರೆ. ಅವನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತಾರೆ. ಅವುಗಳ ಬಗ್ಗೆ ಗಂಭೀರವಾಗಿ ವಿಚಾರ ಮಾಡಿ, ತಮ್ಮ ಅಂತರ್ಮನದಲ್ಲಿ ಅವನ್ನು ಒಟ್ಟುಗೂಡಿಸಿಡುತ್ತಾರೆ. ಪರಿಣಾಮವಾಗಿ ಅವರು ಅವನತಿಯತ್ತ ವೇಗವಾಗಿ ಸಾಗುತ್ತಿರುತ್ತಾರೆ. ಯಾರು ಯಾವಾಗಲೂ ಯಾವುದರ ಕುರಿತು ಯೋಚಿಸುತ್ತಿರುತ್ತಾರೋ ಕಟ್ಟಕಡೆಗೆ ಅದೇ ಅವರ ಪಾಲಿಗೆ ಸಿಗುತ್ತದಷ್ಟೇ.

ಆ ದಿನ ನೆರೆಮನೆಯ ಇಬ್ಬರು ಹುಡುಗರು ಆಡುತ್ತ ಆಡುತ್ತ ನಮ್ಮ ಮನೆಯ ಬಾಗಿಲಿಗೆ ಬಂದರು. ಇಬ್ಬರ ಕೈಯಲ್ಲೂ ಏನೋ ಇತ್ತು. ನಾನು ಸೋಹನನೊಡನೆ— 'ಇದೇನು ತುಂಬ ಉಲ್ಲಾಸದಿಂದಿರುವೆ?'— ಎಂದು ಕೇಳಿದೆ. ಅವನು ನಗುತ್ತ ಮುಷ್ಟಿ ಬಿಡಿಸಿ ಒಂದಾಣೆ

"ಆರೋಗ್ಯ" ದಿಂದ

ತೋರಿಸುತ್ತ— 'ನನ್ನ ತಾಯಿ ನನಗೆ ಈ ಆಣೆ ಕೊಟ್ಟಿದ್ದಾಳೆ. ಒಂದಾಣೆಯ ಹಣ್ಣು ಕೊಂಡು-ಕೊಂಡು ನಾನೂ ತಿನ್ನುವೆ; ನನ್ನ ಗೆಳೆಯನಿಗೂ ಕೊಡುವೆ'- ಎಂದ. ಮೋಹನನೊಡನೆ ನಾನು ಇದೇ ಪ್ರಶ್ನೆ ಕೇಳಿದಾಗ— 'ನನಗೂ ಒಂದಾಣೆ ಸಿಕ್ಕಿದೆ. ಆದರೆ ಒಂದಾಣೆಗೆ ಏನು ಬರುತ್ತದೆ? ನಾಲ್ಕಾಣೆಯಿದ್ದಿದ್ದರೆ ಅನುಕೂಲವಾಗುತ್ತಿತ್ತು'- ಎಂದ. ಅವರಿಬ್ಬರ ಈ ದೃಷ್ಟಿಕೋಣವೇ ಮುಂ-ದೆಯೂ ಉಳಿಯಿತೆಂದರೆ ಜೀವನದಲ್ಲಿ ಯಾರಿಗೆ ಸಾಫಲ್ಯ ಸಿಕ್ಕೀತೆಂದು ನೀವೇ ಹೇಳಿರಿ; ನಗುವ ಸೋಹನನಿಗೋ ? ಅಳುವ ಮೋಹನನಿಗೊ ?

ಡಾಕ್ಟರ್ ಮಿತ್ತಲರ ಪತ್ನಿ ಈ ಬಾರಿ ಬೇಸಗೆಯಲ್ಲಿ ನೈನಿತಾಲದ ಪ್ರವಾಸ ಮುಗಿಸಿ ಹಿಂದಿರುಗಿದಾಗ ನಾನು ಅವಳನ್ನು ಕಾಣಲು ಹೋದೆ. ಅವಳ ಮೂವರು ಮಕ್ಕಳೂ ಪತಿಯೂ ಅವ-ಳೊಂದಿಗೆ ನೈನಿತಾಲಕ್ಕೆ ಹೋಗಿದ್ದರು. ಅವಳು ತುಂಬ ಪ್ರಸನ್ನ ಮನಸ್ಸಿನಿಂದ ನೈನಿ-ತಾಲದ ಅನುಭವಗಳನ್ನು ನನಗೆ ತಿಳಿಸುತ್ತಿದ್ದಳು. ನೈನಿತಾಲದಲ್ಲಿರುವಾಗ ಮಕ್ಕಳಿಗೆ ಶೀತವಾಗಿತ್ತೆಂದೂ ಪತಿಗೆ ಎರಡು ದಿನ ಜ್ವರ ಬಂದಿತ್ತೆಂದೂ ಮಾತಿನ ವೇಳೆ ಅವಳು ಹೇಳಿದಳು. ಆದರೆ ಅವಳು ಈ ಘಟನೆಯನ್ನು ಬಹು ಸಾಧಾರಣ ರೀತಿಯಲ್ಲಿ ತಿಳಿಸಿದಳು. ಅದಕ್ಕೆ ಹೆಚ್ಚೇನೂ ಪ್ರಾಧಾನ್ಯ ಕೊಡಲಿಲ್ಲ. ವಿಶೇಷವಾಗಿ ಅವಳು ತನ್ನ ಮನೋರಂಜಕ ಅನುಭವಗಳನ್ನೇ ವಿವರಿಸುತ್ತ ಹೋದಳು. ಆ ಮಹಿಳೆಯು ಶೀತ ಹಾಗೂ ಜ್ವರದ ಕುರಿತೇ ಅನವರತವೂ ಯೋಚಿಸುತ್ತಿದ್ದರೆ ತನ್ನ ಪ್ರವಾಸದ ಆನಂದವನ್ನೆಲ್ಲ ಕಳೆದುಕೊಳ್ಳಬೇಕಿತ್ತು. ಅಲ್ಲದೆ ಈಗಲೂ ನನ್ನೊಡನೆ ನಗನಗುತ್ತ ಮಾತಾಡುವ ಬದಲು ಅಳುತಳುತ್ತ ತಿಳಿಸಬೇಕಾಗುತ್ತಿತ್ತು. ಆದರೆ ಅವಳ ಗಮನವೆಲ್ಲ ಕಷ್ಟದ ಕಡೆಗಿರದೆ ಆನಂದದ ಕಡೆಗಿದ್ದುದರಿಂದಲೇ ಇದೆಲ್ಲ ಶಕ್ಯವಾಯಿತು.

ಶ್ರೀಮತೀ ಮಿತ್ತಲಳ ಗುಣವನ್ನು ನನ್ನ ಗೆಳೆಯನಾದ ವಿಶ್ವನಾಥನೆದುರು ಹೊಗಳಿದಾಗ ಅವನು ಅಷ್ಟೇನೂ ಸಂತುಷ್ಟನಾಗಲಿಲ್ಲ. 'ಜೀವನದಲ್ಲಿ ಪ್ರಕಾಶದ ಕಡೆ ನೋಡುವುದೇನೋ ಒಳ್ಳೇದೇ. ಆದರೆ ಪ್ರಕಾಶದತ್ತ ನೋಡುವುದರಿಂದಲೇ ರೋಗಿ ಗುಣ ಹೊಂದುವುದೂ ಇಲ್ಲ; ಸಾಲ ಸಂದಾಯವಾಗುವುದೂ ಇಲ್ಲ; ಬಡವ ಶ್ರೀಮಂತನೆನಿಸುವುದೂ ಇಲ್ಲ. ಮತ್ತು ಈ ದೃಷ್ಟಿಕೋಣವು ಹಣವಿಲ್ಲದವರಿಗೆ:ಹಣ ತಂದು ಕೊಡುವುದೂ ಇಲ್ಲ! '— ಎಂದನವನು.

ನಾನು ಅವನ ಮಾತು ಕೇಳಿ ಸುಮ್ಮನಾದೆ. ಆದರೆ ಮನದಲ್ಲಿ 'ಆಶಾ ಪ್ರಕಾಶವೇ ರೋಗಿಗೆ ಆರೋಗ್ಯ'ಲಾಭವನ್ನೀಯುತ್ತದೆ— ಔಷಧವಲ್ಲ; ಆಶಾ ಪ್ರಕಾಶದಿಂದಲೇ ಸಾಲ ತೀರಿಸುವ ಶಕ್ತಿಯುಂಟಾಗುತ್ತದೆ; ನಿರಾಶೆಯ ಕತ್ತಲು ಮುಸುಕಿದ್ದರೆ ಮನುಷ್ಯ ಏನನ್ನೂ ಮಾಡಲಾರ. ಪ್ರಕಾಶದತ್ತ ನೋಡುತ್ತಿದ್ದರೆ ಬಡವ ಶ್ರೀಮಂತನಾಗಲಾರ— ನಿಜ; ಆದರೆ ಪ್ರಸನ್ನತೆ ಹಾಗೂ ಮಾನಸಿಕ ಶಾಂತಿಯ ದೃಷ್ಟಿಯಿಂದ ಅವನು ಶ್ರೀಮಂತನೆಂದೇ ಹೇಳಬೇಕು; ಮತ್ತು ಈ ದೃಷ್ಟಿಕೋಣವೇ ಜನರನ್ನು ಆರ್ಥಿಕ ದೃಷ್ಟಿಯಿಂದಲೂ ಶ್ರೀಮಂತನನ್ನಾಗಿ ಮಾಡಲು ಸಮರ್ಥವಾಗಿದೆ' ಎಂದೆಂದುಕೊಂಡೆ.

ಈಗೊಂದು ಸತ್ಯ ಘಟನೆ ಕೇಳಿರಿ. ಶಿವನಾಥ ಹಾಗೂ ರಘುನಾಥ ಅಣ್ಣತಮ್ಮಂದಿರು. ಇಬ್ಬರೂ ಒಬ್ಬ ರೈತನ ಮಕ್ಕಳು. ಶಿವನಾಥನು ವಿವಾಹವಾದ ಬಳಿಕ ಮುದಿ ತಂದೆಯು ಅವನಿಗೆ ೫೦ ಬಿಘೆ ಜಮೀನನ್ನು ಕೊಟ್ಟು ಅವನನ್ನು ಮನೆಯಿಂದ ಬೇರ್ಪಡಿಸಿದ. ಶಿವನಾಥನು ೫೦ ಬಿಘೆಗಳಲ್ಲಿ ೧೦ ಬಿಘೆ ನೆಲವನ್ನು ಅಡವಿಟ್ಟು ಅದರಿಂದ ಬಂದ ಹಣದಿಂದ ಬೇಸಾಯಕ್ಕೆ ಬೇಕಾದ ಎಲ್ಲ ಸಾಮಾನುಗಳನ್ನೂ ಕೊಂಡುಕೊಂಡ; ಒಟ್ಟಿಗೆ ಒಂದು ಕಿರು ಮನೆಯನ್ನೂ ಕಟ್ಟಿಕೊಂಡ. ಅವನು ಶಾಂತಿಯಿಂದ ಬೇಸಾಯದ ಕೆಲಸವನ್ನು ಮುಂದುವರಿಸಿದ. ರಘುನಾಥನ ಮದುವೆಯಾದ

ಬಳಿಕ ಅವನಿಗೂ ತಂದೆಯಿಂದ ೫೦ ಬಿಘೆ ಜಮೀನು ದೊರೆಯಿತು. ಅವನನ್ನೂ ಮನೆಯಿಂದ ಬೇರ್ಪಡಿಸಲಾಯಿತು. ಆದರೆ ಅವನು ಇದರಿಂದ ಸಂತುಷ್ಟನಾಗಲಿಲ್ಲ. ಅವನೂ ಅಣ್ಣನಂತೆಯೇ ೧೦ ಬಿಘೆ ನೆಲವನ್ನು ಅಡವಿಟ್ಟು ಬೇಸಾಯಕ್ಕೆ ಬೇಕಾಗುವ ಸಾಮಾನುಗಳನ್ನು ಕೊಂಡುಕೊಂಡ; ಮನೆಯನ್ನೂ ಕಟ್ಟಿಕೊಂಡ. ಆದರೆ ಅವನ ಗೊಣಗಾಟ ಸದಾ ಕಾಲವೂ ಇದ್ದೇ ಇತ್ತು . . . 'ಯಾವ ತಂದೆಯಾದರೂ ತನ್ನ ಮಗನನ್ನು ಸಾಲಗಾರನನ್ನಾಗಿ ಮಾಡಿ ಹೀಗೆ ಮನೆಯಿಂದ ಓಡಿಸುತ್ತಾನೆಯೆ? ನಾನು ಸಾಲ ತೀರಿಸಲೆ? ಹೊಟ್ಟೆಹೊರೆದುಕೊಳ್ಳುವುದಕ್ಕಾಗಿ ಸಂಪಾದಿಸಲೆ?' ಎಂದು ಗೊಣಗುತ್ತಿದ್ದ. ಹೀಗಿರುವಾಗ ಬೇಸಾಯದ ಕಡೆಗೂ ಅವನು ಗಮನ ಕೊಡಲಿಲ್ಲ. ಅತ್ತ ಶಿವನಾಥ ಪ್ರಯತ್ನಪಟ್ಟು ಬೇಸಾಯ ಮಾಡುತ್ತಿದ್ದ. ಬೇಸಾಯಕ್ಕೆ ಸಂಬಂಧಿಸಿದ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಓದುತ್ತಿದ್ದ. ಪ್ರತಿಯೊಂದು ಕೆಲಸದಲ್ಲೂ ಉತ್ಸಾಹ ತುಂಬಿ ತುಳುಕುತ್ತಿತ್ತು. ಪರಿಣಾಮವಾಗಿ ಶಿವನಾಥನ ಬೆಳೆ ಹೆಚ್ಚಿ, ಅವನು ತನ್ನೆಲ್ಲ ಸಾಲವನ್ನೂ ತೀರಿಸಲು ಸಮರ್ಥನಾದ. ರಘುನಾಥನ ಬೇಸಾಯ ಅಷ್ಟೇನೂ ಒಳ್ಳೇದಾಗಲಿಲ್ಲ. ಅವನ ಸಾಲವೂ ಹೆಚ್ಚುತ್ತ ಹೋಯಿತು; ಮತ್ತು ಅವನು ಹೋದಲ್ಲೆಲ್ಲ ತನ್ನ ತಂದೆಯನ್ನು ನಿಂದಿಸತೊಡಗಿದ.

ಈ ವೃತ್ತಾಂತವು ತಂದೆಯು ಕಿವಿಗೆ ಬಿದ್ದಾಗ ಅವನು ತನ್ನಿಬ್ಬರು ಮಕ್ಕಳನ್ನೂ ಕರೆಕಳುಹಿಸಿದ. ಅವರೆದುರಿಗೆ ಒಂದು ಅರ್ಧ ತುಂಬಿದ ಕೊಡವನ್ನಿಟ್ಟು ರಘುನಾಥನೊಡನೆ . . . . 'ಇದೇನು?' ಎಂದು ಕೇಳಿದ.

'ನನ್ನೊಡನೆ ಇದೇಕೆ ತಮಾಷೆ ಮಾಡುತ್ತಿದ್ದೀರಿ? ಅರ್ಧ ಬರಿದಾದ ಮಣ್ಣಿನ ಕೊಡವಲ್ಲವೆ ಇದು?' — ಎಂದ ರಘುನಾಥ.

ಶಿವನಾಥನೊಡನೆಯೂ ಇದೇ ಪ್ರಶ್ನೆ ಕೇಳಿದಾಗ ಅವನೆಂದ— 'ಅಪ್ಪಾ! ಈ ಕೊಡ ಅರ್ಧ ತುಂಬಿಕೊಂಡಿದೆ.'

ಮುದುಕನ ಕಂಗಳು ಉಜ್ವಲವಾದವು. ಅವನು ರಘುನಾಥನೊಡನೆ ಹೀಗೆಂದ- 'ಮಗನೆ, ನಿನ್ನೆಲ್ಲ ಅಸಫಲತೆಗಳಿಗೂ ನಿನ್ನ ದೃಷ್ಟಿಕೋಣವೇ ಕಾರಣವಾಗಿದೆ. ನೋಡು; ನಿನಗೆ ಅರ್ಧ ಬರಿದಾಗಿ ಕಾಣುವ ಕೊಡವೇ ಶಿವನಾಥನಿಗೆ ಅರ್ಧ ತುಂಬಿದಂತೆ ಕಾಣಿಸುತ್ತದೆ. ಅರ್ಧ ತುಂಬಿದ ಕೊಡವನ್ನು ಪೂರ್ಣ ತುಂಬಿಸಲೂ ಬಹುದು. ಆದರೆ ಯಾವುದು ಅರ್ಧ ಬರಿದಾಗಿದೆಯೋ ಅದು ಇನ್ನೂ ಬರಿದಾಗುತ್ತ ಹೋಗುವುದಲ್ಲವೆ?'

ರಘುನಾಥ ತನ್ನ ತಪ್ಪನ್ನರಿತುಕೊಂಡ. ಅವನು ತನ್ನ ಅಣ್ಣ ಹಾಗೂ ತಂದೆಯ ಸಲಹೆಯಿಂದ ಮನಸ್ಸಿಟ್ಟು ಬೇಸಾಯ ಮಾಡತೊಡಗಿದ; ಮತ್ತು ಮೆಲ್ಲಮೆಲ್ಲನೆ ತನ್ನ ಸಾಲವನ್ನೆಲ್ಲ ತೀರಿಸಿ ಒಬ್ಬ ಗಣ್ಯ ವ್ಯಕ್ತಿಯೆನಿಸಿಕೊಂಡ.

ಈಗ, ನೀವಾವ ವಿಭಾಗಕ್ಕೆ ಸೇರುವವರೆಂಬುದನ್ನು ತಿಳಿಸಿ; ರೊಟ್ಟಿಗೆ ತುಪ್ಪವಿಲ್ಲವೆಂದು ಅಳುತ್ತೀರಾ? ಅಥವಾ ರೊಟ್ಟಿ ದೊರೆಯಿತಲ್ಲ!- ಎಂದು ಹಿಗ್ಗುತ್ತೀರಾ!

ನಿರಾಶರಾದಾಗ ಕೋಣೆಯ ಮೂಲೆಯಲ್ಲಿ ಕುಳಿತು, ನಿಮ್ಮ ಅಭಾವಗಳನ್ನೇ ಲೆಕ್ಕ ಹಾಕುತ್ತ ದುಃಖಿಸುವಿರಾ? ಅಥವಾ ನಿಮ್ಮ ನಿರಾಶೆಯನ್ನು ದೂರ ತಳ್ಳಿ, ನಿಮಗಿಂತಲೂ ಹೆಚ್ಚು ನಿರಾಶವಾದವನನ್ನು ಸಂತೈಸುವುದಕ್ಕಾಗಿ ನಿಮ್ಮ ಸಮಯವನ್ನು ಉಪಯೋಗಿಸುವಿರಾ?

ನೀವು ನಿಮ್ಮ ಜೀವನವನ್ನು ಹೇಗೆ ಉಪಯೋಗಿಸಿಕೊಳ್ಳಬಯಸುವಿರೋ ಹಾಗೆಯೇ ಅದು ರೂಪುಗೊಳ್ಳುತ್ತದೆ. ಜೀವನದಲ್ಲಿ ನೀವು ಅಭಾವಗಳನ್ನೇ ಕಂಡು ಅಸಂತುಷ್ಟರಾಗುತ್ತ ಇದ್ದರೆ ಎಂದೂ ನಿಮಗೆ ಸಂತೋಷ ಕಾಣಸಿಗುವಂತಿಲ್ಲ. ನೀವು ಆನಂದ ಪ್ರಸನ್ನತೆಗಳನ್ನೇ ನೋಡುತ್ತಿದ್ದರೆ ಅದೇ ನಿಮಗೆ ಯಾವಾಗಲೂ ದೊರೆಯುವುದು. *



# ಹೊಸ ಅಸ್ತ್ರ

ಎಂ. ಎಸ್. ಕಲ್ಯಾಣಸುಂದರಂ

ಒಂದಾನೊಂದು ಕಾಲದಲ್ಲಿ ಎರಡು ರಾಜ್ಯಗಳು ನೆರೆಹೊರೆಯಾಗಿದ್ದವು. ಒಂದರ ರಾಜಧಾನಿ ಅಲಕಾಪುರಿ. ಇನ್ನೊಂದರದು ಮಧುರಾಪುರಿ. ಅಲಕಾಪುರಿಯ ರಾಜ ಅಲಕೇಶ. ಮಧುರಾಪುರಿಯ ರಾಜ ಮಧುರೇಶ. ಎರಡೂ ರಾಜ್ಯಗಳು ಈಶಕೃಪೆಯಿಂದ ಸಮೃದ್ಧವಾಗಿದ್ದವು. ಸಾಕಷ್ಟು ಅರಣ್ಯಸಂಪತ್ತಿತ್ತು. ಹನ್ನೆರಡೂ ತಿಂಗಳು ಹರಿಯುವ ನದಿಗಳಿದ್ದವು. ತುಂಬಿದ ಸರೋವರಗಳಿದ್ದವು. ವಿಪುಲವಾದ ಖನಿಜ ಸಂಪತ್ತಿತ್ತು. ಬೇಕಾದಾಗ ಮಳೆ ಬೀಳುವಷ್ಟು ಇಂದ್ರನ ಕೃಪೆ ಇತ್ತು. ಹೊಲಗಳಲ್ಲಿ ಹೊನ್ನು ಬೆಳೆಯುತ್ತಿದ್ದರು ಪ್ರಜೆಗಳು ಎಂದರೆ ಅತಿಶಯೋಕ್ತಿಯಾಗಲಾರದು. ಉದ್ಯೋಗ ವ್ಯವಸಾಯಗಳು ಊರ್ಜಿತ ಸ್ಥಿತಿಯಲ್ಲಿ ಇದ್ದವು. ಕೊರತೆಯನ್ನು ಜನರು ಕೇಳಿಯೂ ಅರಿತಿರಲಿಲ್ಲ.

ಹೊತ್ತುಗಳೆಯಲೆಂದು ಆಗಾಗ ಇಬ್ಬರೂ ರಾಜರು ರಣಾಂಗಣಕ್ಕಿಳಿಯುತ್ತಿದ್ದರು. ಯುದ್ಧ ಮಾಡುತ್ತಿದ್ದರು. ಒಬ್ಬರನ್ನೊಬ್ಬರು ಸೋಲಿಸುತ್ತಿದ್ದರು. ಸೋತವನು ಮುಂದಿನ ಯುದ್ಧದಲ್ಲಿ ವಿಜಯವನ್ನು ಸಂಪಾದಿಸಲು ನಡುವಣ ಕಾಲದಲ್ಲಿ ಸಿದ್ಧತೆ ಮಾಡಿಕೊಳ್ಳುತ್ತಿದ್ದ. ಅಂತೂ ಇಬ್ಬರೂ ಸಮಾನರೆಂಬಂತೆ ಸುಖದಿಂದ ರಾಜ್ಯವಾಳುತ್ತಿದ್ದರು.

ಒಮ್ಮೆ ಮಧುರೇಶ, " ಯಾವ ಹೊಸ ಬದಲಾವಣೆಯೂ ಆಗುವಂತೆ ಕಾಣುವುದಿಲ್ಲ. ಅದೇ ಕಾಳಗ. ಅದೇ ಸೋಲು, ಅಥವಾ ಜಯ; ಜಯ

ಅಥವಾ ಸೋಲು. ಈ ಯುದ್ಧವನ್ನು ಕೊನೆಯದಾಗಿ ಮಾಡಿ ನನ್ನ ಸಾರ್ವಭೌಮತ್ವವನ್ನೇಕೆ ಸ್ಥಾಪಿಸಬಾರದು?" ಎಂದು ಯೋಚಿಸಿ ತನ್ನ ಪ್ರಧಾನ ಸಚಿವನನ್ನು ಕರೆಯಿಸಿ ಅವನೆದುರು ತನ್ನ ವಿಚಾರವನ್ನು ಮಂಡಿಸಿದ. ರಾಜನೀತಿಜ್ಞನಾದ ವೃದ್ಧ ಸಚಿವ ತುಂಬ ಆಲೋಚನೆ ಮಾಡಿ ಒಂದು ಯುಕ್ತಿ ಹುಡುಕಿದ. ಸಚಿವನ ವಿಚಾರದ ವೈಖರಿಯನ್ನು ಕಂಡು ರಾಜನು ಸಾನಂದಾಶ್ಚರ್ಯದಿಂದ ದಂಗಾದ. ಅಮಿತ ಬಹುಮಾನದಿಂದ ಸಚಿವನನ್ನು ಗೌರವಿಸಿದ.

ಮರುದಿನವೇ ಮಧುರೇಶ ಮಧುರಾಪುರಿಯ ಕುಬೇರನೆನಿಸಿದ್ದ ನಾರಾಯಣ ಶೆಟ್ಟಿ ನವಕೋಟಿಯನ್ನು ತನ್ನ ಮಂತ್ರಾಲೋಚನೆಯ ಕೋಣೆಗೆ ಕರೆಯಿಸಿ ಅವನೆದುರು ಹೊಸ ವಿಚಾರವನ್ನು ವಿವರಿಸಿ ನಿರ್ವಹಿಸಬೇಕೆಂದು ಆಜ್ಞಾಪಿಸಿದ. ಶೆಟ್ಟಿ ಸಂತೋಷದಿಂದ ಒಪ್ಪಿದ.

ಕೆಲ ದಿನಗಳಲ್ಲಿ ಅಲಕಾಪುರಿಯ ಜನರು ತಮ್ಮೂರ ಪೇಟೆಯಲ್ಲಿ ಒಂದು ಹೊಸ ಕಿರಾಣಿ ಅಂಗಡಿಯನ್ನು ಕಂಡರು. ವಿಚಾರಿಸಲಾಗಿ ಅದು ಮಧುರಾಪುರಿಯ ವ್ಯಾಪಾರಿಯದೆಂದು ತಿಳಿಯಿತು. ಆಗ ಜನರು "ಎಂಥ ಮೂರ್ಖನಿವನು! ಪರದೇಶದಲ್ಲಿ ಹೆಚ್ಚಿನ ಸುಂಕತೆತ್ತು ವ್ಯಾಪಾರ ನಡೆಸುವನಂತೆ! ಎಂದಾದರೂ ಲಾಭವಾದೀತೆ? ಹುಚ್ಚ, ಹಾಳಾಗಿ ಹೋಗಲಿ, ನಮಗೇಕೆ ಅವನ ಗೊಡವೆ!" ಎಂದರು.

ಎಲ್ಲ ಅಂಗಡಿಕಾರರಿಗಿಂತ ಇವನ ದರ ಕಡಿಮೆ ಇದ್ದರೂ ಮೊದಮೊದಲು ಜನ ಇವನಲ್ಲಿ ಬರುತ್ತಿರಲಿಲ್ಲ. ಪದ್ಧತಿಯಂತೆ ಮೊದಲಿನ ತಮ್ಮ ಅಂಗಡಿಗಳಿಗೇ ಹೋಗುತ್ತಿದ್ದರು. ಅದರೂ ಈತ ಹಿಂಜರಿಯಲಿಲ್ಲ. ಕೊನೆಗೆ ಅಗ್ಗದರದ ಆಕರ್ಷಣವನ್ನು ಹತ್ತಿಕ್ಕುವುದು ಜನರಿಂದಾಗಲಿಲ್ಲ. ಜನರು ಇವನಲ್ಲಿಯೇ ವ್ಯಾಪಾರ ಮಾಡಲು ನುಗ್ಗತೊಡಗಿದರು. ಶೀಘ್ರವೇ ಶೆಟ್ಟಿಯ ಹೆಸರು ನಾಲ್ಕೂ ದಿಕ್ಕಿನಲ್ಲಿ ಹಬ್ಬಿತು. ಆತ ರಾಜ್ಯದಲ್ಲಿ ಇನ್ನೂ ಅನೇಕ ಅಂಗಡಿಗಳನ್ನು ತೆರೆದು ತನ್ನ ವ್ಯಾಪಾರವನ್ನು ಬೆಳೆಸಬೇಕಾಯಿತು.

ಇದರ ಪರಿಣಾಮ ಅಲಕಾಪುರಿಯ ವ್ಯಾಪಾರಿಗಳ ಮೇಲೆ ಆಯಿತು. ಅವರು ರಾಜನೆದುರು ದೂರು ಒಯ್ದರು. ರಾಜ ಇಷ್ಟೊಂದು ಕಡಿಮೆ ಬೆಲೆಗೆ ವ್ಯಾಪಾರ ನಡೆಸುತ್ತಿರುವ ಶೆಟ್ಟಿಯ ಉದ್ಯೋಗದ ಗುಟ್ಟು ಏನೆಂಬುದನ್ನು ತಿಳಿದುಕೊಳ್ಳಲು ಗುಪ್ತಚಾರರನ್ನು ಕಳಿಸಿದ.

ಇತ್ತ ಮಧುರಾಪುರಿಯ ಸಚಿವ ಇನ್ನೊಂದು ಆಂದೋಲನವನ್ನು ಪ್ರಾರಂಭಿಸಿದ್ದ. "ಸಾಮಾಜಿಕ ಉತ್ಕ್ರಾಂತಿ, ಸುಧಾರಿಸಿದ ಒಕ್ಕಲುತನ ಮತ್ತು ವ್ಯಾಪಾರೋದ್ಯೋಗಗಳ ಬಗ್ಗೆ ಹೊಸ ಪ್ರಯೋಗಗಳನ್ನು ನಡೆಸಿ ಅಧಿಕ ಉತ್ಪಾದನೆಯನ್ನು ಮಧುರಾಪುರಿ ಸಾಧಿಸಿರುವುದರಿಂದ ಶೆಟ್ಟಿಗೆ ಕಡಿಮೆ ಬೆಲೆಗೆ ವ್ಯಾಪಾರವನ್ನು ಮುಂದರಿಸಲೂ ಅಭಿವೃದ್ಧಿಗೊಳಿಸಲೂ ಸಾಧ್ಯವಾಗುತ್ತಿದೆ" ಎಂದು ನಡೆಯುತ್ತಿದ್ದ ಪ್ರಚಾರವನ್ನು ಗುಪ್ತಚಾರರು ನಂಬಿದರು. ಆದರೆ ಹೊಸ ಪ್ರಯೋಗಗಳೆಂದರೇನು, ಸುಧಾರಿಸಿದ ಒಕ್ಕಲುತನವೆಂದರೇನು? ಸಾಮಾಜಿಕ ಉತ್ಕ್ರಾಂತಿ ಎಂದರೇನು ಎಂಬುದನ್ನು ತಿಳಿಕೊಳ್ಳಬೇಕೆಂಬ ವಿಚಾರ ಮಾತ್ರ ಯಾರ ತಲೆಯಲ್ಲೂ ಬರಲಿಲ್ಲ. ಗುಪ್ತಚಾರರಂತೂ ಮಂತ್ರಿಯ ಪ್ರಚಾರದಿಂದ ಪೂರ್ತಿ ಅಪ್ರತಿಭರಾಗಿ ಹೋಗಿದ್ದರು.

ಈ ಬುದ್ಧಿಯ ಚದುರಂಗದಾಟದಲ್ಲಿ ಮಧುರಾಪುರಿಯ ಸಚಿವನನ್ನು ಹಿಂದೆ ಹಾಕುವ ವಿಚಾರವಾಗಲಿ, ಶಕ್ತಿಯಾಗಲಿ, ಸಾಹಸವಾಗಲಿ ಯಾರಲ್ಲೂ ಇರಲಿಲ್ಲವಾದ್ದರಿಂದ ಇದ್ದದ್ದೇ ಇರಲಿ ಎಂದು ಎಲ್ಲರೂ ಸುಮ್ಮನಾದರು. ಒಮ್ಮೆ ವಿಶ್ವದಲ್ಲೇ ತಮ್ಮ ಒಕ್ಕಲುತನ, ಕೈಗಾರಿಕೆ, ವ್ಯಾಪಾರಗಳಿಗಾಗಿ ಹೆಸರಾಗಿದ್ದ ಅಲಕಾಪುರಿಯ ಪ್ರಜೆ ಇಂದು ಹತಬಲವಾಯಿತು. ಜೀವನ ನಿರ್ವಹಣದ ಚಿಂತೆ ಎಲ್ಲರ ತಲೆಯಲ್ಲಿ ಹೊಸತಾಗಿ

ಬರತೊಡಗಿತು. ತಕ್ಕಮಟ್ಟಿಗೆ ಅನುಕೂಲತೆ ಇರುವವರು ಹೇಗೋ ಬೇರೆ ವ್ಯವಸಾಯವನ್ನು ಮಾಡತೊಡಗಿದರು. ಹಣವಂತರು ಕೂಡಿಟ್ಟ ದುಡ್ಡನ್ನೇ ತಿಂದು ಮುಗಿಸಲಾರಂಭಿಸಿದರು. ಉಳಿದವರು ದಿನಗೂಲಿಗೆ ಬಾಯಿದೆರೆಯ ತೊಡಗಿದರು. ಅದೂ ಸಿಗದವರು ಅಡ್ಡ ಹಾದಿ ಹಿಡಿದರು.

ಇತ್ತ ಮಧುರೇಶ ಸಮಸ್ತ ವ್ಯಾಪಾರಿಗಳನ್ನೂ ಕೆಲಸಗಾರರನ್ನೂ ನಿಯಂತ್ರಣಕ್ಕೆ ತಂದುಕೊಂಡು ಅಲಕಾಪುರಿಯ ಎಲ್ಲ ಆರ್ಥಿಕ ಸೂತ್ರಗಳನ್ನು ತನ್ನ ಹಿಡಿತಕ್ಕೆ ಎಳಕೊಂಡ. ಭಂಡಾರ ಕರಗತೊಡಗಿತು. ಆದರೂ ವಿಜಯೋನ್ಮಾದದ ಕಳೆ ಅವನ ಮುಖದ ಮೇಲೆ ತೇಲಾಡತೊಡಗಿತು. ತಂತ್ರಜ್ಞರನ್ನು ಕರೆಸಿ ಎರಡೂ ರಾಜಧಾನಿಗಳ ನಡುವೆ ದೊಡ್ಡ ರಾಜಮಾರ್ಗವು ನಿರ್ಮಾಣವಾಗಬೇಕು, ಸರ್ವ ಅನುಕೂಲತೆಗಳು ಒದಗಬೇಕು, ಎಂದು ಆಜ್ಞಾಪಿಸಿದ. ಸಾಗಾಟ, ಸಂಚಾರ ಸುಲಭವಾಯಿತು.

ಇತ್ತ ಅಲಕಾಪುರಿಯ ಸಾಮಾನ್ಯ ಜನರಿಗೂ ಅಗ್ಗ ದರದಲ್ಲಿ ಸಕಲ ಸೌಕರ್ಯಗಳು ಲಭಿಸುತ್ತಿದ್ದುದರಿಂದ ಸಂತೋಷವೇ ಆಗುತ್ತಿತ್ತು. ಕನಸಿನಲ್ಲಿಯೂ ಎಣಿಸದ್ದನ್ನು ಅವರು ಪ್ರತ್ಯಕ್ಷ ಕಾಣುವಂತಾಗಿತ್ತು.

ಕೆಲ ವರ್ಷಗಳು ಕಳೆದವು. ಆಗಾಗ ಬರಗಾಲದ ಸುದ್ದಿಗಳು ಬರತೊಡಗಿದವು. ರೋಗ ರುಜಿನಗಳಿಂದ ಹಳ್ಳಿಗಳಲ್ಲಿ ಜನರ ಸಾವಿನ ಪ್ರಮಾಣ ಹೆಚ್ಚಿದೆ ಎಂಬ ವಾರ್ತೆಗಳು ಬರತೊಡಗಿದವು. ಜನರು ರಾಜನತ್ತ ಆಸೆಯಿಂದ ನೋಡತೊಡಗಿದರು. ದೀನೋದ್ಧಾರಕ ಅಲಕೇಶ ಮಹೀಪತಿ ದೇವತೆಗಳ ಕೋಪಶಮನಾರ್ಥವಾಗಿ ಪೂಜೆ, ಯಜ್ಞ, ದೇವತಾಕಾರ್ಯಗಳನ್ನು ಪ್ರೋತ್ಸಾಹಿಸಿದ. ಇತ್ತ ನಾರಾಯಣ ಶೆಟ್ಟಿ ಕಡಿಮೆ ದರದಲ್ಲಿ ಜನರಿಗೆ ಅನ್ನವನ್ನು ಕೊಡಲಾರಂಭಿಸಿದ.

ಆದರೆ ಅತ್ತ ಕೊಲೆ ಸುಲಿಗೆಗಳ ವಾರ್ತೆಗಳೂ ಕೇಳಬರತೊಡಗಿದವು. ಮಹಾರಾಜನು ದೇಶದಲ್ಲಿ ಶಾಂತತೆಯನ್ನು ಕಾಪಾಡಲು ಸೈನಿಕರಿಗೆ ಆಜ್ಞಾಪಿಸಿದ. ಜನ ರಾಜನಲ್ಲಿ ಬಂದು ಕಾಲಿಗೆ ಬಿದ್ದು ಸಂಕಟವಿಮೋಚನೆಗಾಗಿ ಬೇಡಿಕೊಳ್ಳತೊಡಗಿದರು.

ಒಮ್ಮೆಲೆ ದರಗಳು ಏರತೊಡಗಿದವು. ವಿಚಾರಿಸಿದಾಗ ಮಧುರಾಪುರಿಯಲ್ಲಿ ನಾಗರಿಕರ ಜೀವನದ ಮಟ್ಟ ಏರಿಸಲೆಂದು ಹೊಸ ಕ್ರಮ ಕೈಕೊಳ್ಳಲಾಗುತ್ತದೆ ಎಂದು ತಿಳಿದುಬಂತು. ಜೀವನದ ಮಟ್ಟ! ಹೊಸ ಅನರ್ಥ! ಅಲಕಾವತಿಯ ಜನರು ಜೀವನದ ಮಟ್ಟ ಏರುವುದರ ಅರ್ಥ ತಿಳಿಯದೇ ಗೋಳಾಡಿದರು. ಇದರ ಪರಿಣಾಮ ರಾಜನ ಮೇಲೂ ಆಯಿತು. ಸೈನ್ಯವನ್ನು ಸಾಕುವುದೂ ಅವನಿಗೆ ದುಷ್ಕರವಾಯಿತು.

ಹಳೇ ಸಾಧು ಒಬ್ಬ ಹೇಳಿದ್ದ ಮಾತು ನೆನಪಾಯಿತು. "ಋತುಮಾನಕ್ಕನುಸರಿಸಿ ನವಿಲು ತನ್ನ ಪುಚ್ಛ ಬಿಚ್ಚಿ ಗರಿಗೆದರಿ ಕುಣಿಯುವುದಲ್ಲದೆ ಯೋಗ್ಯ ಋತುಮಾನವಿಲ್ಲದಾಗ ಮಹಾರಾಜನಿಗಾಗಿಯೂ ಅದು ಗರಿಗೆದರಿ ಕುಣಿಯದು!"— ರಾಜ ಏನೂ ಮಾಡಲಾರದವನಾಗಿದ್ದ. ತನ್ನ ಪ್ರಜೆಗಳಿಗೇ ಪುನಃ ಕಾರ್ಯನಿರತರಾಗಲು ಆಜ್ಞಾಪಿಸಿದ.

ಆದರೆ ಹೊತ್ತು ಮೀರಿಹೋಗಿತ್ತು. ರೈತರು ನೇಗಿಲುಗಳನ್ನು ಸುಟ್ಟು ಅಡಿಗೆ ಮಾಡಿದೆವೆಂದು ಹೇಳಿದರು. ದನಕರುಗಳನ್ನು ಸಾಕಲಾಗದೆ ಉಪಯೋಗಿಸಲಿಕ್ಕೂ ಬಾರದೆ ಹೊರಗಟ್ಟಿದೆವೆಂದು ಹೇಳಿದರು. ಬಹು ಕಾಲ ಅಲಕ್ಷಿಸಲ್ಪಟ್ಟ ಹೊಲಗಳು ಈಗ ಬಿರುಸಾಗಿ ಬಿಟ್ಟಿವೆ, ಅಲ್ಲಿ ಬೆಳೆಯಲು ಸಾಧ್ಯವಾಗುವುದಿಲ್ಲ ಎಂದರು.

ನೇಕಾರರು ಹೇಳಿದರು: "ಮಗ್ಗಗಳನ್ನು ಹೊಸದಾಗಿ ಮಾಡಬೇಕು. ಮಾಡಿದ ಮಗ್ಗಗಳಿಂದ ನೇಯಲೂ ಹೊಸದಾಗಿ ಕಲಿಯಬೇಕು. ಬೆಳೆಸಿದ ಹತ್ತಿಗೆ ಬೆಳೆಸಲಿಕ್ಕೆ ಬೇಕಾದಷ್ಟೂ ಬೆಲೆಬಾರದಂತಾದಾಗ, ಅದಕ್ಕಿಂತ ಅಗ್ಗ ದರ

ದಲ್ಲಿ ಹೊರಗಿನಿಂದ ಬಂದ ಬಟ್ಟೆಗಳೆ ದೊರೆತಾಗ ರೈತರು ಹತ್ತಿ ಬೆಳೆಯುವುದನ್ನೇ ಬಿಟ್ಟರು. ಈಗ ಹತ್ತಿಯ ಬೀಜಗಳೂ ಸಿಗಲಾರವು, ಇಲಿಯ ಗುದ್ದುಗಳನ್ನು ಕೆದರಿ ಹುಡುಕಬೇಕಷ್ಟೇ!"

ಉಳಿದ ಕೆಲಸಗಾರರ ಹಾಡೂ ಇದಕ್ಕಿಂತ ಬೇರೆಯದಾಗಿರಲಿಲ್ಲ.

ರಾಜ ಸಂತಪ್ತನಾಗಿ "ಕೃತಘ್ನ ಪ್ರಜೆಗಳೇ, ನಿಮ್ಮ ರಕ್ಷಣೆಗಾಗಿ ರಾಜನಾದ ನಾನು ಜೀವನ ವಿಡೀ ದುಡಿದರೂ ನಿಮಗೆ ಅದರ ಪರಿವೆ ಇಲ್ಲ ದಂತೆ ಮಾತಾಡುತ್ತಿರುವಿರಿ. ನೀವೆಲ್ಲರೂ ಮೈ-ಗಳ್ಳರು. ಹೋಗಿ, ಎಲ್ಲಿ ಇದ್ದಲ್ಲಿಂದ ನಿಮ್ಮ ಹಳೇ ಆಯುಧಗಳನ್ನು ಹುಡುಕಿ ನಿಮ್ಮ ನಿಮ್ಮ ಕಾರ್ಯ ಪ್ರಾರಂಭಿಸಿರಿ."

ಮುಂದಾಳೊಬ್ಬ ನಡುಗುತ್ತ ನುಡಿದ: "ದಯ ದೋರಬೇಕು, ದೊರೆ. ಕಬ್ಬಿಣದ ಆಯುಧಗಳು ತುಕ್ಕು ಹಿಡಿದು ಹಾಳಾಗಿವೆ. ಕಟ್ಟಿಗೆಯವು ಲಡ್ಡಾಗಿ ಹೋಗಿವೆ. ನಮ್ಮ ವ್ಯಾಪಾರಕ್ಕೆ ನಮ್ಮಲ್ಲೇ ಆಸ್ಪದವಿಲ್ಲದಂತಾದಾಗ ನಾವು ನಮ್ಮ ವ್ಯವಸಾಯಗಳನ್ನು ಬಿಟ್ಟು ಬೇರೆ ಕೆಲಸಗಳಲ್ಲಿ ತೊಡಗಬೇಕಾಯಿತು. ನಮ್ಮಲ್ಲಿ ಹಲವು ಘನ ವಂತರೂ ದನಗಳ ಸೆಗಣಿಯನ್ನೂ ಕಾಡಿನಿಂದ ಕಟ್ಟಿಗೆಗಳನ್ನೂ ಆರಿಸಿ ಮಾರಿ ಉದರನಿರ್ವಾಹ ಮಾಡಬೇಕಾಗಿದೆ. ಈ ನಮ್ಮ ಎಲುಬು ತೊಗ ಲಿನ ಗೊಂಬೆಗಳಂತಿರುವ ಮಕ್ಕಳಲ್ಲಿ ಅನಾದಿ ಕಾಲದಿಂದ ಬಂದ ಯಾವ ಕಲೆಯ ಅವಶೇಷವೂ ಉಳಿದಿಲ್ಲ!"

"ಸಾಕು ಸಾಕು," ತಲೆ ಕೊಡಹಿದ ರಾಜ. ಮಂತ್ರಿಯತ್ತ ಹೊರಳಿ ಗುಡುಗಿದ: "ನಿನಗೆ ಬುದ್ಧಿ ಇರಲಿಲ್ಲ. ನೀನೇ ನನ್ನ ರಾಜ್ಯವನ್ನು ಹಾಳು ಮಾಡಿದೆ. ಯಾರಾರೊ ಮೊದಲೇ ನನ್ನ ಕಣ್ಣು ತೆರೆಯಲೆಂದು ಯತ್ನಿಸಿದರೆ ನೀನು ಅವ ರನ್ನು ಕ್ರಾಂತಿಕಾರಕರೆಂದು ಕರೆದೆ. ನಾನು ಎಂಥ ಮೂರ್ಖ. ಅಥವಾ ನಿನ್ನನ್ನು ನಂಬಿದ್ದಕ್ಕೆ ನೀನೇ ಏನಾದರೂ ನನ್ನ ಕುತ್ತಿಗೆ . . ."

ಈ ವಾಕ್ಯಕ್ಕೆ ಸಹನೆ ಮೀರಿ ಮಂತ್ರಿ ಕತ್ತಿ ಯನ್ನು ಹಿಡಿದ. ರಾಜನೂ ಟೊಂಕದಲ್ಲಿದ್ದ ಖಡ್ಗಕ್ಕೆ ಕೈಹಾಕಿದ. ಇಷ್ಟರಲ್ಲಿ ದೂತನೊಬ್ಬನು ಓಲಗದಲ್ಲಿ ನುಗ್ಗಿ, "ಮಹಾರಾಜರೆ, ಮಹಾ ರಾಜರೆ, ಘಾತವಾಯಿತು. ಮಧುರೇಶನ ಸೈನ್ಯ ನಮ್ಮ ರಾಜಧಾನಿಯನ್ನು ಎಲ್ಲ ಕಡೆಯಿಂದಲೂ ಮುತ್ತಿದೆ."

"ಪ್ರಾಣದ ಹಂಗು ದೊರೆದು ದೇಶದ ಸ್ವಾತಂ ತ್ರ್ಯಕ್ಕಾಗಿ ಕಾದಿರಿ" ರಾಜನೆಂದ.

ಆದರೆ ಸಮಯ ಆಗಲೇ ಮೀರಿತ್ತು. ಮೃತ್ಯು ಅಲಕಾಪುರಿಯಲ್ಲಿ ತಾಂಡವವಾಡತೊಡಗಿತು. ಅಂಗಡಿಗಳು, ಬೃಹತ್ಪ್ರಾಸಾದಗಳು ಬೆಂಕಿಯ ಬಾಯಲ್ಲಿ ಆಹುತಿಯಾದವು. ಶತ್ರುಗಳು ಅಡ್ಡ ಬಂದ ಎಲ್ಲರನ್ನೂ ಕತ್ತಿಯಿಂದ ತಿವಿದು ಸೀಳ ತೊಡಗಿದರು. ರಾಜ ರಣಾಂಗಣದಲ್ಲೇ ಮಡಿದ. ಅಲಕೇಶನ ದೇಹ ಭೂಮಿಗುರುಳುತ್ತಿರುವಂತೆ ಅವನ ಬಾಯಿಂದ ಕ್ಷೀಣ ಸ್ವರದಲ್ಲಿ ಈ ಶಬ್ದಗಳು ಹೊರಬಿದ್ದವು: "ಈ ಶೀತಲ ಯುದ್ಧ ನಿನ್ನೆಯದಲ್ಲ. ಬಹು ಹಿಂದಿನದು. ಮೊತ್ತಮೊದಲು ಅಗ್ಗದರದ ಅಂಗಡಿ ಪ್ರಾರಂಭವಾದಾಗಲೇ ಆ ಗೋಮುಖದ ಹಿಂದೆ ವ್ಯಾಘ್ರ ಅಡಗಿತ್ತೆಂದು ನಾನು ತಿಳಿಯ ಬೇಕಿತ್ತು. ಅಂದಿನ ಅಂಗಡಿ ಮಾರಿಗೆ ಔತಣ ವಾಗಿತ್ತು. ಅದೇ ಇಂದು ನನ್ನ ಪೂರ್ವಜರ ಗೌರವದ ನಗರವನ್ನು ನೆಲ ಸಮ ಮಾಡು ತ್ತಿದೆ..."

*



ಮಹಾತ್ಮರ ವಿಚಾರಗಳು ಅಲ್ಲಿ
ಆಚಾರಕ್ಕಿಳಿಯುತ್ತಿವೆ

# ಅಮೇರಿಕೆಯಲ್ಲಿ ಗಾಂಧೀಜಿ

## (೨)

ರಂ. ರಾ. ದಿವಾಕರ

ಗಾಂಧೀ ತತ್ವ ಹಾಗೂ ತಂತ್ರ ಇವು ಅಮೇರಿಕೆಗೆ (ಯು. ಎಸ್. ಏ.) ತೀರ ಹೊಸವೆಂದು ಹೇಳಲಿಕ್ಕಾಗುವುದಿಲ್ಲ. ಜೀಸಸ್ ಕ್ರಾಯಿಸ್ಟನು ಪೂರಾ ಅಹಿಂಸಾವಾದಿಯೇ ಆಗಿದ್ದನು; ಪೂರ್ಣ ನೈತಿಕ ಜೀವನವೇ ಎಲ್ಲಕ್ಕೂ ಶ್ರೇಷ್ಠ ಜೀವನ ಎಂದು ಸಾರಿದನವನು; ದೇವರಲ್ಲಿ ಅಪಾರ ಶ್ರದ್ಧೆಯೇ ಅವನ ಧರ್ಮದ ತಳಹದಿ. ಅದೇ ರೀತಿ, ಥೋರೋ ಎಂಬವನು ತನ್ನ ವ್ಯಕ್ತಿ ಜೀವನದಲ್ಲಿ ಅನ್ಯಾಯದ ಕರಗಳ ನಿರಾಕರಣೆ, ಸವಿನಯ ಕಾಯದೆಭಂಗ ಇತ್ಯಾದಿಗಳನ್ನು ಆಚರಿಸಿ ತೋರಿಸಿದನು.

ಆದರೆ ಈಗ ಗಾಂಧೀಜಿಯವರು ಅಹಿಂಸಾವಾದದ ಮಹಾ ಆಚಾರ್ಯರು, ಭಾಷ್ಯಕಾರರು, ಸತ್ಯಾಗ್ರಹದ ಪರಮ ಪ್ರಣೇತರು, ಸವಿನಯ ಕಾಯದೆಭಂಗದ ಶ್ರೇಷ್ಠ ಜಗದ್ಗುರುಗಳು ಎಂದು ಮನ್ನಣೆ ಪಡೆಯುತ್ತಿದ್ದಾರೆ. ಅಮೇರಿಕೆಯ ಜನಸಾಮಾನ್ಯರಲ್ಲಿ ಅವರ ಬಗ್ಗೆ ಈ ಭಾವನೆಗಳು ನೆಲೆಸುತ್ತಿವೆ. ಇಷ್ಟೇ ಅಲ್ಲ. ಅಲ್ಲಿಯ ವಿದ್ವಾಂಸರು, ವಿಚಾರವಂತರು, ಮಹಾ ಲೇಖಕರು ಅವರಿಗೆ ಈ ಉಚ್ಚಸ್ಥಾನವನ್ನು ಕೊಡುತ್ತಿದ್ದಾರೆ. 'ಇಂಥ ಮಹಾ ಪುರುಷನೊಬ್ಬನು ಈಚೆಗೆ ಈ ಪೃಥ್ವೀತಲದ ಮೇಲೆ ಬಾಳಿ, ಬದುಕಿ, ಜಗತ್ತಿಗೆ ಬೆಳಕು ಬೀರಿ ಹೋದನೇ' ಎಂಬ ಬಗ್ಗೆ ಜನರು ಅಚ್ಚರಿಪಡುವರು ಎಂದು ವಿಜ್ಞಾನಿಗಳಲ್ಲಿ ಅತಿ ಶ್ರೇಷ್ಠನಾದ ಐನ್‌ಸ್ಟೈನನು ನುಡಿದುದುಂಟು. 'ಇವನ ಸರಿಸಾಟಿಯನ್ನು ಹುಡುಕಬೇಕಾಗಿದ್ದರೆ ಎರಡು ಸಾವಿರ ವರುಷಗಳಾಚೆ ಹೋಗಬೇಕಾದೀತು' ಎಂದು ಲುಯಿ ಫಿಶರ್ ಎಂಬ ದೊಡ್ಡ ಲೇಖಕನು ಬರೆದಿರುವನು. ಮಾನವನು ಈಗಿದ್ದ ಸ್ವಾರ್ಥಭಾವವನ್ನು ಕಡೆಗಣಿಸಿ ತನ್ನ ಪರಾರ್ಥಭಾವವನ್ನು ಬೆಳೆಸಿಕೊಳ್ಳದೆ ಹೋದರೆ ಮಾನವಕುಲದ ಉದ್ಧಾರವಾಗದು, ಎಂಬ ಪ್ರಮೇಯವನ್ನು ಸಾಧಕಬಾಧಕ ಪ್ರಮಾಣಗಳಿಂದ ಸಿದ್ಧಮಾಡಿ ತೋರಿಸಿದ ಪ್ರಸಿದ್ಧ ಸಮಾಜವಿಜ್ಞಾನಿ ಸೋರೋಕಿನ್ನನು ತನ್ನ 'ಮಾನವ ಸಮಾಜದ ಪುನಾರಚನೆ' ಎಂಬ ಪುಸ್ತಕವನ್ನು 'ಅಮರ ಜೀವಿಯಾದ ಮೋಹನ ದಾಸ ಕರಮಚಂದ ಗಾಂಧಿ' ಇವರಿಗೆ ಮುಡುಪಿಟ್ಟಿದ್ದಾನೆ ! ಈಚೆಗೆ (ಕಾಂಕ್ವೆಸ್ಟ್ ಆಫ್ ವಾಯೋಲನ್ಸ್) 'ಹಿಂಸೆಯನ್ನು ಗೆಲ್ಲುವುದು' ಎಂಬ ಗ್ರಂಥವನ್ನು ಕುಮಾರಿ ಬಾಂಡ್ಯುರಾಂಟ್ ಎಂಬ ವಿದುಷಿ ಬರೆದಿರುವಳು ಹಾಗೂ ಅದನ್ನು ಒಳ್ಳೆ ಹೆಸರುವಾಸಿಯಾದ ಪ್ರಿನ್‌ಸ್ಟನ್ ವಿಶ್ವವಿದ್ಯಾಲಯದವರು ಪ್ರಕಟಿಸಿರುವರು. ಅದು

ಗಾಂಧಿವಾದ ಹಾಗೂ ತಂತ್ರ ಇವುಗಳ ಮೇಲೆ ಉತ್ತಮವಾದ ಭಾಷ್ಯವೆನಿಸುವುದು.

ಕುಮಾರಿ ಬಾಂಡ್ಯುರಾಂಟ್ ಈಕೆ ೧೯೫೩ ರಲ್ಲಿ ಭಾರತಕ್ಕೆ ಬಂದಿದ್ದಳು ಹಾಗೂ ನನ್ನೊಡನೆ ಗಾಂಧೀ ತತ್ವಜ್ಞಾನವನ್ನು ಒಂದು ಗಂಟೆ ಕಾಲ ಚರ್ಚಿಸಿದ್ದಳು. ನಾನು ಬಾರ್ಕಲೇಗೆ (ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯ) ಹೋದಾಗ ವಿದ್ವಾಂಸರ ಒಂದು ಚಿಕ್ಕ ಕೂಟವನ್ನು ಕರೆದು ನನ್ನನ್ನು ಊಟಕ್ಕೆ ಆಮಂತ್ರಿಸಿದ್ದಳು. ಆಗ ನನಗೆ ಭಾರತದಲ್ಲಿ ಭೆಟ್ಟಿಯಾದ ಸೆನಪನ್ನು ಕೊಟ್ಟು ಪ್ರಸ್ತಾಪಿಸಿದಳು. ಈಗ ಆಕೆ ದೊಡ್ಡ ವಿದುಷಿಯೂ ಅಹುದು, ಗಾಂಧೀ ತತ್ವಜ್ಞಾನದ ಪ್ರಚಾರಕಳೂ ಅಹುದು. ಅದೇ ರೀತಿ, ಪಿತ್ರಿಮ್ ಸೊರೋಕಿನ್ ಇವರು ನನ್ನನ್ನು ತಮ್ಮ ಮನೆಗೆ (ಹಾರವರ್ಡ್ ಹತ್ತರ ವಿಚೆಂಸ್ಟರ್ ಎಂಬಲ್ಲಿ) ಮಧ್ಯಾನ್ಹದ ಊಟಕ್ಕೆ ಕರೆದು ಉತ್ತಮ ಶಾಕಾಹಾರದ ಅಡಿಗೆ ಮಾಡಿಸಿದ್ದರು. ತಾವು ಗಂಡ ಹೆಂಡಂದಿರು ಆ ದಿನ ಶಾಕಾಹಾರವನ್ನೇ ಸೇವಿಸಿದರು. ಅವರೊಡನೆ ಮೂರು ಗಂಟೆ ಕಾಲ ವಿಚಾರ ವಿನಿಮಯ ನಡೆಯಿತು. ಮುಖ್ಯವಾಗಿ ಗಾಂಧಿ, ಅರವಿಂದ ಮುಂತಾದವರ ತತ್ವಜ್ಞಾನದ ಚರ್ಚೆ ಆಯಿತು. ಅಹಿಂಸಾಮಾರ್ಗದ ಹೊರತು ಮಾನವ ಪ್ರಗತಿ ಅಶಕ್ಯ ಎಂಬುದೇ ಮಾತುಗಳ ಮಥಿತಾರ್ಥವೆಂದು ಹೇಳಬಹುದು.

ಅಮೇರಿಕೆಯಲ್ಲಿ ಒಂದು ಕಡೆ ಪರಮಾಣು ಶಕ್ತಿಯ ಅತೀವ ಹಾಗೂ ತೀವ್ರ ಸಂಶೋಧನೆ ಹಾಗೂ ಅಣ್ವಸ್ತ್ರಗಳ ಸಂಗ್ರಹ ಇವು ನಡೆದಿದ್ದರೆ ಇನ್ನೊಂದೆಡೆ ಯುದ್ಧ ವಿರೋಧಿಗಳ (ವಾರ್ ರೆಝಿಸ್ಟರ್ಸ್) ಹಾಗೂ ಶಾಂತಿವಾದಿಗಳ (ಪ್ಯಾಸಿಫಿಸ್ಟ್) ತಂಡಗಳು ಬೆಳೆಯಲಾರಂಭಿಸಿವೆ. ಈ ತಂಡಗಳು ಚಿಕ್ಕವಿರುವವು ಹಾಗೂ ಸದ್ಯಕ್ಕೆ ಪರಿಣಾಮಕಾರಕವಿಲ್ಲ ಎಂಬುದು ನಿಜ. ಜನರು ಅವರನ್ನು ಹಿಂಬಾಲಿಸದಿದ್ದರೂ ಸಂದರ್ಭಾನುಸಾರ ಅವರು ಮಾಡುವ ಸವಿನಯ ಕಾಯದೇ ಭಂಗವನ್ನು ತಾವು ಕೈಕೊಳ್ಳದಿದ್ದರೂ ಜನರಿಗೆ ಆ ವಿಚಾರ ಸಲ್ಲುತ್ತಿದೆ. ಯಾಕೆಂದರೆ ಅವರಿಗೂ ಯುದ್ಧ ಬೇಡ, ಶಾಂತಿ ಬೇಕು. ಆದರೆ ಸರಿಯಾದ ಹಾಗೂ ಪರಿಣಾಮಕಾರಿಯಾದ ಮಾರ್ಗದ ಬಗ್ಗೆ ಅವರಲ್ಲಿ ನಿರ್ಧಾರವಿಲ್ಲ!

ಸಾಮಾನ್ಯತಃ ಕ್ರಿಶ್ಚನ್ನರಲ್ಲಿ ಕ್ವೇಕರ್ಸ್ ಪಂಥದವರೆಲ್ಲರೂ ಪೂರ್ಣ ಶಾಂತಿವಾದಿಗಳು. ಅಲ್ಲಲ್ಲಿಯ ಫ್ರೆಂಡ್ಸ್ ಸೊಸಾಯಿಟಿ (ಗೆಳೆಯರ ಗುಂಪು) ಎಂಬ ಕೂಟದವರು ಕೂಡ ಶಾಂತಿವಾದಿಗಳು. ಅದೇ ರೀತಿ ಬೋಸ್ಟನ್ ಹಾಗೂ ಹಾರವರ್ಡ್ ವಿಶ್ವವಿದ್ಯಾಲಯಗಳಲ್ಲಿಯ ಅನೇಕ ಪಂಡಿತರು ಹಾಗೂ ವಿದ್ಯಾರ್ಥಿಗಳು ಫ್ರೆಂಡ್ಸ್ ಸರ್ವಿಸ್ ಕಮಿಟಿ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಈ ವಿಚಾರಗಳ ಪ್ರಚಾರ ಮಾಡುತ್ತಿದ್ದಾರೆ. ನ್ಯೂಯಾರ್ಕ್ ಪಟ್ಟಣದಲ್ಲಿಯೂ ಈ ಬಗೆಯ ಗುಂಪುಗಳಿವೆ. ನಾನು ಆಯಾ ಸ್ಥಳಗಳಿಗೆ ಹೋದಾಗ ನನಗೆ ಅವರು ಆಸ್ಥೆಯಿಂದ ಆಮಂತ್ರಣ ಕೊಟ್ಟರಲ್ಲದೆ ಅತ್ಯಂತ ಕುತೂಹಲ ಭಾವದಿಂದ ನನ್ನ ವಿಚಾರಗಳನ್ನು ತಿಳಿದುಕೊಳ್ಳಲು ಯತ್ನಿಸಿದರು. ಪರರಾಷ್ಟ್ರದ ದಾಳಿ ಬಂದಾಗ ಹಾಗೂ ಅಂತರ್ ರಾಷ್ಟ್ರೀಯ ರಾಜಕಾರಣದಲ್ಲಿ, ಅದೇ ರೀತಿ ಈಗ ನಡೆದಿರುವ ಹಿಂಸಾತ್ಮಕ ಶಸ್ತ್ರಾಸ್ತ್ರಗಳ ಮೇಲಾಟದಲ್ಲಿ ಗಾಂಧೀ ತಂತ್ರವನ್ನು ಯಾವ ರೀತಿ ಅಮಲಿನಲ್ಲಿ ತರಬೇಕು ಎಂಬುದೇ ಮುಖ್ಯವಾಗಿ ಅವರೆದುರಿನ ಸಮಸ್ಯೆಗಳು. 'ನೀವು ಭಾರತದ ಶಾಂತಿಮಯ ಆಂದೋಲನದಲ್ಲಿ ಪ್ರತ್ಯಕ್ಷ ಭಾಗವಹಿಸಿದವರು, ಗಾಂಧೀಜಿಯವರ ಸಮಕಾಲೀನರಿದ್ದು ಅವರ ಸಮೀಪದ ಅನುಯಾಯಿಗಳಾಗಿ ನಡೆದವರು. ಆದುದರಿಂದ ನಿಮ್ಮ ಅನುಭವವು ಅತ್ಯಂತ ಮಹತ್ವದ್ದು' ಎಂದು ಅವರು ಪ್ರಸ್ತಾಪಿಸುತ್ತಿದ್ದರು. ಆಗ ನಡೆದ ಚರ್ಚೆ ಮುಂತಾದವುಗಳನ್ನು ಸಂಕಲಿತ ರೂಪದಿಂದ ಪ್ರಶ್ನೋತ್ತರದ ಧಾಟಿಯಲ್ಲಿ ಇನ್ನೊಂದು ಸಂದರ್ಭದಲ್ಲಿ ಕೊಡುವುದು

ಉಚಿತವಾಗುವುದು.

ಅಮೇರಿಕೆಯಲ್ಲಿ ಭೆಟ್ಟಿಯಾದ ಎಲ್ಲ ಗಾಂಧೀವಾದಿ ವ್ಯಕ್ತಿಗಳ ಹಾಗೂ ಸಂಘ ಸಂಸ್ಥೆಗಳ ನಾಮನಿರ್ದೇಶವನ್ನು ಇಲ್ಲಿ ಮಾಡುವುದು ಸಾಧ್ಯವಿಲ್ಲ. ಆದರೆ ಹಲವು ಮಹತ್ವದ ಹೆಸರುಗಳನ್ನು ಇಲ್ಲಿ ಕೊಡಬಲ್ಲೆ. ಬೋಸ್ಟನ್ ವಿಶ್ವವಿದ್ಯಾಲಯದಲ್ಲಿ ಪ್ರೊ. ಅಮಿಯಾ ಚಕ್ರವರ್ತಿ ಎಂಬವರು ಭಾರತೀಯ ವಿಚಾರ, ಸಂಸ್ಕೃತಿಗಳ ಅಧ್ಯಾಪಕರಿರುವರು. ಗಾಂಧೀ ವಿಚಾರಗಳನ್ನು ಕುರಿತು ಅವರು 'ಸತ್ಯಾಗ್ರಹ-ದಿ ಪಾವರ್ ಆಫ್ ಟ್ರುಥ್' ಎಂಬ ನನ್ನ ಪುಸ್ತಕವನ್ನೆ ಪಠ್ಯಪುಸ್ತಕವನ್ನಾಗಿ ನೇಮಿಸಿದ್ದಾರೆ. ಇದು ನನ್ನ 'ಸತ್ಯಾಗ್ರಹ' ಪುಸ್ತಕದ ಅಮೇರಿಕನ್ ರೂಪ. ಗಾಂಧೀವಾದಿಗಳಲ್ಲಿ ಈ ಪುಸ್ತಕಕ್ಕೆ ಒಳ್ಳೆ ಮನ್ನಣೆ ಇದೆ. ಆರ್ಥರ್‌ಸ್ಪ್ರಿಂಗರ್ ಡೀಟ್ಸ್, ರಾಬರ್ಟ್ ಗಿಲ್‌ಮೋರ್, ಮಸ್ಟೆ, ಪಿಕಸ್, ಬಯಾರ್ಡ್ ರಸ್ಟಿನ್, ಹೋಮರ್ ಜಾಕ್ಸ್ ಡಾ. ಹೋಮ್ಸ್ ಈ ಮುಂತಾದವರನ್ನು ನಾನು ಭೆಟ್ಟಿಯಾಗಿದ್ದೆನು. ಇವರು ಹಾಗೂ ಇವರು ನಡೆಸುತ್ತಿರುವ ಸಂಸ್ಥೆಗಳು, ಇವರಲ್ಲಿ ಹಲವರು ಬರೆದ ಕೆಲ ಗ್ರಂಥಗಳು ಅಮೇರಿಕೆಯಲ್ಲಿ ಗಾಂಧೀ ವಿಚಾರಪ್ರಣಾಲಿಯನ್ನು ಹಬ್ಬಿಸಲು ಬಹಳ ಸಹಾಯಕವಾಗಿವೆ.

ಇವರಲ್ಲಿ ಹಲವರು ಕೇವಲ ವಿಚಾರ ಸೃಷ್ಟಿಯಲ್ಲಿ ಅಷ್ಟೇ ಇದ್ದು ಸಂತುಷ್ಟರಾಗದೆ, 'ಪೊಲಾರಿಸ್' ಮುಂತಾದ ಅಸ್ತ್ರಗಳ ವಿರುದ್ಧ ಪ್ರತ್ಯಕ್ಷ ಕಾಯದೆಭಂಗವನ್ನು ಹೂಡಿ ಸೆರೆಮನೆಯನ್ನು ಕೂಡ ಸೇರಿದ್ದಾರೆ. ಅವರ ಸಂಖ್ಯೆ ಅತ್ಯಲ್ಪವಿದ್ದರೂ ಅದರಿಂದ ಅಮೇರಿಕೆಯ ವಾತಾವರಣದಲ್ಲಿ ಒಂದು ಹೊಸ ಶಕ್ತಿಯ ಅವತಾರವಾಗುತ್ತಿದೆ ಎಂಬುದು ವ್ಯಕ್ತವಾಗುವುದು.

ಇನ್ನು ಅಲ್ಲಿಯ ನಿಗ್ರೋ ಜನರಲ್ಲಿ ನಡೆದ ವಿಚಾರಕ್ರಾಂತಿ ಹಾಗೂ ಆಂದೋಲನದತ್ತ ನೋಡುವ. ಇವರ ಸಂಖ್ಯೆ ಅಮೇರಿಕೆಯಲ್ಲಿ ಒಂಬತ್ತರಲ್ಲಿ ಒಂದು ಪಾಲು ಇರಬಹುದು. ನಿಗ್ರೋ ಜನರಲ್ಲಿ ರಕ್ತ ಮಿಶ್ರಣವು ಕೂಡ ದೊಡ್ಡ ಪ್ರಮಾಣದಲ್ಲಿ ಆಗಿದೆ. ಆದರೂ ಅವರಿಗೆ 'ಕಲರ್ಡ್' (ಬಣ್ಣದವರು) ಎಂಬ ಅಭಿಧಾನ ಕೊಡಲಾಗಿದೆ. ವೃತ್ತಪತ್ರಗಳಲ್ಲಿ ಪ್ರಕಟನೆಗಳನ್ನು ಕೊಡುವಾಗ 'ಕಲರ್ಡ್' ಎಂಬ ಶಬ್ದವನ್ನೆ ಉಪಯೋಗಿಸಲಾಗುತ್ತಿದೆ.

ಕಾಯದೆಯಿಂದ, ಸಂವಿಧಾನದಿಂದ, ಅಲ್ಲಿಯ ಸುಪ್ರೀಂ ಕೋರ್ಟಿನ ತೀರ್ಪುಗಳ ಮೂಲಕ 'ಎಲ್ಲರೂ ಸಮಸಮಾನರು' ಎಂಬ ಸಿದ್ಧಾಂತಕ್ಕೆ ಮನ್ನಣೆ ಇದ್ದರೂ ಪ್ರತ್ಯಕ್ಷ ಆಚರಣೆ ಹಾಗೂ ವ್ಯವಹಾರಗಳಲ್ಲಿ ಬಹಳ ಕೀಳು ಬಗೆಯ ತಾರತಮ್ಯ ಹಾಗೂ ಅನ್ಯಾಯ ಅಲ್ಲಿ ಬೆಳೆದುಬಂದಿವೆ.

ಅವೆಲ್ಲವುಗಳ ವಿರುದ್ಧ ಈಗ ಅಮೇರಿಕೆಯಲ್ಲಿ, ವಿಶೇಷತಃ ದಕ್ಷಿಣದ ಏಳೆಂಟು ಸಂಸ್ಥಾನಗಳಲ್ಲಿ (ಡೀಪ್ ಸೌಥ್) ಬಹಳ ದೊಡ್ಡ ಸವಿನಯ ವಿರೋಧವನ್ನು ಹೂಡಲಾಗಿದೆ. ಅದರ ಮುಖಂಡರು ಡಾ. ಮಾರ್ಟಿನ್ ಲೂಥರ್ ಕಿಂಗ್ ಎಂಬವರು. ಅವರು ಪತ್ನೀಸಮೇತರಾಗಿ ೧೯೫೯ ರಲ್ಲಿ ಭಾರತಕ್ಕೆ ಬಂದಿದ್ದರು. ಗಾಂಧೀ ನಿಧಿಯವರು ಅವರ ಸಂಚಾರದ ವ್ಯವಸ್ಥೆ ಮಾಡಿದ್ದರು. ಆದುದರಿಂದ ನಾನು ಅವರ ಊರಾದ ಅಟ್‌ಲಾಂಟಾಕ್ಕೆ ಹೋಗಿ ಮೂರು ದಿವಸ ತಂಗಿದ್ದೆನು. ಆಗ ಅಲ್ಲಿ ಸತ್ಯಾಗ್ರಹಿಗಳ ಒಂದು ದೊಡ್ಡ ಪರಿಷತ್ತು ಕೂಡಿತ್ತು. ಡಾ. ಲೂಥರ್ ಕಿಂಗ್ ಇವರು ಬಹಳ ಉದ್ಬೋಧಕ ಭಾಷಣದ ಮೂಲಕ ಜನರಿಗೆ ಮಾರ್ಗದರ್ಶನ ಮಾಡಿದರು.

ಬಿಳಿಯರ ಶಾಲೆಗಳಲ್ಲಿ ಪ್ರವೇಶವಿಲ್ಲದಿರುವಿಕೆ, ದೊಡ್ಡ ದೊಡ್ಡ ಸ್ಟೋರ್ಸ್ ಮುಂತಾದವುಗಳಲ್ಲಿ ಬಿಳಿಯರೊಡನೆ ಕೂಡಲು ಪ್ರತಿಬಂಧ ಇತ್ಯಾದಿ ಅನ್ಯಾಯಗಳ ವಿರುದ್ಧ ಅಲ್ಲಿಯ ನಿಗ್ರೋ ಜನರು ಅಹಿಂಸಾತ್ಮಕ ವಿರೋಧವನ್ನು ಹೂಡಿದ್ದಾರೆ. ಅಲ್ಲಲ್ಲಿ ಅವರಿಗೆ ಸಾಕಷ್ಟು ಜಯವೂ ದೊರೆಯುತ್ತಿದೆ.

ಇನ್ನು ಹತ್ತು ವರುಷಗಳಲ್ಲಿ ಈ ಎಲ್ಲ ಅನ್ಯಾಯಗಳು ದೂರವಾಗಿ ಹೋಗುವವು ಎಂಬ ಆತ್ಮ ವಿಶ್ವಾಸವು ಡಾ. ಕಿಂಗ್ ಇವರಲ್ಲಿ ಉಂಟಾಗಿದೆ. 'ನಾನು ಕ್ರೈಸ್ತನಿಂದ ಅಹಿಂಸೆಯನ್ನು ಕಲಿತೆ; ಆದರೆ ಸಮಾಜದಲ್ಲಿಯ ಅನ್ಯಾಯಗಳನ್ನು ಅಹಿಂಸಾ ಮಾರ್ಗದಿಂದ ಹೇಗೆ ತೊಡೆಯಬೇಕೆಂಬದನ್ನು ಗಾಂಧಿಯವರಿಂದ ಕಲಿತೆ,' ಎಂದು ಡಾ. ಕಿಂಗರು ಜನಜನಿತವಾಗಿ ಹೇಳುವರು.

ಸತ್ಯಾಗ್ರಹ ಹಾಗೂ ತ್ಯಾಗಪೂರ್ವಕವಾಗಿ ವಿಧಾಯಕ ಕಾರ್ಯಗಳ ಮೂಲಕ ಸಮಾಜಸೇವೆ, ಇವುಗಳ ಅಭೇದ್ಯ ಸಂಬಂಧವನ್ನು ಇನ್ನೂ ಅಲ್ಲಿಯ ಗಾಂಧೀವಾದಿಗಳಲ್ಲಿ ಅನೇಕರು ಸಾಕಷ್ಟು ತಿಳಿದುಕೊಂಡಿಲ್ಲ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಪ್ರಸಂಗ ಬಂದಾಗೆಲ್ಲ ನಾನು ಈ ಮಾತನ್ನು ಒತ್ತಿ ಹೇಳುತ್ತಿದ್ದೆ. ಸವಿನಯ ಕಾಯದೆ ಭಂಗ, ಅಥವಾ ಶಾಂತಿಮಯ ವಿರೋಧ, ಇದೊಂದು ಒಳ್ಳೇ ಉಪಾಯ, ಎಂದು ಅದನ್ನು ಉಪಯೋಗಿಸಲನುವಾಗುವವರೇ ಬಹಳ. ಆದರೆ ತಾತ್ವಿಕ ವಿಚಾರ ಮಾಡುವವರೆಲ್ಲ, ವಿಶೇಷತಃ ಡಾ. ಕಿಂಗ್ ಮುಂತಾದವರು ಈ ಅಭೇದ್ಯ ಸಂಬಂಧವನ್ನು ಚೆನ್ನಾಗಿ ಅರಿತುಕೊಂಡಿದ್ದಾರೆ. ತಮ್ಮ ಭಾಷಣ ಲೇಖನಗಳಲ್ಲಿ ಕೂಡ ಅವರು ಈ ಮಾತನ್ನು ಬಹಳ ಸ್ಪಷ್ಟವಾಗಿ ಹೇಳುತ್ತಾರೆ.

ಅಲ್ಲಿಯ ಗಾಂಧೀವಾದಿಗಳೊಡನೆ ಭೇಟಿ, ಚರ್ಚೆ, ವಿಚಾರವಿನಿಮಯ ಮುಂತಾದವುಗಳಲ್ಲದೆ ಅಟಲಾಂಟಾದಲ್ಲಿ ಎರಡು ಮೂರು ಕಡೆಗೆ 'ಸತ್ಯಾಗ್ರಹ', 'ಅಹಿಂಸಾ ತತ್ವ,' 'ಕ್ರೈಸ್ಟ್ ಹಾಗೂ ಗಾಂಧಿ' ಈ ವಿಷಯಗಳನ್ನು ಕುರಿತು ನಾನು ಜಾಹೀರು ಭಾಷಣ ಮಾಡುವ ಪ್ರಸಂಗಗಳು ಬಂದವು. ಅವುಗಳನ್ನು ಅಲ್ಲಿಯ ಜನರು ಬಹಳ ಲಕ್ಷ್ಯಗೊಟ್ಟು ಕೇಳಿದರು.

ಒಟ್ಟಿಗೆ ನೋಡಲಾಗಿ ಅಮೇರಿಕೆಯಲ್ಲಿಯ ನಿಗ್ರೋ ಜನರಿಗೆ ಗಾಂಧೀವಾದವೊಂದು ಹೊಸ ಶಕ್ತಿಯನ್ನು ಕೊಟ್ಟಿದೆ. ಅದು ಅವರ ಹೋರಾಟದಲ್ಲಿ ಪ್ರತ್ಯಕ್ಷ ಉಪಯೋಗಿಸಲಿಕ್ಕೆ ಬರುವ ಆಯುಧವಾಗಿ ಪರಿಣಮಿಸಿದೆ.

ಈ ರೀತಿ 'ಗಾಂಧಿ' ಈಹೊತ್ತು ಅಮೇರಿಕೆಯ ವಿಚಾರ ಸೃಷ್ಟಿಯಲ್ಲಷ್ಟೇ ಅಲ್ಲ, ಕಾರ್ಯಕ್ಷೇತ್ರದಲ್ಲಿ ಕೂಡ ಮಹತ್ವದ ಸ್ಥಾನವನ್ನು ಪಡೆದಿದ್ದಾರೆ.

ಆದುದರಿಂದಲೇ ಗಾಂಧೀನಿಧಿ, ಗಾಂಧೀ ಶಾಂತಿ ಪ್ರತಿಷ್ಠಾನ, ಗಾಂಧೀ ಚಲಚ್ಚಿತ್ರ ಮುಂತಾದವುಗಳ ಬಗ್ಗೆ ನಾನು ಮಾತನಾಡಲು ಪ್ರಾರಂಭಿಸಿದೊಡನೆ ಅಮೇರಿಕನ್ನರು ಒಳ್ಳೆ ಆಸ್ಥೆಯಿಂದ ಕೇಳುತಿದ್ದರು ಹಾಗೂ ಪ್ರಶ್ನಿಸುತಿದ್ದರು.

ಭಾರತ ಹಾಗೂ ಅಮೇರಿಕೆ ಈ ಎರಡು ಮಹಾನ್ ರಾಷ್ಟ್ರಗಳ ನಡುವೆ ಹೆಚ್ಚೆಚ್ಚು ಬಾಂಧವ್ಯ ಬೆಳೆಯಲು ಗಾಂಧೀ ವಿಚಾರಗಳು ಕೂಡ ದೊಡ್ಡ ಸಾಧನಗಳಾಗಬಲ್ಲವೆಂಬುದು ಸ್ಪಷ್ಟ. *



ಇಮ್ಮಡಿ ಪುಲಿಕೇಶಿಯು ಕಾಲದಲ್ಲಿ ಯುದ್ಧಕ್ಕೆ ಹೋಗಿ ಸೋತು ಓಡಿ ಬಂದ ಅಧಿಕಾರಿಗಳಿಗೆ ಹೆಂಗಸರ ಬಟ್ಟೆಯುಡಿಸಿ ಅವಮಾನ ಮಾಡುತ್ತಿದ್ದರಂತೆ — ಹೀಗೆಂದು ಕ್ರಿ. ಶ. ೬೪೧ರಲ್ಲಿ ಕನ್ನಡನಾಡಿನಲ್ಲಿ ಸಂಚಾರ ಮಾಡಿದ ಚೀನೀ ಯಾತ್ರಿಕ ಹ್ಯೂ ಯೆನ್ ತ್ಸಾಂಗ್ ಬರೆದಿಟ್ಟಿದ್ದಾನೆ.

—ರವೀಂದ್ರನಾಥ ಎಸ್. ಬಿ.

# ನಗೆಮಲ್ಲಿಗೆ

ಒಮ್ಮೆ ಗಾಂಧೀಜಿಯವರ ಆಶ್ರಮದಲ್ಲಿ, ಗಾಂಧೀಜಿಯವರು ಪ್ರಾರ್ಥನೆಗಾಗಿ ಒಳಗಿದ್ದರು. ಹೊರಗೆ ಒಬ್ಬ ಗಾಂಧೀ ಟೊಪ್ಪಿಗೆ ಧರಿಸಿದ ಹುಡುಗ ಕೂತಿದ್ದ. ಓರ್ವ ಹ್ಯಾಟ್‌ಧಾರಿ ಬ್ರಿಟಿಷ್‌ರವನು ಈ ಹುಡುಗನನ್ನು ಗೇಲಿ ಮಾಡಬೇಕೆಂದು, “ಏ, ಹುಡುಗಾ, ನಿನ್ನ ತಲೇಮೇಲೆ ಟೋಪಿ ಇದೆಯೇ?” ಎಂದು ಪ್ರಶ್ನಿಸಿದನಂತೆ. ಚುರುಕು ಹುಡುಗ, ತಕ್ಷಣವೇ ಉತ್ತರಿಸಿದ: “ಸ್ವಾಮಿ, ನಿಮ್ಮ ಟೋಪಿ ಕೆಳಗೆ ತಲೆ ಇದೆಯೆ?” ಎಂದು.

ಬಿ. ಎಂ. ನಾಗೇಂದ್ರಶೆಟ್ಟಿ

ರೇಲ್ವೆ ಅಘಘಾತದಲ್ಲಿ ಗೋವಿಂದರಾಯರು ಸತ್ತಿದ್ದರು. ಮಾತನಾಡುವುದರಲ್ಲಿ ವಿಮಾ ಏಜಂಟರು ಚತುರರೆಂದು ತಿಳಿದ ಅವರ ಮಿತ್ರರು ಗೋವಿಂದರಾಯರ ಹೆಂಡತಿಗೆ ಈ ಸುದ್ದಿ ತಿಳಿಸಲು ಓರ್ವ ವಿಮಾ ಏಜಂಟರನ್ನು ಕಳಿಸಿದರು.

ವಿಮಾ ಏಜಂಟರು ಗೋವಿಂದರಾಯರ ಮನೆಗೆ ಬಂದು ಅವರ ಹೆಂಡತಿಗೆ “ಅಮ್ಮಾ, ನಿಮ್ಮ ಗಂಡ ರೇಲ್ವೆ ಅಪಘಾತವೊಂದರಲ್ಲಿ ೧೦,೦೦೦ ರೂಪಾಯಿ ಗೆದ್ದಿದ್ದಾರೆ” ಎಂದು ಹೇಳಿದರು.

ಅಂಗಡಿಯಾತ- ಸ್ವಾಮಿ, ಇನ್ನು ನಿಮಗೆ ಉದ್ದರಿ ಸಿಗಲಾರದು. ನಿಮ್ಮ ಬಿಲ್ ಬಹಳ ಹೆಚ್ಚಾಗಿ ಬಿಟ್ಟಿದೆ.

ಗಿರಾಕಿ- ಹೌದೋ ಅಲ್ಲವೋ? ಬಿಲ್ ನ್ಯಾಯವಾಗಿ ಎಷ್ಟಿರಬೇಕೋ ಅಷ್ಟು ಮಾಡಿಬಿಡಿ. ಈಗಲೇ ಕೊಟ್ಟು ಬಿಡುತ್ತೇನೆ.

*

ಹಳ್ಳಿಯ ಕಮ್ಮಾರ ತನ್ನಲ್ಲಿ ಹೊಸತಾಗಿ ಕೆಲಸಕ್ಕೆ ಬಂದಿದ್ದ ಹುಡುಗನಿಗೆ ಹೇಳಿದ. “ಈ ಕಬ್ಬಿಣದ ಸರಳು ಕಾಯಿಸಿ ಅದನ್ನು ಬಡಿಗಲ್ಲಿನ ಮೇಲಿಟ್ಟು ನಾನು ತಲೆಯಲ್ಲಾಡಿಸುತ್ತೇನೆ. ನೀನು ಸುತ್ತಿಗೆಯಿಂದ ಅದನ್ನು ಹೊಡಿ.”

ಹುಡುಗ ಹಾಗೆಯೆ ಮಾಡಿದ. ಈಗ ಆತನೇ ಆ ಕಮ್ಮಾರ ಸಾಲೆಯ ಒಡೆಯನಾಗಿದ್ದಾನೆ.




“ಮೊದಲನೆ ತಾರೀಕಿನಂದೆ ಖಾಲಿ ಪರ್ಸ್ ಕಳ್ಕೊಂಡಿದ್ದಾರಲ್ಲ... ಗ್ರಹಚಾರ!”

ಮಗ ನಿಂತುಕೊಂಡೇ ಊಟ ಮಾಡ ತೊಡಗಿದ್ದನ್ನು ಕಂಡು ತಾಯಿ "ಯಾಕೋ ಮುಟ್ಠಾಳಾ, ಕುಳಿತು ಉಣ್ಣಲು ಏನು ಧಾಡಿ ?" ಎಂದಳು.

ಅದಕ್ಕೆ ಮಗ "ಕೂತು ಉಂಡರೆ ಕುಡಿಕೆ ಹಣ ಸಾಲದು ಎಂದು ಶಾಲೆಯಿಂದ ಮಾಸ್ತರರು ಹೇಳಿದ್ದಾರಮ್ಮ" ಎಂದ. — ಎಸ್. ವೀರಣ್ಣ, ಸುರಪುರ

ನಾಟಕ ಮುಗಿಯುತ್ತ ಬಂದಿತ್ತು. ತನ್ನ ದುಷ್ಕೃತ್ಯಗಳ ಪರಿಣಾಮವಾಗಿ ಖಲ ನಾಯಕ ಫಾಶಿಗೇರಿದ್ದ. ನಾಯಕ ನಾಯಕಿಯನ್ನಾಲಿಂಗಿಸಿಕೊಂಡು "ಪ್ರಿಯೆ, ಕೊನೆಗೆ ನಾವಿಬ್ಬರೂ ಏಕಾಂತದಲ್ಲಿ ಸುಖವಾಗಿ ಸೇರುವಂತಾಯಿತು" ಎಂದ.

ಆಗ ಪ್ರೇಕ್ಷಕರಲ್ಲೊಬ್ಬ "ಇಲ್ಲಪ್ಪೊ! ಇಂದು ನಿಮ್ಮೊಡನೆ ಜನ ಇದ್ದಾರೆ. ನಾಳೆ ಮಾತ್ರ ನಿಮಗೆ ಏಕಾಂತ ಸಿಗುವುದು ಖಂಡಿತ" ಎಂದು ಕೂಗಿದ.

*

ಪ್ರವಾಸಿಕರು— ತಮ್ಮ ಕಾರಿನ ಹತ್ತಿರ ನಿಂತುಕೊಂಡು ಫೋಟೋ ತೆಗೆಸಿಕೊಳ್ಳಲೆಂದು ಸಾವಿರಗಟ್ಟಲೆ ಮೈಲು ದೂರ ಪ್ರಯಾಣ ಬೆಳೆಸುವವರು.

*

"ನಿಮ್ಮಲ್ಲಿ ಔಡಲೆಣ್ಣೆ ಇದೆಯೆ ?"
"ಇದೆ."
"ಆಗಸಿ ಎಣ್ಣೆ ?"
"ಅದೂ ಇದೆ."
"ಮತ್ತೆ ಬಿಸ್ಕೀಟು?"
"ಇದೆ ಸ್ವಾಮಿ, ಇದೆ."
"ಹಾಗಾದರೆ ಸಾಬೂನು ಹಚ್ಚಿಕೊಂಡು ಕೈತೊಳೆದುಕೊಳ್ಳಿ. ಆಮೇಲೆ ನನಗೆ ಒಂದಾಣೆಯ ಬಿಸ್ಕೀಟು ಕೊಡಿ."

ಮುದುಕರೊಬ್ಬರು ಒಂದು ದಿನ ನಮ್ಮ ಡಾಕ್ಟರರೊಡನೆ ಹೀಗೆ ಪ್ರಶ್ನಿಸಿದರು — "ಡಾಕ್ಟ್ರೇ! ನಶ್ಯ ಸೇದುವುದರಿಂದ ಮುದುಕರಿಗೇನಾದರೂ ಹಾನಿ ತಟ್ಟುತ್ತದೆಯೇ?"

ಡಾಕ್ಟರ್— "ಇಲ್ಲವೇ ಇಲ್ಲ, ಸ್ವಾಮೀ! ಯಾಕಂದರೆ ಮುದುಕರಾಗುವವರು ಯಾರೂ ನಶ್ಯ ಸೇದುವುದಿಲ್ಲ."

— ಬಿ. ಸಚ್ಚಿದಾನಂದ ಹೆಗಡೆ

ಪುಸ್ತಕ ವಿಮರ್ಶೆ— ಈ ಪುಸ್ತಕವನ್ನು ನಿಧಾನವಾಗಿ ಬದಿಗೆ ಸರಿಸುವುದು ಸರಿಯಲ್ಲ. ಇದನ್ನು ಬಹಳ ಜೋರಾಗಿ ಎಸೆಯಬೇಕು.

ಸಲಹೆ:— ಭಾಷಣಕಾರರು ತಮ್ಮ ಕೈಗಳಿಂದ ಏನು ಮಾಡಬೇಕೆಂದು ತೋಚದಿದ್ದಲ್ಲಿ ಅವುಗಳನ್ನು ಭದ್ರವಾಗಿ ಬಾಯಿ ಮೇಲೆ ಒತ್ತಲು ಪ್ರಯತ್ನಿಸಬೇಕು. —ಶ್ರೀ




"ವಿಪರೀತ ಬಿಸಿಲು ನೋಡಿ ಅದೂ ಅಲ್ದೆ ಛತ್ರಿ ಬೇರೆ ಕಳೆದೋಯ್ತು."

ಅವರ ಗಂಡ ಸಾಯದಿದ್ದರೆ ಈ ಆಸ್ಪತ್ರೆ
ಹುಟ್ಟುತ್ತಿದ್ದಿಲ್ಲ

# ವಿವಾಹ ದುರಂತದಿಂದ ಹುಟ್ಟಿದ ಆಸ್ಪತ್ರೆ

ಪೂರ್ಣಿಮಾ ಪಕ್ವಾಸಾ

"ಈ ಕರಿಮೋರೆಯವಳು ಮನೆಯಲ್ಲಿ ಕಾಲಿಟ್ಟ ಕ್ಷಣದಿಂದ ಒಬ್ಬರಿಗೂ ಶಾಂತಿಯೆಂಬುದು ಇಲ್ಲವೇ ಇಲ್ಲ."

"ತ್ಚು. ಸ್ವಲ್ಪ ಮೆಲ್ಲಗೆ ಮಾತಾಡು. ಅವಳಿಗೆ ಕೇಳಿಸೀತು."

"ಕೇಳಿಸಿದರೆ ಕೇಳಿಸಿತು. ಕೇಳಲೆಂದೇ ಮಾತಾಡುತ್ತಿದ್ದೇನೆ. ಇವಳು ಬಂದಂದಿನಿಂದ ನನ್ನ ಮಕ್ಕಳು ಬೇನೆ ಬೀಳಹತ್ತಿದ್ದಾರೆ. ಇವಳ ಕಾಲುಗುಣವೆಂಥದೋ! ಅತ್ತೆಯ ಮನೆಯಲ್ಲಿ ಗಂಡನನ್ನು ತಿಂದು ತೇಗಿ ಈಗ ತವರು ಮನೆಯ ಮೇಲೆ ಸೇಡು ತೀರಿಸಿಕೊಳ್ಳಲು ಬಂದಿದ್ದಾಳೆ."

"ಏನೇ, ಹೀಗೆ ಹುಚ್ಚುಚ್ಚು ಮಾತನಾಡಲು ನಿನಗೇನಾಗಿದೆ ಇಂದು?"

"ನನಗೇನೂ ಆಗಿಲ್ಲ. ಆದದ್ದು ನಿಮಗೆಯೇ. ನಾನು ಹೇಳುವ ಸತ್ಯ ನಿಮಗೆ ಕೆಟ್ಟದ್ದಾಗಿ ಕಾಣಿಸತೊಡಗಿದೆ."

ಹೀಗೆ ದೇವಿಕೆಯ ಬಗ್ಗೆ ಇನ್ನೂ ಏನೇನು ಮಾತು ನಡೆದಿದ್ದವೊ ಯಾರು ಬಲ್ಲರು?

ಒಳ್ಳೆಯ ಮನೆತನದ ಒಳ್ಳೆಯ ಹುಡುಗನಿಗೆ ದೇವಿಕೆಯನ್ನು ಕೊಟ್ಟು ವಿವಾಹ ನಿಶ್ಚಯಿಸಿದ ನಂತರ ಸಣ್ಣ ಅಸ್ವಸ್ಥದಲ್ಲಿ ಗಂಗಾಬಾಯಿ ಸತ್ತಿದ್ದಳು. ಆಮೇಲೆ ಹದಿನಾಲ್ಕು ವರ್ಷದ ದೇವಿಕೆ ಶ್ರೀಮಂತವೂ ಸುಸಂಸ್ಕೃತವೂ ಆದ ಶ್ವಶುರ ಗೃಹವನ್ನು ಪ್ರವೇಶಿಸಿದ್ದಳು.

ಒಂದು ದಿನ ಅವಳ ಗಂಡ ರಮಾಕಾಂತ ಹೊರಗಿನಿಂದ ಮನೆಗೆ ಬಂದಾಗ ಅವನ ಮೈಯಲ್ಲಿ ಜ್ವರ ಕುದಿಯುತ್ತಿತ್ತು. ಡಾಕ್ಟರರು, ವೈದ್ಯರು ಬಂದರು. ಉತ್ತಮೋತ್ತಮ ಔಷಧ, ಇಂಜಕ್ಶನ್, ಭಸ್ಮ ಎಲ್ಲವನ್ನು ಕೊಟ್ಟರೂ ಪ್ರಯೋಜನವಾಗಲಿಲ್ಲ. ಹದಿನಾರು ವರ್ಷದ ದೇವಿಕೆಯ ಮೇಲೆ ಆಕಾಶವೇ ಕುಸಿಯಿತು. ಕಲ್ಲಿನ ಮೂರ್ತಿಯಂತೆ ಅಚೇತನಳಾದ ದೇವಿಕೆ ಶೂನ್ಯ ದೃಷ್ಟಿಯಿಂದ ಎಲ್ಲವನ್ನೂ ನೋಡುತ್ತಲಿದ್ದಳು. ಅವಳ ವಿಶ್ವವೇ ಉದ್ಧ್ವಸ್ತವಾಗಿತ್ತು.

ಭಾವ ರಮಾಕಾಂತ ಸತ್ತಬಳಿಕ ಹರಿನಾಥ ತನ್ನ ವಿಧವೆ ತಂಗಿಯನ್ನು ತನ್ನ ಮನೆಗೆ ಕರೆತಂದ. ತಿರುಗಿ ಅವಳನ್ನು ಅತ್ತೆಯ ಮನೆಗೆ ಎಂದೂ ಕಳಿಸುವುದಿಲ್ಲ ಎಂದಾತ ದೃಢ ನಿರ್ಧಾರ ಮಾಡಿದ್ದ. ದೇವಿಕೆಗೆ ಒಂದಿನಿತೂ ತೊಂದರೆಯಾಗಬಾರದು ಎಂದು ತನ್ನ ಹೆಂಡತಿ ಸುಭ

"ನವನೀತ" ದಿಂದ

ದ್ರೆಗೆ ಅರ್ಪಣೆ ಮಾಡಿದ.

ಆದರೆ ದೇವಿಕೆ ತವರ್ಮನೆಗೆ ಬಂದ ಕೆಲ ದಿನಗಳಲ್ಲಿಯೆ ಸುಭದ್ರೆಯ ಮಕ್ಕಳು ಬೇನೆ ಬೀಳತೊಡಗಿದರು. ಇದು ದೇವಿಕೆಯ ಕಾಲ ಗುಣವೆಂದೇ ಅವಳು ತಿಳಿದಳು. ಅವಳ ಹೃದಯ ದಲ್ಲಿ ಅಶುಭದ ಅಂಜಿಕೆ ಹುಟ್ಟಿತು. ತನ್ನ ಸಂಕಟ-ಸಂತಾಪಗಳನ್ನು ಪ್ರಕಟ ಪಡಿಸುವುದ ಕ್ಕಾಗಿ ಅವಳು ದೇವಿಕೆಯ ಎದುರೇ ತನ್ನ ಮಕ್ಕ ಳನ್ನು ಹೊಡೆಯುತ್ತಿದ್ದಳು. ದೇವಿಕೆಗೆ ಇದೆಲ್ಲ ತಿಳಿಯುತ್ತಿರಲಿಲ್ಲವೆಂದಲ್ಲ; ಆದರೆ ಅವಳು ನಿಸ್ಸ-ಹಾಯಳಾಗಿದ್ದಳು.

ಮತ್ತು ಇಂದು ಮುಂಜಾನೆಯ ಜಗಳದಲ್ಲಿ "ಈ ಕರಿ ಮೋರೆಯವಳು ಗಂಡನನ್ನು ನುಂಗಿದ್ದು ಮಾತ್ರವಲ್ಲದೆ ತವರು ಮನೆಯವರನ್ನೂ ತಿನ್ನಲು ಬಂದಿದ್ದಾಳೆ" ಎಂಬ ಮಾತುಗಳನ್ನು ಕೇಳಿದಾಗ ದೇವಿಕೆ ಥರಥರ ಕಂಪಿಸಿದಳು. ಅವಳು ಹಾಸಿ ಗೆಯ ಮೇಲೆ ಬಿದ್ದುಕೊಂಡು ಬಿಕ್ಕಿ ಬಿಕ್ಕಿ ಅಳ ತೊಡಗಿದಳು. ಯಾವಾಗ ಅವಳಿಗೆ ಎಚ್ಚರ ತಪ್ಪಿತೋ ಅವಳಿಗೇ ತಿಳಿಯಲಿಲ್ಲ.

ಕೆಲ ಹೊತ್ತಿನ ಮೇಲೆ ಯಾರೋ ಪ್ರೇಮ ದಿಂದ ತನ್ನ ಹಣೆಯ ಮೇಲೆ ಕೈಯಾಡಿಸುತ್ತಿರು ವುದು ಅವಳಿಗೆ ಭಾಸವಾಯಿತು. ಕಣ್ಣು ತೆರೆದು ನೋಡಿದರೆ ಅವಳ ಪ್ರೀತಿಯ ಅಣ್ಣ ಹರಿನಾಥ. ಆತ ದೇವಿಕೆಯನ್ನು ಸಂತಯಿಸಿ ಅವಳಿಗೆ ದಾಯಿಯ ಶಿಕ್ಷಣ ಕೊಡಿಸಲು ನೆರೆಯೂರಿಗೆ ಕಳಿಸುವ ನಿರ್ಧಾರ ಮಾಡಿದ.

ದಾಯಿಯ ಶಿಕ್ಷಣ ಪಡೆಯುತ್ತಿರುವಾಗ ದೇವಿ ಕೆಗೆ ರೋಗಿ ಸ್ತ್ರೀಯರ ಮತ್ತು ಮಕ್ಕಳ ಸೇವೆ ಯಲ್ಲಿ ಆನಂದವೆನಿಸತೊಡಗಿತು. ಪರೀಕ್ಷೆಯಲ್ಲಿ ಮೇಲ್ತರಗತಿಯಲ್ಲಿ ಪಾಸಾದ ಮೇಲೆ ಸೂಲಗಿತ್ತಿ ಶಿಕ್ಷಣ ಪಡೆಯುವ ಇಚ್ಛೆ ಅವಳಲ್ಲಿ ಮೂಡಿತು. ಅಣ್ಣ ಹೂಂ ಎಂದ.

ಸೂಲಗಿತ್ತಿ ಪರೀಕ್ಷೆಗೆ ಮೂರು ತಿಂಗಳುಗಳಿ ದ್ದಾಗ ಅವಳು ದೊಡ್ಡ ಆಸ್ಪತ್ರೆಗೆ ಪ್ರಾಕ್ಟೀಸ್‌ಗಾಗಿ ಹೋಗಿದ್ದಳು. ಡಾ. ಮಿಸ್ ಹೆಲೆನ್ ಎಂಬ ಆಂಗ್ಲ ಮಹಿಳೆ ಆ ಆಸ್ಪತ್ರೆಯ ಪ್ರಮುಖ ಳಾಗಿದ್ದಳು. ಈ ಆಸ್ಪತ್ರೆಯಲ್ಲಿ ಯುರೋಪಿ-ಯನ್ ಮತ್ತು ಭಾರತೀಯ ಮಹಿಳೆಯರಿಗಾಗಿ ಬೇರೆ ಬೇರೆ ವಾರ್ಡುಗಳಿದ್ದವು. ವರ್ಣಭೇದ ಅಲ್ಲಿ ತಾನೇ ತಾನಾಗಿ ವಿಜೃಂಭಿಸುತ್ತಿತ್ತು.

ಒಮ್ಮೆ ಒಬ್ಬ ಹರಿಜನ ಹೆಂಗಸು ಅಲ್ಲಿ ಹಡೆದ ನಂತರ ಬೇನೆ ಬಿದ್ದಳು. ಪಾಯಖಾನೆಗೆ ಹೋಗುವಷ್ಟು ಶಕ್ತಿ ಕೂಡ ಅವಳಿಗಿರಲಿಲ್ಲ. ಆಗ ಯುರೋಪಿನ್ ವಾರ್ಡಿನಿಂದ ಕಮೋಡ್ ತಂದು ದೇವಿಕೆ ಅವಳ ತೊಂದರೆಯನ್ನು ನಿವಾರಿ ಸಿದಳು. ಈ ಸಂಗತಿ ಡಾ. ಮಿಸ್ ಹೆಲೆನ್‌ಳ ಕಿವಿಗೆ ಬಿದ್ದಾಗ ಅವಳು ಕಿಡಿಕಿಡಿಯಾಗಿ ದೇವಿ ಕೆಯನ್ನು ಕರೆಸಿ, "ಕಮೋಡಿನ ಉಪಯೋಗ ವನ್ನು ಒಬ್ಬ ಕರಿ ಹೆಂಗಸಿಗಾಗಿ ಮಾಡಿದೆಯ-ಲ್ಲವೆ? ಈ ತಪ್ಪಿಗಾಗಿ ಇಂದಿನಿಂದ ನಿನ್ನನ್ನು ಆಸ್ಪತ್ರೆಯಿಂದ ಹೊರಗೆ ಹಾಕಿದ್ದೇನೆ. ಇನ್ನೊಂದು ವರ್ಷದ ವರೆಗೆ ನೀನು ಪರೀಕ್ಷೆಗೆ ಕುಳಿತುಕೊಳ್ಳಲಾರೆ" ಎಂದು ಗರ್ಜಿಸಿದಳು.

ದೇವಿಕೆ ಸಮಾಚಾರವನ್ನು ತನ್ನ ಅಣ್ಣನಿಗೆ ತಿಳಿಸಿದಳು. ತಂಗಿಯ ಸ್ವಾಭಿಮಾನಕ್ಕಾಗಿ ಆತ ಸಂತೋಷಪಟ್ಟುಕೊಂಡ.

ಮರುವರುಷ ದೇವಿಕೆ ಪರೀಕ್ಷೆಯಲ್ಲಿ ಮೇಲ್ತ-ರಗತಿಯಲ್ಲಿ ಪಾಸಾದಳು. ಹರಿನಾಥ ತನ್ನೊರ್ವ ಮಿತ್ರನ ಮನೆಯಲ್ಲಿ ನಾಲ್ಕು ಮಂಚಗಳ ವ್ಯವಸ್ಥೆ ಮಾಡಿ ಚಿಕ್ಕದೊಂದು ಪ್ರಸೂತಿಗೃಹವನ್ನು ತೆರೆದ. ತುಸು ದಿನಗಳಲ್ಲಿಯೆ ದೇವಿಕೆಯ ನಿಃಸ್ವಾರ್ಥ ಸೇವಾವೃತ್ತಿಯ ಕೀರ್ತಿ ನಾಲ್ಕೂ ಕಡೆ ಹಬ್ಬಿತು. ಅವಳ ನಿಷ್ಠೆ ಕಾರ್ಯತತ್ಪರತೆ ಗಳನ್ನು ಕಂಡು ಅತ್ಯಂತ ಪ್ರಭಾವಿತನಾದ ಹರಿ ನಾಥನ ಮಿತ್ರ ಸೂತಿಕಾಗೃಹಕ್ಕಾಗಿ ತನ್ನ ಇಡೀ ಮನೆಯನ್ನೆ ಬಿಟ್ಟುಕೊಟ್ಟು ತಾನು ಬೇರೆ ಮನೆ ಯಲ್ಲಿ ಇರತೊಡಗಿದ. ಅಲ್ಲದೆ ತನ್ನ ಪ್ರಾಪ್ತಿ ಯಲ್ಲಿ ಕೆಲವೊಂದು ಭಾಗವನ್ನು ಪ್ರಸೂತಿಗೃಹ

ಕ್ಕಾಗಿ ಸದಾ ಕೊಡುವುದಾಗಿ ವಚನವಿತ್ತ.

ಕೆಲಸ ಬೆಳೆಯಿತು; ಈ ಚಿಕ್ಕ ಪ್ರಸೂತಿ ಗೃಹ ಇಪ್ಪತ್ತೈದು ಮಂಚಗಳ ದೊಡ್ಡ ಸಂಸ್ಥೆಯಾಯಿತು. ದೇವಿಕೆಯ ಕಾರ್ಯದಿಂದ ಪ್ರಭಾವಿತಳಾದ ಅವಳ ಅತ್ತಿಗೆ ಸುಭದ್ರೆ 'ಕರಿಮೋರೆ ನಾದಿನಿ'ಯ ಕಾರ್ಯಕ್ಕೆ ೨,೦೦೦ ರೂಪಾಯಿಗಳ ದೇಣಿಗೆಯನ್ನಿತ್ತಳು.

ಮೊದಮೊದಲಿಗೆ ಈ ಪ್ರಸೂತಿಗೃಹದಲ್ಲಿ ಆಧುನಿಕ ಸೌಕರ್ಯಗಳಿರಲಿಲ್ಲ. ಮುಂದೆ ನಾಗರಿಕರ ಸಹಕಾರದಿಂದ ನಾಗಪುರ ಸಿವ್ಹಿಲ್ ಲೈನ್ಸ್‌ನಲ್ಲಿ ಆಪರೇಶನ್ ಥಿಯೇಟರ್ ಮತ್ತು ಎಕ್ಸರೇಗಳಿಂದ ಸುಸಜ್ಜಿತವಾದ ದೊಡ್ಡದೊಂದು ಹೆರಿಗೆ ಆಸ್ಪತ್ರೆಯನ್ನು ದೇವಿಕೆ ಪ್ರಾರಂಭಿಸಿದಳು. ಅದನ್ನು ನಡೆಸುವ ಹೊಣೆಯನ್ನು ತಾನೇ ಹೊತ್ತಳು. ಜೊತೆಗೆ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಅಡ್ಡಾಡಿ ಅಲ್ಲಿಯ ಹೆಂಗಳೆಯರಿಗೆ ಉಪಚಾರ ಮಾಡುವುದು ದೇವಿಕೆಯ ವೈಶಿಷ್ಟ್ಯವಾಯಿತು. ಹಳ್ಳಿಯ ಜನಗಳೆಲ್ಲ ಅವಳನ್ನು "ದೇವಿಮಾಯಿ" ಎಂಪು ಸಂಬೋಧಿಸುತ್ತಾರೆ.

ಈ ಆಸ್ಪತ್ರೆಯ ಕೀರ್ತಿ ಡಾ. ಮಿಸ್ ಹೆಲೆನ್‌ಳ ಕಿವಿಗೂ ಬಿದ್ದಿತು. ಈಗವಳು ನಿವೃತ್ತಳಾಗಿದ್ದಳು. ಅವಳು ಒಂದು ದಿನ ತನ್ನೊಬ್ಬ ಸ್ನೇಹಿತರೊಡನೆ ಈ ಆಸ್ಪತ್ರೆ ನೋಡಲು ಬಂದಳು.

ಅವಳು ಪ್ರಸೂತಿಗೃಹದ ಎಲ್ಲ ವಾರ್ಡುಗಳನ್ನು ನೋಡಿದಳು. ಎಲ್ಲವುಗಳಲ್ಲಿಯೂ— ಜನರಲ್ ಇರಲಿ, ಸ್ಪೆಶಲ್ ಇರಲಿ— ಆಧುನಿಕ ಸೌಕರ್ಯಗಳು ಇದ್ದವು. ''ದೇವಿಮಾಯಿ'' ಯನ್ನು ನೋಡಲು ಅವಳು ಆಫೀಸಿಗೆ ಹೋದಳು. ಒಬ್ಬ ರೋಗಿಯನ್ನು ನೋಡಲು ಹೋಗಿದ್ದ "ದೇವಿಮಾಯಿ" ಬಂದೊಡನೆಯೆ ಡಾ. ಮಿಸ್ ಹೆಲೆನ್ನಳಿಗೆ ನಮಸ್ಕಾರ ಮಾಡಿದಳು.

"ನಿಮ್ಮನ್ನು ಎಲ್ಲಿಯೊ ನೋಡಿದಂತಿದೆಯಲ್ಲ" ಡಾ. ಮಿಸ್ ಹೆಲೆನ್ ಹೇಳಿದಳು. ಆ ಮೇಲೆ ಒಂದೆರಡು ನಿಮಿಷ ದಿಟ್ಟಿಸಿ ನೋಡಿ "ಯಾರು, ದೇವಿಕಾ?" ಎಂದಳು.

"ಹೌದು. ನಾನು ದೇವಿಕೆ. ನಿಮ್ಮ ದುರ್ದೈವಿ ಶಿಷ್ಯೆ. ಇವೆಲ್ಲ ನಿಮ್ಮ ಕೃಪೆ ಮತ್ತು ಆಶೀರ್ವಾದದ ಫಲ. ನಿಮ್ಮ ದೇವಿಕೆಗೆ ಇಂದು ಒಂದಿಷ್ಟು ಜನಸೇವೆ ಮಾಡುವ ಸಾಮರ್ಥ್ಯ ಬಂದಿರುವುದು ನಿಮ್ಮ ಆಶೀರ್ವಾದದಿಂದಲೇ."

ಡಾ. ಹೆಲೆನ್ ಮೂಕಳಾದಳು. ಆಮೇಲೆ ಕಂಪಿತ ಸ್ವರದಲ್ಲಿ " ಶಹಬಾಸ್! ನೀನು ನಿಜವಾಗಿಯೂ ಭಾರತ ಮಾತೆಯ ಸುಪುತ್ರಿ. ನೀನು ನನ್ನ ಕಣ್ಣಿಗೆ ಅಂಜನ ಹಾಕಿದಿ. ನೀನು ನನ್ನನ್ನು ಕ್ಷಮಿಸಬೇಕು. ನಿನ್ನಂಥ ಕರ್ತವ್ಯನಿಷ್ಠ, ತೇಜಸ್ವಿ ಶಿಷ್ಯಳ ಮೇಲೆ ನಾನು ಅನ್ಯಾಯವೆಸಗಿದೆನಲ್ಲ ಎಂದು ನನಗೀಗ ತುಂಬ ದುಃಖವಾಗುತ್ತಿದೆ. ಅದಕ್ಕಾಗಿ ನಾನು ಯಾವ ಪ್ರಾಯಶ್ಚಿತ್ತವನ್ನು ಭೋಗಿಸಬೇಕು ಹೇಳು " ಎಂದಳು.

"ಛೆ! ಛೆ! ಎಂಥ ಮಾತಾಡುತ್ತಿರುವಿರಿ? ಅಂದಿನ ಆ ಪ್ರಸಂಗ ಘಟಿಸದಿದ್ದರೆ ನನ್ನ ಅಂತರಂಗದಲ್ಲಿ ಬಡವರ ಸೇವೆ ಮಾಡಬೇಕೆಂಬ ಭಾವನೆ ಹೇಗೆ ಹುಟ್ಟುತ್ತಿತ್ತು?''

ಡಾ. ಹೆಲೆನ್ನಳನ್ನು ಬೀಳ್ಕೊಟ್ಟನಂತರ ದೇವಿಕೆಗೆ ವಿದೇಶೀ ಮಹಿಳೆಯೊಬ್ಬಳ ಹೃದಯ ಪರಿವರ್ತನೆಯಾದದ್ದು ಸಮಾಧಾನವನ್ನಿತ್ತಿತು.

ಮರುದಿನ ಒಬ್ಬ ಆಳು ಒಂದು ದೊಡ್ಡ ಲಕೋಟೆಯನ್ನು ತಂದು ದೇವಿಕೆಯ ಕೈಗಿತ್ತ. ಅದರಲ್ಲಿದ್ದ ಕಾಗದಗಳನ್ನೋದಿದಾಗ ಡಾ. ಹೆಲೆನ್ ತನ್ನ ಸರ್ವ ಸಂಪತ್ತನ್ನೂ ದೇವಿಕೆಯ ಹೆಸರಿಗೆ ಮಾಡಿರುವುದು ತಿಳಿಯಿತು.

ಡಾ. ಹೆಲೆನ್‌ಳಿಗಾದ ನೈಜ ಪಶ್ಚಾತ್ತಾಪ, ಅವಳ ಭಾವನಾಪ್ರಧಾನ ಹೃದಯ ಮತ್ತು ಉಚ್ಚ ವಿಚಾರಗಳನ್ನು ಕಂಡು ದೇವಿಕೆಯ ಕಣ್ಣುಗಳಲ್ಲಿ ಆನಂದಾಶ್ರುಗಳು ಬಂದವು.

ಈ "ದೇವಿಮಾಯಿ'' ಯೆಂದರೆ ಕಮಲಾಬಾಯಿ ಹೊಸಪೇಟ.

*

ಪಾದರಸದಿಂದ ಬಂಗಾರ
ಮಾಡಿವೆನೆಂದು ಸಾರಿದ
ಮಹಾಪುರುಷನ ಅಂತ್ಯ
ಹೀಗಾಯಿತು !

# ಆತ ಚಿನ್ನ ಮಾಡಿದ !

**ಕೆ. ಎಸ್. ರಾವ್**

ಚಿನ್ನ ಒಂದು ಅಮೌಲ್ಯ ವಸ್ತು ಎಂದಾದಂದಿನಿಂದ ಜನ ಅದನ್ನು ಕೃತ್ರಿಮ ರೀತಿಯಿಂದ ತಯಾರಿಸುವ ಪ್ರಯತ್ನಗಳನ್ನು ಮಾಡುತ್ತಲೇ ಬಂದಿದ್ದಾರೆ. ತಾಮ್ರ, ಕಬ್ಬಿಣ ಮೊದಲಾದ ಕೀಳು ಲೋಹಗಳನ್ನು ಬಂಗಾರವಾಗಿ ಪರಿವರ್ತಿಸಿ ಕೊಡುವೆನೆಂದು ಹೇಳಿ ಜನರನ್ನು ಮೋಸಗೊಳಿಸಿ ಹಣ ಎತ್ತಿ ಹಾಕಿದವರ ಎಷ್ಟೋ ಸತ್ಯ ಕಥೆಗಳನ್ನು ಸಾಮಾನ್ಯವಾಗಿ ಎಲ್ಲರೂ ಕೇಳಿರುತ್ತಾರೆ. ಪರುಷಮಣಿಯ ಸ್ಪರ್ಶದಿಂದ ಯಾವ ವಸ್ತುವಾದರೂ ಚಿನ್ನವಾಗುತ್ತದೆಂಬ ದಂತ ಕಥೆಯೂ ಇದೆ. ಚಿನ್ನದ ಹುಚ್ಚು, ಅದನ್ನು ಕೃತ್ರಿಮವಾಗಿ ತಯಾರಿಸುವ ಪ್ರಯತ್ನ ಜಗತ್ತಿನ ಎಲ್ಲ ದೇಶಗಳಲ್ಲಿಯೂ ಇದೆ. ಚಿನ್ನದ ಮೋಹದಿಂದ ಸಾಮಾನ್ಯರು ಮೋಸ ಹೋಗುವುದೇನೂ ಆಶ್ಚರ್ಯವಲ್ಲ. ಆದರೆ ವಿಜ್ಞಾನಿಗಳು ಕೂಡ ಬೆಪ್ಪು ತಕ್ಕಡಿಗಳಾದರೆ ಆಗ ನಿಜವಾಗಿಯೂ ಆಶ್ಚರ್ಯಪಡಬೇಕಾದ್ದೇ. ಹಾಗೆ ಆದ ಸಂದರ್ಭಗಳೂ ಇವೆ.

ಇಂಗ್ಲಂಡಿನ ರಾಯಲ್ ಸೊಸೈಟಿ ಎಂಬ ವಿಜ್ಞಾನ ಸಂಸ್ಥೆ ಜಗತ್ತಿನಲ್ಲಿಯೇ ಪ್ರಸಿದ್ಧವಾದದ್ದು. ಈ ಸಂಸ್ಥೆಯ ಸದಸ್ಯತ್ವ ದೊರಕಿದರೆ ಅದೊಂದು ಮಹಾಭಾಗ್ಯ ಎಂದು ವಿಜ್ಞಾನಿಗಳು ತಿಳಿಯುತ್ತಾರೆ. ಚಿನ್ನ ತಯಾರಿಸುವ ವಿಧಾನವನ್ನು ಕಂಡುಹಿಡಿದೆನೆಂದು ಹೇಳಿ ಈ ಸಂಸ್ಥೆಯನ್ನು ಭ್ರಮೆಗೀಡುಮಾಡಿದ ಮಹಾನುಭಾವನೊಬ್ಬ ಹದಿನೆಂಟನೆಯ ಶತಮಾನದಲ್ಲಿ ಆಗಿ ಹೋದ. ಆದರೆ ಆತನಿಂದ ತನ್ನ ಮೋಸವನ್ನು ದಕ್ಕಿಸಿಕೊಳ್ಳುವುದಾಗಲಿಲ್ಲ. ಪ್ರಸಂಗ ಕುತ್ತಿಗೆಗೆ ಬಂದಾಗ ಆತ ವಿಷ ಕುಡಿದು ಆತ್ಮಹತ್ಯೆ ಮಾಡಿಕೊಂಡ.

೧೭೮೨ ರ ಬೇಸಿಗೆಯಲ್ಲಿ ಒಂದು ಚಿಕ್ಕ ಪುಸ್ತಿಕೆ ಇಂಗ್ಲಂಡಿನಲ್ಲಿ ಪ್ರಕಟವಾಯಿತು. "ಜೇಮ್ಸ್ ಪ್ರ್ಯಾಸ್, ಎಂ. ಡಿ., ಎಫ್. ಆರ್. ಎಸ್., ಇವರ ಗಿಲ್ಡ್‌ಫೋರ್ಡ್‌ನಲ್ಲಿರುವ ಪ್ರಯೋಗಶಾಲೆಯಲ್ಲಿ ೧೭೮೨, ಮೇ ತಿಂಗಳಲ್ಲಿ ಪಾದರಸ, ಬೆಳ್ಳಿ ಮತ್ತು ಬಂಗಾರಗಳ ಮೇಲೆ ನಡೆಸಿದ ಕೆಲವು ಪ್ರಯೋಗಗಳ ವರದಿ" ಎಂದು ಈ ಪುಸ್ತಿಕೆಗೆ ಹೆಸರಿತ್ತು. ಪಾದರಸವನ್ನು ಬೆಳ್ಳಿ ಮತ್ತು ಚಿನ್ನಗಳಾಗಿ ಪರಿವರ್ತಿಸಲಾಯಿತು ಎಂದು ಇದರಲ್ಲಿ ಹೇಳಿದ್ದಿತು. ಕೀಳು ಲೋಹಗಳನ್ನು ಚಿನ್ನವನ್ನಾಗಿ ಮಾಡಬಹುದು ಎಂದು ಹೇಳುತ್ತ ಬಂದಿದ್ದ ರಸತಂತ್ರ (ಲೋಹಗಳನ್ನು ಚಿನ್ನವನ್ನಾಗಿ ಮಾಡುವ ವಿದ್ಯೆ) ಕ್ಕೆ ಇದೊಂದು ಪುಷ್ಟಿಯಾಗಿತ್ತು.

೧೭೫೨ರಲ್ಲಿ ಲಂಡನ್ನಿನಲ್ಲಿ ಹುಟ್ಟಿದ ಪ್ರ್ಯಾಸ್‌ನ ನಿಜ ನಾಮ ಜೇಮ್ಸ್ ಹಿಗಿನ್‌ಬೊಟಮ್ ಎಂದಿತ್ತು. ಅವನು ಆಕ್ಸಫರ್ಡ್ ವಿಶ್ವವಿದ್ಯಾಲಯದ ಮೆಗ್‌ಡೆಲನ್ ಹಾಲಿನಲ್ಲಿ ಶಿಕ್ಷಣಪಡೆದು















ಕಾಮನಬಿಲ್ಲಿನ ನಾಲ್ಕು
ಬಣ್ಣಗಳಲ್ಲಿ ನನ್ನ ಲಕ್ಸ್
-ಹೌದು, ಬಿಳಿಬಣ್ಣದಲ್ಲಿ
ಕೂಡ ಇದೆ'

ಎಂದು ಅನ್ನುತ್ತಾಳೆ
ಎಂ. ಎನ್. ರಾಜಂ

LTS. 82-X29 KN

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

೧೭೭೭ ರಲ್ಲಿ ಎಂ. ಎ. ಪದವಿ ಪಡೆದ. ನಾಲ್ಕು ವರ್ಷಗಳ ನಂತರ ಈತನ ಚಿಕ್ಕಪ್ಪ ಜೇಮ್ಸ್ ಪ್ರ್ಯಾಸನು ಜೇಮ್ಸ್ ಹಿಗಿನ್‌ಬೊಟಮನು ಪ್ರ್ಯಾಸ್ ಎಂಬ ಅಡ್ಡ ಹೆಸರನ್ನು ಧರಿಸಬೇಕೆಂಬ ಕರಾರು ಹಾಕಿ ಅವನಿಗೆ ೧೦,೦೦೦ ಪೌಂಡುಗಳ ಬಂಡವಳವನ್ನೂ ವರ್ಷಕ್ಕೆ ೧೩೦ ಪೌಂಡು ಆದಾಯ ಬರುವ ಆಸ್ತಿಯನ್ನೂ ಕೊಟ್ಟ.

ಜೇಮ್ಸ್ ಹಿಗಿನ್‌ಬೊಟಮ್ ಜೇಮ್ಸ್ ಪ್ರ್ಯಾಸ್‌ನಾದ. ಅದೇ ಕಾಲಕ್ಕೆ ಅಂದರೆ ೧೭೮೧ ರಲ್ಲಿ ರಾಯಲ್ ಸೊಸೈಟಿಯ ಸದಸ್ಯ ಸ್ಥಾನಕ್ಕೆ ಇವನ ಹೆಸರು ಸೂಚಿಸಲ್ಪಟ್ಟಿತು. ಆತ ಅದೇ ವರ್ಷ ಮೇ ೧೦ ರಂದು ಸದಸ್ಯನಾಗಿ ಆರಿಸಲ್ಪಟ್ಟಿದ್ದೇ ಅವನ ಜೀವನದಲ್ಲಿಯ ಪ್ರಥಮ ವಿಶೇಷವೆನ್ನಬಹುದು. ನಿಸರ್ಗತತ್ತ್ವ ( Natural philosophy ) ಮತ್ತು ವಿಶೇಷತಃ ರಸಾಯನ ಶಾಸ್ತ್ರದಲ್ಲಿ ಈತ ಪಾರಂಗತ ಎಂದು ಹೇಳಲಾಯಿತು. ಆದರೆ ಆಶ್ಚರ್ಯವೆಂದರೆ ಪ್ರ್ಯಾಸ್ ಇದುವರೆಗೂ ರಸಾಯನ ಶಾಸ್ತ್ರದ ಬಗ್ಗೆ ಒಂದೇ ಒಂದು ಲೇಖವನ್ನಾದರೂ ಪ್ರಕಟಿಸಿರಲಿಲ್ಲ. ಪಾದರಸವನ್ನು ಬಂಗಾರವನ್ನಾಗಿ ಮಾಡಬಹುದೆಂದು ಆತ ಬರೆದ ಲೇಖಗಳನ್ನು ಬಿಟ್ಟರೆ ಮುಂದೆ ಕೂಡ ಆತ ಎಂದೂ ರಸಾಯನ ಶಾಸ್ತ್ರದ ಮೇಲೆ ಏನನ್ನೂ ಬರೆಯಲಿಲ್ಲ. ಅವನ ಸದಸ್ಯತ್ವವನ್ನು ಅನುಮೋದಿಸಿದ ಹನ್ನೊಂದು ಜನರಲ್ಲಿ ರಾಯಲ್ ಸೊಸೈಟಿಯ ಅಧ್ಯಕ್ಷರ ನಿಕಟ ಸ್ನೇಹಿತ ಡಾನ್ ಸೊಲಾಂಡರ್ ಮತ್ತು ರಿಚಾರ್ಡ್ ಕಿರವಾನ್ ಅವರೂ ಇದ್ದರು. ಡಾನ್ ಸೊಲಾಂಡರನ ಬೆಂಬಲವು ಪ್ರ್ಯಾಸ್‌ನಿಗೆ ಸದಸ್ಯತ್ವ ದೊರಕಿಸಿಕೊಡಲು ತುಂಬ ಸಹಾಯಕವಾಗಿರಬೇಕು. ಕಿರವಾನ್ ಒಬ್ಬ ಪ್ರಸಿದ್ಧ ರಸಾಯನ ಶಾಸ್ತ್ರಜ್ಞನೂ ಖನಿಜ ಶಾಸ್ತ್ರಿಯೂ ಆಗಿದ್ದ.

ಚಿಕ್ಕಪ್ಪನಿಂದ ದೊರೆತ ಬಂಡವಳದಿಂದ ಗಿಲ್‌ಫೋರ್ಡಿನ ಬಳಿ ಸ್ಟೋಕ್ ಎಂಬಲ್ಲಿ ಆಸ್ತಿಯನ್ನು ಕೊಂಡು ಅಲ್ಲಿ ಪ್ರ್ಯಾಸ್ ಒಂದು ಸುಸಜ್ಜಿತ ಪ್ರಯೋಗ ಶಾಲೆಯನ್ನು ಕಟ್ಟಿಕೊಂಡು ಪ್ರಯೋಗಗಳಿಗಾರಂಭಿಸಿದ.

೧೭೮೨ ರಲ್ಲಿ ಆತ ಪಾದರಸವನ್ನು ಚಿನ್ನ ಮತ್ತು ಬೆಳ್ಳಿಯನ್ನಾಗಿ ಮಾರ್ಪಡಿಸಬಲ್ಲ ಎರಡು ಬಗೆಯ ಪುಡಿಗಳನ್ನು ತಾನು ಕಂಡು ಹಿಡಿದೆ ಎಂದು ಹೇಳಿದ. ಒಂದು ಬಿಳಿಯ ಪುಡಿ ಅವರ ತೂಕದ ಐವತ್ತು ಪಟ್ಟು ತೂಕದ ಪಾದರಸವನ್ನು ಬೆಳ್ಳಿಯನ್ನಾಗಿಯೂ ಇನ್ನೊಂದು ಕೆಂಪು ಪುಡಿ ತನ್ನ ತೂಕದ ಅರವತ್ತು ಪಟ್ಟು ತೂಕದ ಪಾದ-ರಸವನ್ನು ಚಿನ್ನವನ್ನಾಗಿಯೂ ಮಾಡುವುದೆಂದು ಆತ ಪ್ರಕಟಿಸಿದನಾದರೂ ಈ ಪುಡಿಗಳನ್ನು ತಯಾರಿಸುವ ಬಗ್ಗೆ ಯಾವ ವಿವರವನ್ನೂ ಕೊಡಲಿಲ್ಲ. ಅವುಗಳನ್ನು ತಯಾರಿಸುವ ವಿಧಾನ ಬಲು ಕಷ್ಟದ್ದು ಮತ್ತು ಅನಾರೋಗ್ಯಕರವಾದದ್ದು ಎಂದಿಷ್ಟೇ ಆತ ಹೇಳಿದ. ಪಾದರಸಕ್ಕೆ ಈ ಕೆಂಪು ಅಥವಾ ಬಿಳಿ ಪುಡಿಯನ್ನು ಲೋಹವನ್ನು ಸುಲಭದಲ್ಲಿ ಕರಗುವಂತೆ ಮಾಡುವ ದ್ರವದೊಂ-ದಿಗೆ ಬೆರೆಸಿ ಒಂದು ಕುಲುಮೆಯಲ್ಲಿ ಕುದಿಸಿ ಆರಿಸಿದ ನಂತರ ಪಾದರಸದಷ್ಟೇ ತೂಕದ ಚಿನ್ನ ಅಥವಾ ಬೆಳ್ಳಿ ತಯಾರಾಗುವುದು ಎಂದು ಪ್ರ್ಯಾಸನ ಹೇಳಿಕೆಯಿತ್ತು. ಈತ ತಾನು ಸಾಯುವುದರೊಳಗೆ ತಾನು ತಯಾರಿಸಿದ ಪುಡಿಯನ್ನೆಲ್ಲ ಉಪಯೋಗಿಸಿಬಿಟ್ಟಿದ್ದರಿಂದ ಅವು ಏತರಿಂದ ಮಾಡಲ್ಪಟ್ಟಿದ್ದವು ಎಂದು ಕೊನೆಗೂ ಯಾರಿಗೂ ತಿಳಿಯಲೇ ಇಲ್ಲ.

ಪ್ರ್ಯಾಸ್ ಮೊದಲು ಈ ಪ್ರಯೋಗಗಳನ್ನು ತನ್ನ ನೆರೆಯವರ ಎದುರಿನಲ್ಲಿ ತನ್ನ ಪ್ರಯೋಗ ಶಾಲೆಯಲ್ಲಿ ಮಾಡಿ ತೋರಿಸಿದ. ಮುಂದೆ ಈ ಸುದ್ದಿ ಹಬ್ಬಿದಂತೆ ಹೊರಗಿನವರೂ ನೋಡಲು ಬಂದರು. ೧೭೮೨ರ ಮೇ ೬ ರಿಂದ ೨೫ರೊಳಗೆ ಪ್ರ್ಯಾಸ್ ಏಳು ಸಲ ತನ್ನ ಪ್ರಯೋಗಗಳನ್ನು ಪ್ರದರ್ಶಿಸಿದ. ಸುಮಾರು ೨೦ ಜನ ಅವನ್ನು ಈಕ್ಷಿಸಿದರು. ಲಾರ್ಡ್ ಪಾಮರ್‌ಸ್ಟನ್ (ಮುಂದೆ

ಪ್ರಧಾನ ಮಂತ್ರಿಯಾಗಲಿದ್ದವನ ತಂದೆ) ಮತ್ತು ರಾಯಲ್ ಸೊಸೈಟಿಯ ಇಬ್ಬರು ಫೆಲೊ'ಗಳಂಥ ಪ್ರಮುಖರು ಈ ಪ್ರಯೋಗಗಳನ್ನು ಕಂಡರಾದರೂ ಒಂದು ಪ್ರಯೋಗದ ಕಾಲಕ್ಕೂ ಒಬ್ಬನೇ ಒಬ್ಬ ರಸಾಯನಶಾಸ್ತ್ರಿ ಅಲ್ಲಿ ಇರಲಿಲ್ಲ.

ಮುಂದೆ ಕೆಲವೇ ವಾರಗಳಲ್ಲಿ ಅವನು ಪ್ರಕಟಿಸಿದ ಪುಸ್ತಕದ ಕಾರಣದಿಂದಲೇ ಎನ್ನಬೇಕು ಪ್ರ್ಯಾಸನ ಕೀರ್ತಿ ಬಹುದೂರ ಹಬ್ಬಿತು. ಆಕ್ಸ್‌ಫರ್ಡಿನಲ್ಲಿ ಈ ಪುಸ್ತಕ ಪ್ರಕಟವಾಯಿತು. ಇದಕ್ಕೂ ಮುಂಚೆಯೆ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ಪ್ರ್ಯಾಸನಿಗೆ ಎಂ. ಡಿ. ಪದವಿಯನ್ನು ಕೊಟ್ಟು ಗೌರವಿಸಿತ್ತು. ಪ್ರಸಿದ್ಧ ವಿಶ್ವವಿದ್ಯಾಲಯವೊಂದು ಯಾವ ಪರಿಶೀಲನೆಯನ್ನೂ ನಡೆಸದೆ ದಯಪಾಲಿಸಿದ ಈ ಪದವಿ ಕೂಡ ಅವನಿಗೆ ರಸಾಯನ ಶಾಸ್ತ್ರಕ್ಕೆ ಸಂಬಂಧಪಟ್ಟೇ ಕೊಡಲ್ಪಟ್ಟಿದ್ದು ಅವನ ಜೀವನದ ಎರಡನೇ ಅದ್ಭುತವಾಗಿತ್ತು.

ಆದರೆ ಈ ಪುಸ್ತಕದ ಬಗ್ಗೆ ವಿಜ್ಞಾನಿಗಳಿಂದ ಟೀಕೆಗಳು ಬರತೊಡಗಿದವು. ರಾಯಲ್ ಸೊಸೈಟಿಯ ಪ್ರಮುಖ ಸದಸ್ಯನೊಬ್ಬನು ಹೀಗೆ ಸುಳ್ಳು ಪ್ರತಿಪಾದನೆಗಳನ್ನು ಮಾಡುತ್ತಿರುವುದರಿಂದ ಸಂಸ್ಥೆಯ ಹೆಸರು ಕೆಡುತ್ತಿದೆಯೆಂದು ಕೂಗೆದ್ದಿತು. ನಿರ್ವಾಹವಿಲ್ಲದೆ ಸೊಸೈಟಿಯ ಅಧ್ಯಕ್ಷರಾದ ಬ್ಯಾಂಕ್ಸರು ಸಂದೇಶವಾಹಕರ ಮೂಲಕ ಪ್ರ್ಯಾಸನಿಗೆ ಹೇಳಿ ಕಳಿಸಿ ಸೊಸೈಟಿಯ ಸಮಿತಿಯೆದುರು ಪಾದರಸವನ್ನು ಚಿನ್ನ-ಬೆಳ್ಳಿಯಾಗಿ ಮಾಡುವ ಪ್ರಯೋಗವನ್ನು ಮಾಡಿ ತೋರಿಸಬೇಕೆಂದು ಸೂಚಿಸಿದರು. ಸೊಸೈಟಿಗೆ ಉತ್ತರವಾಗಿ ಪ್ರ್ಯಾಸ್ ತಾನು ಯೋಗ್ಯರ ಎದುರಿನಲ್ಲಿ, ಆಗಲೆ ಪ್ರದರ್ಶನ ಮಾಡಿರುವುದಾಗಿಯೂ ಪುನಃ ಅಂಥ ಪ್ರದರ್ಶನಗಳಿಂದ ಪ್ರಯೋಜನವಿಲ್ಲೆಂದೂ ೪ ಪೌಂಡು ಬೆಲೆಯ ಚಿನ್ನತಯಾರಿಸಲು ೭ ಪೌಂಡು ವೆಚ್ಚ ಬರುವುದರಿಂದ ಈ ಶೋಧವಾಗಿಯೂ ಆಗದಂತೆಯೆ ಎಂದೂ ಬರೆದ.

ಸೊಸೈಟಿಗೆ ಪೇಚಿಗಿಟ್ಟುಕೊಂಡಿತು. ಪ್ರ್ಯಾಸ್ ಈಗ ತನ್ನ ಪುಸ್ತಕದಿಂದ ಬಹಳ ಜನಪ್ರಿಯನಾಗಿಬಿಟ್ಟಿದ್ದರಿಂದ ಅವನನ್ನು ಏಕಾಏಕಿ ಸಂಸ್ಥೆಯಿಂದ ಹೊರಗೆ ಹಾಕಲು ಅದಕ್ಕೆ ಧೈರ್ಯಬರಲಿಲ್ಲ. ಆದರೆ ಸುಮ್ಮನೆ ಬಿಡಲೂ ಬರುತ್ತಿರಲಿಲ್ಲ.

ಕೊನೆಗೂ ಪ್ರಯೋಗ ಮಾಡಿಯೆ ತೋರಿಸಬೇಕೆಂದು ಒತ್ತಾಯ ಬಂತು. ಆರು ತಿಂಗಳವರೆಗೆ ಪ್ರ್ಯಾಸ್ ಕಣ್ಮರೆಯಾಗಿ ಬಿಟ್ಟ. ಆತ ಆಗ ಜರ್ಮನಿಗೆ ಹೋಗಿದ್ದ. ಅಲ್ಲಿ ಕೂಡ ಅವನ ಪುಸ್ತಕ ಕುತೂಹಲವನ್ನು ಕೆರಳಿಸಿತ್ತು. ೧೭೮೩ರ ಅಗಸ್ಟ್ ತಿಂಗಳಲ್ಲಿ ಆತ ತಿರುಗಿ ಗಿಲ್ಡ್‌ಫೋರ್ಡಿಗೆ ಬಂದ. ರಾಯಲ್ ಸೊಸೈಟಿಯ ಮೂವರು ಅವನ ಪ್ರಯೋಗಗಳನ್ನು ನೋಡಲು ಬಂದರು.

ಪ್ರಯೋಗ ಶಾಲೆಯಲ್ಲಿ ಅವರನ್ನು ಕೂಡ್ರಿಸಿ ಪ್ರ್ಯಾಸ್ ತನ್ನ ಸಿದ್ಧತೆಗಳಿಗೆ ತೊಡಗಿದ. ನಡುವೆ ಯಾಕೋ ಒಮ್ಮೆ ಒಳಗೆ ಹೋಗಿಬಂದ. ತಿರುಗಿ ಬಂದಾಗ ಅವನು ಅಸ್ವಸ್ಥನಾದಂತೆ ತೋರಿತು. ಕೆಲ ನಿಮಿಷಗಳಲ್ಲಿ ಪ್ರ್ಯಾಸ್ ನೆಲಕ್ಕೆ ಕುಸಿದು ಬಿದ್ದ. ಏನನ್ನೂ ಮಾಡುವ ಮೊದಲೇ ಆತನ ಪ್ರಾಣ ಹೋಗಿತ್ತು. ಅವನು ವಿಷ ಕುಡಿದಿದ್ದ.

*

---

ಒಬ್ಬ ವಕೀಲರು ಯಾವಾಗಲೂ ತಮ್ಮ ಡಾಕ್ಟರ ಮಿತ್ರರೊಬ್ಬರೊಡನೆ ವಾದದಲ್ಲಿ ಸೋಲುತ್ತಿದ್ದರು. ಒಂದು ದಿನ ಆ ವಕೀಲರು ಕೊನೆಯ ಅಸ್ತ್ರವೆಂದು "ನನಗೊಬ್ಬ ಮೂರ್ಖ ಮಗನಿರುತ್ತಿದ್ದರೆ ಅವನಿಗೆ ಡಾಕ್ಟರನಾಗು ಎನ್ನುತ್ತಿದ್ದೆ" ಎಂದು ಹೇಳಿದರು.

ಆಗ ಆ ಡಾಕ್ಟರ್ ಮಿತ್ರರು ಶಾಂತವಾಗಿ "ಆದರೆ ಈ ಕುರಿತು ನಿಮ್ಮ ತಂದೆಯವರ ಅಭಿಪ್ರಾಯ ಮಾತ್ರ ಖಂಡಿತವಾಗಿಯೂ ಇದಕ್ಕೆ ವಿರುದ್ಧವಾಗಿತ್ತು" ಎಂದು ನುಡಿದು ಮುಗುಳ್ನಕ್ಕರು. [ಇಂಗ್ಲಿಷಿನಿಂದ ಸಂಗ್ರಹಿತ] -ರ.ಬ.ದೇಲಂಪಾಡಿ

ಅದಕ್ಕೆ

ಇರುವೆಗಳೆಂದರೆ

ಪ್ರಾಣ




# ಚಿಪ್ಪಿನ ಹಂದಿಯ ವಿಚಿತ್ರ ಜೀವನ

ಗುಮ್ಮಳ್ಳರಾಜು ರಾಜಾರಾಮ ರಾವು ಅವರ
ತೆಲುಗು ಲೇಖದ ರೂಪಾಂತರ

ಜನರ ಅಂಧ ವಿಶ್ವಾಸದ ಮೂಲಕ ಒಂದು ಅಪರೂಪದ ಪ್ರಾಣಿಯ ಅಸ್ತಿತ್ವವೇ ಈ ಜಗತ್ತಿನಲ್ಲಿ ಇಲ್ಲದಂತಾಗುವ ಸಂಭವವಿದೆ. "ಪಿಪೀಲಿಕಾ ಭಕ್ಷಿ" ಎಂಬ ಹೆಸರನ್ನು ಪಡೆದಿರುವ ಚಿಪ್ಪಿನ ಹಂದಿಯೇ ಈ ಪ್ರಾಣಿ. ಈ ಪ್ರಾಣಿಯನ್ನು ದನದ ಕೊಟ್ಟಿಗೆಯಲ್ಲಿ ಜೀವಂತ ಸುಟ್ಟರೆ ದನ ಕರುಗಳು ಕ್ಷೇಮವಾಗಿರುವವು, ಹೆಚ್ಚಿನ ಹಾಲು ಕೊಡುವವು ಎಂದು ಕೆಲವರು ತಿಳಿಯುತ್ತಿದ್ದರೆ ಗುಡ್ಡಗಾಡು ಜನರ ಕೆಲ ಪಂಗಡದವರು ಇದರ ಚಿಪ್ಪುಗಳನ್ನು ತಾಯಿತದಂತೆ ಕಟ್ಟಿಕೊಂಡರೆ ಪಿಶಾಚಿ ಬಾಧೆಯಾಗುವುದಿಲ್ಲ ಎಂದು ತಿಳಿಯುತ್ತಾರೆ. ಕೇವಲ ಇರುವೆಗಳೇ ಮುಖ್ಯ ಆಹಾರವಾಗಿರುವ ಈ ಸಾಧು ಪ್ರಾಣಿಯನ್ನು ಹಲವರು ಕಲ್ಪನೆಯಿಲ್ಲದೆ ದುಷ್ಟ ಜಂತುವೆಂದು ಬಗೆದು ಕಂಡಲ್ಲಿ ಕೊಂದು ಹಾಕಿದರೆ ಮತ್ತೆ ಕೆಲವರು ಅದರ ಮಾಂಸಕ್ಕೆ ಸಂಜೀವನ ಶಕ್ತಿಯಿದೆಯೆಂಬ ಭ್ರಮೆಯಿಂದ ಕೊಲ್ಲುತ್ತಾರೆ. ಚಿಪ್ಪಿನ ಹಂದಿಯ ಮಾಂಸ ಜೀವಾಮೃತವೆಂದೂ ಕಾಮೋತ್ತೇಜಕವೆಂದೂ ಬುರುಡೆ ಹಾರಿಸಿ ಅದನ್ನು ಅಜ್ಞರಿಗೆ ಮಾರಿ ವಿಪರೀತ ಲಾಭ ಮಾಡಿಕೊಳ್ಳುವವರಿದ್ದಾರೆ. ಚಿಪ್ಪಿನ ಹಂದಿಯ ಜಾತಿ ಏಕಪತ್ನಿ ವ್ರತಾಚಾರದ್ದು. ಇದು ಮರಿ ಹಾಕುವುದೂ ವಿರಳವಾದದ್ದರಿಂದ ಮೇಲೆ ಹೇಳಿದ ಕಾರಣಗಳಿಂದಾಗಿ ಈ ಪ್ರಾಣಿ ನಿರ್ವಂಶವಾಗುವಂಥ ಸನ್ನಿವೇಶವಿದೆ.

ಚಿಪ್ಪಿನ ಹಂದಿ ಸಸ್ತನಿ ಪ್ರಾಣಿ. ಪಶ್ಚಿಮಾರ್ಧ ಗೋಲದಲ್ಲಿ ಕಂಡುಬರುವ ಆ್ಯಂಟ್ ಬೇರ್, ಆ್ಯಂಟ್ ಈಟರ್, ಆರ್ಮಡಿಲ್ಲೊ, ಮತ್ತು

ಸ್ಲಾತ್, ಇಥೋಪಿಯದ ಆಡ್‌ವಾರ್ಕ್ ಅಥವಾ ಗುಳಿಹಂದಿಗಳಿಗೂ ಚಿಪ್ಪಿನ ಹಂದಿಗಳಿಗೂ ದೂರದ ಸಂಬಂಧವಿದೆ. ಈ ಎಲ್ಲ ಪ್ರಾಣಿಗಳೂ ಇರುವೆ, ಗೆದ್ದಲು ಮುಂತಾದವುಗಳನ್ನು ತಿಂದು ಬದುಕುವವುಗಳು.

ಚಿಪ್ಪಿನ ಹಂದಿಗಳಲ್ಲಿ ಎಂಟು ಬಗೆಯಿದ್ದು ನಾಲ್ಕು ವಿಧದವುಗಳನ್ನು ಆಫ್ರಿಕೆಯಲ್ಲಿ ವಿಶೇಷತಃ ಇಥೋಪಿಯದಲ್ಲಿ ಕಾಣಬಹುದು. ಏಶಿಯದಲ್ಲಿ ಕಾಣಸಿಗುವ ನಾಲ್ಕು ಬಗೆಗಳಲ್ಲಿ ಚೀನದ ಮ್ಯಾನಿಸ್ ಪೆಂಟಾಡಾಕ್ಟಿಲ್, ಆಗ್ನೇಯ ಏಶಿಯದ ಮ್ಯಾನಿಸ್ ಕ್ರಾಸಿಕಾಡ್ಯಾಟಾ ಎಂಬವು ಮುಖ್ಯವಾದವು. ಇದರಲ್ಲಿ ನೇಪಾಳ, ಟಿಬೆಟ್ ಮತ್ತು ಆಸಾಂಗಳಲ್ಲಿ ಇರುವ ಮೊದಲನೆಯ ಜಾತಿಯದಕ್ಕೆ ಬೆಟ್ಟದ ಚಿಪ್ಪಿನ ಹಂದಿ ಎನ್ನುತ್ತಾರೆ. ಎರಡನೆಯದು ಭಾರತದ ಎಲ್ಲ ಮೈದಾನ ಪ್ರದೇಶಗಳಲ್ಲಿ ಇದೆ.

ರೂಪದಲ್ಲಿ ತುಸು ಮಟ್ಟಿಗೆ ಉಡವನ್ನು ಹೋಲುವ ಈ ಪ್ರಾಣಿಯ ಅಳತೆ ಅದರ ಜಾತಿಗೆ ತಕ್ಕಂತೆ ಭಿನ್ನ ಭಿನ್ನವಾಗಿರುತ್ತದೆ. ಕೆಲವದರ ಶರೀರಕ್ಕಿಂತ ಬಾಲ ಚಿಕ್ಕದಾಗಿದ್ದರೆ ಕೆಲವದರ ಬಾಲ ಶರೀರಕ್ಕಿಂತ ಇಮ್ಮಡಿ ಉದ್ದವಿರುತ್ತದೆ. ಬಾಲವನ್ನು ಬಿಟ್ಟು ಇದು ಒಂದರಿಂದ ನಾಲ್ಕು ಅಡಿಗಳಷ್ಟು ಉದ್ದವಾಗಿರುವುದು. ಎತ್ತರ ಹತ್ತರಿಂದ ಹದಿನೈದು ಅಂಗುಲಗಳಷ್ಟಿರುತ್ತದೆ.

ಇದು ಸಂಘಜೀವಿಯಲ್ಲ. ಒಂಟಿಯಾಗಿರುವುದೇ ಸಾಮಾನ್ಯ. ಕೆಲವು ಸಲ ಎರಡು ಮೂರು ಸೇರಿಕೊಂಡು ಒಂದೊಂದು ಸಂಸಾರವಾಗಿ ಪ್ರತ್ಯೇಕ ಪ್ರತ್ಯೇಕವಾಗಿರುತ್ತವೆ. ಇದು ನೆಲದ ಮೇಲೆಯೇ ವಾಸಿಸುವ ಪ್ರಾಣಿಯಾದರೂ ಆಫ್ರಿಕೆಯಲ್ಲಿರುವ ಚಿಪ್ಪಿನ ಹಂದಿಗಳು ವೃಕ್ಷವಾಸಿಗಳಾಗಿರುವಂತೆ ಕಾಣಿಸುತ್ತದೆ. ಒಂದು ಜಾತಿಯಂತೂ ಮರದಿಂದ ಇಳಿಯುವುದಿಲ್ಲವೆಂದೇ ಹೇಳಬಹುದು. ಏಶಿಯಾದವು ಮಾತ್ರ ಆಹಾರಕ್ಕಾಗಿಯಷ್ಟೇ ಗಿಡಗಳನ್ನೇರುತ್ತವೆ. ಇವುಗಳ ಬಾಲ ಗಿಡವನ್ನು ಅಪ್ಪಿ ಹಿಡಿದು ಮೇಲೇರಲು ಅನುಕೂಲವಾಗಿದೆ.

ಚಿಪ್ಪಿನ ಹಂದಿ ಭೂಮಿಯನ್ನು ಕೊರೆದು ಒಳಗಡೆ ನಾಲ್ಕೈದು ಅಡಿ ಅಡ್ಡಗಲದ ಬಿಲವನ್ನು ತೋಡಿಕೊಂಡು ಅದರಲ್ಲಿ ವಾಸಿಸುತ್ತದೆ. ತನ್ನ ತೂಕದ ಮೂರು ಪಟ್ಟು ತೂಕದ ಕಲ್ಲನ್ನು ಕೂಡ ನಿರಾಯಾಸವಾಗಿ ದೂರ ತಳ್ಳುವ ಶಕ್ತಿ ಈ ಪ್ರಾಣಿಗಿದೆ. ಬಿಲದ ಒಳಗೂ ಹೊರಗೂ ಅನೇಕ ದಾರಿಗಳಿರುತ್ತವೆ. ಒಂದೊಂದು ಕಳ್ಳ ಮಾರ್ಗವು ಯಾವುದಾದರ ಮರೆಯಲ್ಲಿ ಬೆಳೆದ ಹೊದರನ್ನೊ ಬಂಡೆಗಲ್ಲಿನ ಗುಂಪುನ್ನೊ ಸೇರುತ್ತದೆ. ಬಿಲವನ್ನು ತೋಡುವಾಗ ಬಂದ ಕಲ್ಲು ಮಣ್ಣನ್ನು ಇದು ದೂರ ಒಯ್ದು ಹಾಕುವುದರಿಂದ ಇದರ ಬಿಲವನ್ನು ಹುಡುಕುವುದು ಕಷ್ಟಸಾಧ್ಯ. ಅಕಸ್ಮಾತ್ತೇನಾದರೂ ಶತ್ರು ಬಿಲವನ್ನು ಪ್ರವೇಶಿಸಿದರೆ ಚಿಪ್ಪಿನ ಹಂದಿ ತನ್ನ ಸುರಂಗ ಮಾರ್ಗಗಳಲ್ಲಿ ಒಂದರಿಂದ ಪಾರಾಗಿ ಹೋಗಿಬಿಡುತ್ತದೆ. ಹಗಲೆಲ್ಲ ನಿದ್ದೆ ಮಾಡಿ ರಾತ್ರಿ ಇದು ಹೊರಬೀಳುವುದು.

ಇದರ ಮೈಮೇಲೆ ಈಚಲಗಿಡದ ಮೇಲಿನ ಹೊಡಕೆಗಳಂತೆ ಕಾಣಿಸುವ ಒಂದು ರಕ್ಷಾ ಕವಚವಿರುತ್ತದೆ. ಗುಂಡಿನೇಟು ಕೂಡ ನಾಟದಷ್ಟು ಬಿರುಸಾಗಿರುತ್ತದೆ ಈ ಕವಚ. ಆಫ್ರಿಕೆಯಲ್ಲಿಯ ಎರಡು ಬಗೆಯ ಚಿಪ್ಪಿನ ಹಂದಿಗಳನ್ನು ಬಿಟ್ಟರೆ ಉಳಿದೆಲ್ಲ ಜಾತಿಯವಕ್ಕೆ ತಲೆ ಶರೀರಗಳ ಮೇಲ್ಭಾಗ, ಎರಡೂ ಪಕ್ಕಗಳು, ಇಡೀ ಬಾಲ ಇವಿಷ್ಟಕ್ಕೂ ಕವಚವಿರುವುದು. (ಅಪವಾದವಾದ ಆ ಎರಡು ಜಾತಿಯವಕ್ಕೆ ಬಾಲದ ತುದಿಯ ಭಾಗಕ್ಕೆ ಮಾತ್ರ ಕವಚವಿರುವುದಿಲ್ಲ.) ಶರೀರದ ಕೆಳಭಾಗ, ಕೈಕಾಲಿನ ಒಳಭಾಗಗಳಿಗೆ ಕವಚದ ರಕ್ಷಣೆಯಿರುವುದಿಲ್ಲ. ಆ ಭಾಗದಲ್ಲಿ ವಿರಳವಾಗಿ ಬೆಳೆದ ಕೂದಲುಗಳಿರುತ್ತವೆ. ಮಂಕಾದ ಕಂದು ಮಿಶ್ರಿತ ಬೂದು ಬಣ್ಣದ ರಕ್ಷಾ ಕವಚದ ಚಿಪ್ಪುಗಳು ನಿಜವಾಗಿ ನೋಡಿ

ದರೆ ಕೂದಲುಗಳೇ! ಮನೆಯ ಮಾಡಿನ ಮೇಲಿನ ಹಂಚುಗಳ ಹೊದಿಕೆಯಂತೆ ಈ ಹೊದಿಕೆಗಳು ಒಂದರ ಮೇಲೊಂದು ಜೋಡಿಸಿದಂತಿರುತ್ತವೆ. ತುದಿ ಮುರಿದ ಎಲೆಗಳಂತೆ ಕಾಣುವ ಚಿಪ್ಪುಗಳು ಬಹು ಹರಿತವಾಗಿಯೂ ಇರುತ್ತವೆ. ಅಸಂಖ್ಯಾತವಾದ ಕೂದಲುಗಳು ಒತ್ತಾಗಿಬೆಳೆದು ಬೆಸೆದು ಹೋಗಿ ಸಿದ್ಧವಾದವು ಈ ಚಿಪ್ಪುಗಳು.

ಚಿಪ್ಪಿನ ಹಂದಿಯ ಕಾಲು ಗಿಡ್ಡ. ಆದರೆ ಅದಕ್ಕಿರುವ ಕಸುವು ಜಾಸ್ತಿ. ಪ್ರತಿಯೊಂದು ಪಾದಕ್ಕೂ ಐದು ಬೆರಳುಗಳಿರುತ್ತವೆ. ಹಿಂಗಾಲುಗಳು ಸಾಮಾನ್ಯವಾಗಿದ್ದು ಮುಂಗಾಲುಗಳಲ್ಲಿಯೆ ವೈಶಿಷ್ಟ್ಯವಿರುತ್ತದೆ. ಈ ಡೊಂಕು ಕಾಲುಗಳ ಹೆಜ್ಜೆಗಳಲ್ಲಿ ನಾಲ್ಕು ಮತ್ತು ಐದನೆ ಬೊಟ್ಟುಗಳು ಉಳಿದವುಗಳಿಂದ ತೀರ ದೊಡ್ಡವಾಗಿರುತ್ತವೆ. ಎಲ್ಲ ಬೆರಳುಗಳಿಗಿರುವ ಉಗುರುಗಳೂ ಉದ್ದವಾಗಿ ಕೊಂಡಿಯಂತಿರುತ್ತವೆ. ಈ ಎರಡು ದೊಡ್ಡ ಬೆರಳುಗಳ ಉಗುರುಗಳು ಇನ್ನೂ ಭಯಂಕರವಾಗಿದ್ದು ಅವು ಎರಡೆರಡು ಇಂಚು ಉದ್ದವಾಗಿರುತ್ತವೆ.ಬಿಲ ತೋಡುವಾಗ, ಮರ ಹುತ್ತವಾಗ ಈ ಉಗುರುಗಳು ತುಂಬ ಪ್ರಯೋಜನಕ್ಕೆ ಬರುತ್ತವೆ. ಸಿಮೆಂಟಿನಷ್ಟು ಗಟ್ಟಿಯಾದ ವಸ್ತುವನ್ನು ಕೂಡ ಈ ಉಗುರುಗಳು ಅನಾಯಾಸದಿಂದ ಬಗಿದುಹಾಕುವವು.

ಚಿಪ್ಪಿನ ಹಂದಿ ವಿಚಿತ್ರ ಬಗೆಯಲ್ಲಿ ನಡೆಯುತ್ತದೆ. ಬಾಲವನ್ನು ಮೇಲೆತ್ತಿ ಹಿಡಿದು ಬೆನ್ನು ಬಗ್ಗಿಸಿ ಹಿಂದಿನ ಕಾಲುಗಳನ್ನಷ್ಟೇ ನೆಲದ ಮೇಲೂರಿ ಇಡೀ ದೇಹದ ಭಾರವನ್ನು ಆ ಎರಡು ಅತಿರೇಕದ ಮುಂಗಾಲು ಬೆರಳುಗಳ ಮೇಲೆ ಹಾಕಿಕೊಂಡು ಆ ಮುಂಗಾಲುಗಳ ಸಹಾಯದಿಂದ ನಡೆಯುವುದರಿಂದ ಇದರ ನಡಿಗೆ ಬಲು ನಿಧಾನ. ನಡನಡುವೆ ಕಂಗಾರುವಿನಂತೆ ಹಿಂಗಾಲು ಮತ್ತು ಬಾಲದ ತುದಿಯ ಮೇಲೆ ನಿಂತು ಸುತ್ತಮುತ್ತ ನೋಡಿ ಮತ್ತೆ ಪ್ರಯಾಣ ಮುಂದರಿಸುತ್ತದೆ.

ಇದಕ್ಕೆ ಚೂಪಾದ ಸಣ್ಣ ಮೂತಿಯಿದೆ. ಮೂತಿಯ ತುದಿಯಲ್ಲಿರುವ ಮೂಗಿನ ಎರಡು ಹೊಳ್ಳೆಗಳಿಂದ ಇದು ವಾಸನೆಯನ್ನು ಚೆನ್ನಾಗಿ ಹಿಡಿಯುವುದಾದರೂ ಇದು ವಸ್ತುಗಳನ್ನು ಚೆನ್ನಾಗಿ ಕಾಣಲಾರದು, ಶಬ್ದಗಳನ್ನು ಕೇಳಲಾರದು. ಚಿಕ್ಕವಾಗಿರುವ ಕಣ್ಣುಗಳ ಶಕ್ತಿ ತೀರ ಕಡಿಮೆ. ಏಶಿಯದ ಚಿಪ್ಪಿನ ಹಂದಿಗಳಿಗೆ ಕಣ್ಣಿಗೆ ಕಾಣುವ ಚಿಕ್ಕ ಚಿಕ್ಕ ಕಿವಿಗಳಿದ್ದರೂ ಆಫ್ರಿಕೆಯದಕ್ಕೆ ಕಿವಿ ಇಲ್ಲವೇ ಇಲ್ಲ. ಮೂತಿಯ ತುದಿಯಲ್ಲಿ ಬಾಯಿ. ಹಲ್ಲುಗಳು ಇಲ್ಲವೇ ಇಲ್ಲ. ಆದರೆ ಒಂದು ಮೊಳ ಉದ್ದವಾದ ನಾಲಿಗೆಯಿದೆ. ತೆಳ್ಳಗೆ, ಚೂಪಾಗಿ ಇರುವ ಈ ನಾಲಿಗೆಯ ಮೇಲೆಲ್ಲ ಜೊಲ್ಲುರಸ ಹರಡಿರುವುದರಿಂದ ಅದು ಬಹಳ ಅಂಟಾಗಿರುತ್ತದೆ. ಉಪಯೋಗಿಸದಿರುವಾಗ ನಾಲಗೆಯನ್ನು ಚಿಪ್ಪಿನ ಹಂದಿ ಬಾಯಲ್ಲಿನ ಒಂದು ಕೋಶದಲ್ಲಿ ಅಡಗಿಸಿಕೊಂಡಿರುತ್ತದೆ.

ಚಿಪ್ಪಿನ ಹಂದಿಯ ಮುಖ್ಯ ಆಹಾರ ಇರುವೆ. ಬಲಿತ ಇರುವೆಗಳಿಗಿಂತ ಇರುವೆ ಮೊಟ್ಟೆಯೆಂದು ನಾವು ತಪ್ಪಾಗಿ ಕರೆಯುವ ಇರುವೆಯ ಕೋಶಾವಸ್ಥೆಗಳೇ ಇದಕ್ಕೆ ಮುಖ್ಯ ಆಹಾರ. ಇಂಥ ಜಾತಿಯ ಇರುವೆಯೆ ಆಗಬೇಕೆಂದಿಲ್ಲ. ಕಪ್ಪು, ಕೆಂಪು, ಕೆಂಜಿಗ ಯಾವುದಾದರೂ ಸರಿ. ಆದರೆ ಗೆದ್ದಲು ಮತ್ತು ಅದರ ಮೊಟ್ಟೆಗಳೆಂದರೆ ಇದಕ್ಕೆ ವಿಶೇಷ ಮೆಚ್ಚಿಗೆ.

ಆಹಾರಕ್ಕಾಗಿ ಹೊರಟಾಗ ಇರುವೆಯ ಗೂಡೋ ಹುತ್ತವೊ ಸಿಗುವ ವರೆಗೂ ನೆಲವನ್ನು ಮೂಸುತ್ತ ಹೋಗುವುದು. ಕೆಂಜಿಗದ ಗೂಡಿಗಾಗಿ ಮರವನ್ನೂ ಏರುವುದು. ಗೂಡು ಸಿಕ್ಕಿದೊಡನೆ ಉಗುರುಗಳಿಂದ ಅದನ್ನು ಬಗಿದು, ಮೂತಿಯನ್ನು ಸಾಧ್ಯವಾದಷ್ಟೂ ಒಳಕ್ಕೆ ತೂರಿ ತನ್ನ ಉದ್ದನ್ನ ನಾಲಿಗೆಯಿಂದ ಬಳಿಯಿತೆಂದರೆ ಮೊಟ್ಟೆ ಮರಿ ಸಹಿತ ಇದ್ದು ಬಿದ್ದ ಗೆದ್ದಲುಗಳೆಲ್ಲ ಅದರ ಹೊಟ್ಟೆ ಸೇರುತ್ತವೆ.

ಇರುವೆಗಳನ್ನು ಭಕ್ಷಿಸುವಾಗ ಕಲ್ಲುಮಣ್ಣು ಕೂಡ ಹೊಟ್ಟೆಗೆ ಹೋದರೂ ಅದರಿಂದ ಚಿಪ್ಪಿನ ಹಂದಿಗೆ ಅಪಾಯವಿಲ್ಲ. ಬದಲು ಪ್ರಯೋಜನವೇ ಇದೆ. ಹಲ್ಲಿನಿಂದ ಆಗುವ ಕೆಲಸವನ್ನು ಈ ಕಲ್ಲುಗಳು ಮಾಡಿಕೊಡುತ್ತವೆ. ನುಂಗಿದ ಆಹಾರವನ್ನು ಈ ಕಲ್ಲುಗಳ ಸಹಾಯದಿಂದ ಅರೆದು ಮೆದು ಮಾಡಿಸುವುದಕ್ಕಾಗಿ ಈ ಪ್ರಾಣಿಯ ಹೊಟ್ಟೆಯಲ್ಲಿ ಪ್ರತ್ಯೇಕವಾದೊಂದು ಕೋಶವಿರುತ್ತದೆ.

ಈ ಪ್ರಾಣಿಯನ್ನು ಕಂಡರೆ ಸ್ವಲ್ಪ ಭಯವೆನಿಸಿದರೂ ಇದು ಅಪಾಯಕಾರಿಯಲ್ಲ. ಇದಕ್ಕೆ ಜೋರಾಗಿ ಕೂಗಲು ಕೂಡ ಬರುವುದಿಲ್ಲ. ಅತಿಯಾಗಿ ಸಿಟ್ಟಿಗೆದ್ದಾಗ ಇಲ್ಲವೆ ಹೆದರಿದಾಗ ಹಾವಿನಂತೆ ಬುಸುಗುಟ್ಟುತ್ತದೆ. ಮಿತಿ ಮೀರಿ ಕೆಣಕಿದಾಗ ಒಂದು ವಿಧವಾದ ದುರ್ವಾಸನೆಯನ್ನು ಇದು ಬಿಡುತ್ತದೆ.

ಅಪಾಯದ ಸೂಚನೆ ಸಿಕ್ಕೊಡನೆ ಇದು ಮುಳ್ಳಿಲಿಯ ಹಾಗೆ ಉಂಡೆಗಟ್ಟಿಕೊಳ್ಳುವುದು. ಮುಂಗಾಲಿನೊಳಗೆ ತಲೆಯನ್ನು ತೂರಿಸಿ ಇಡೀ ಶರೀರಕ್ಕೆ ವಜ್ರಸಮಾನವಾದ ಬಾಲದಿಂದ ಭದ್ರಕೋಟೆ ಕಟ್ಟಿದರೆ ಆ ಮೇಲೆ ಈ ಪ್ರಾಣಿ ಅಜೇಯವಾಗಿ ಬಿಡುತ್ತದೆ. ಆ ಸುರುಳಿಯನ್ನು ಬಿಡಿಸುವುದೂ ಸಾಧ್ಯವಿಲ್ಲ. ವೈರಿ ಹಟಕ್ಕೆ ಬಿದ್ದರೆ ಚಿಪ್ಪಿನ ಹಂದಿ ತನ್ನ ಅಗಲವಾದ ಗಡಸು ಬಾಲವನ್ನು ಬೀಸಿ ಶತ್ರುವನ್ನು ಹೊಡೆದು ಕ್ಷಣಾರ್ಧದಲ್ಲಿ ಮತ್ತೆ ಚಂಡಾಗಿ ಬಿಡುತ್ತದೆ.

ಆದರೆ ಈ ಉಪಾಯಕ್ಕೂ ಸೋಲದ ಅದರ ಶತ್ರುಗಳುಂಟು. ಕೆಲವು ಪ್ರಾಣಿಗಳು ಚೆಂಡಿನಂತಾದ ಚಿಪ್ಪಿನ ಹಂದಿಯನ್ನು ಉರುಳಿಸಿಕೊಂಡು ಹೋಗಿ ನೀರಿನಲ್ಲಿ ಕೆಡವುವವೆಂದೂ ಅಲ್ಲಿ ಅದು ಜೀವ ಭಯದಿಂದ ಈಜಿ ದಂಡೆಗೆ ಬರಲೆತ್ನಿಸಿದಾಗ ಕೊಲ್ಲುತ್ತವೆಂದೂ ಹೇಳುತ್ತಾರೆ. ಆದರೆ ಅದಕ್ಕೆ ಸಾಕಷ್ಟು ಆಧಾರಗಳಿಲ್ಲ.

ಚಿಪ್ಪಿನ ಹಂದಿಯ ವಂಶವೃದ್ಧಿ ನಿಧಾನವಾಗಿ ಆಗುತ್ತದೆ. ಆಗೊಮ್ಮೆ ಈಗೊಮ್ಮೆಯಂತೆ ಚಿಪ್ಪಿನ ಹಂದಿ ಒಂದೊ ಎರಡೊ ಮರಿ ಹಾಕುತ್ತದೆ. ಮರಿಗಳ ಮೈಮೇಲಿನ ಚಿಪ್ಪುಗಳು ಬಲಿತಿರುವುದಿಲ್ಲವಾದ್ದರಿಂದ ಅವು ತಮ್ಮನ್ನು ತಾವು ರಕ್ಷಿಸಿಕೊಳ್ಳಲಾರವು. ತಂದೆತಾಯಿಗಳು ಮರಿಗಳನ್ನು ಅವು ಬೆಳೆಯುವ ವರೆಗೆ ತಮ್ಮ ಬಾಲದ ಮೇಲೆಯೆ ಹೊತ್ತುಕೊಂಡು ತಿರುಗಾಡುತ್ತ ಜಾಗರೂಕತೆಯಿಂದ ರಕ್ಷಿಸುವವು.

ಬೇಕಾದಷ್ಟು ಸ್ವಾತಂತ್ರ್ಯ ಕೊಟ್ಟು ಬಂಧನದಲ್ಲಿಟ್ಟರೂ ಚಿಪ್ಪಿನ ಹಂದಿ ೨-೩ ವರ್ಷಗಳಿಗಿಂತ ಹೆಚ್ಚು ಕಾಲ ಬದುಕುವುದಿಲ್ಲ. ಅದು ಸ್ವತಂತ್ರ ಜೀವಿ.

*



ಪಶ್ಚಿಮ ಜರ್ಮನಿಯ ರಾಜಧಾನಿಯಾದ 'ಬಾನ್'ನಲ್ಲಿ ಒಂಬತ್ತು ಅಂತಸ್ತಿನ ಪಾರ್ಲಿಮೆಂಟ್-ಭವನದೊಳಗೆ 'ಫಾಯರ್-ಬ್ರಿಗೇಡ್' ಕಡೆಯಿಂದ ಈ ಸೂಚನೆಯಿರುವ ಬೋರ್ಡನ್ನು ನೇತುಹಾಕಿದೆ—

"ಫಾಯರ್- ಬ್ರಿಗೇಡಿನ ಅನುಮತಿಯಿಲ್ಲದೆ ಎರಡನೆಯ, ಮೂರನೆಯ ನಾಲ್ಕನೆಯ, ಐದನೆಯ, ಆರನೆಯ, ಏಳನೆಯ, ಎಂಟನೆಯ ಮತ್ತು ಒಂಬತ್ತನೆಯ ಅಂತಸ್ತುಗಳ ಕಿಡಿಕಿಗಳಿಂದ ಕೆಳಗೆ ಹಾರಿಕೊಳ್ಳಲು ಸಕ್ತಮನಾಯಿಯಿರುತ್ತದೆ."

—ಹೇಮಂತ

ಲೋಕವಿಖ್ಯಾತವಾದ

ಲೋಮಾ

ಮಾರಾಟವು ಏರುತ್ತಾ
ಹೊಸ ಶಿಖರವನ್ನು ಮುಟ್ಟಿದೆ!





ಉತ್ಕೃಷ್ಟ ತಯಾರಿಕೆಯನ್ನು ಬಯಸುವ ಪ್ರತಿಯೊಬ್ಬರೂ ‘ಲೊಮಾ’ವನ್ನೇ ಕೊಂಡು ಕೊಳ್ಳುತ್ತಾರೆ. ದಿನದಿಂದ ದಿನಕ್ಕೆ ಏರುತ್ತಿರುವ ‘ಲೊಮಾ’ದ ಮಾರಾಟವೇ ಇದರ ನಿದರ್ಶನವಾಗಿರುತ್ತದೆ. ಇದೀಗ ಅಂತರ್ರಾಷ್ಟ್ರೀಯ ತಯಾರಿಕೆಯಾಗಿ ಪರಿಗಣಿಸಲ್ಪಟ್ಟು ಜಗತ್ತಿನ ಎಲ್ಲಾ ಭಾಗಗಳಿಗೂ ರಫ್ತುಗೈಯ್ಯಲ್ಪಡುತ್ತದೆ. ಈ ರೀತಿ ‘ಲೊಮಾ’ ಅಮೂಲ್ಯವಾದ ವಿದೇಶೀ ಹಣವನ್ನು ಸಂಪಾದಿಸುತ್ತದೆ ಮಾತ್ರವಲ್ಲದೆ ಅಂತರ್ರಾಷ್ಟ್ರೀಯ ವ್ಯಾಪಾರ ಕೇತ್ರದಲ್ಲಿ ಭಾರತದ ಉತ್ಕೃಷ್ಟ ತಯಾರಿಕೆಯ ಒಂದು ನಿದರ್ಶನವಾಗಿ ಪರಿಣಮಿಸಲ್ಪಟ್ಟಿರುತ್ತದೆ. ಆದರ್ಶವಾದ ಕೂದಲೆಣ್ಣೆ ಹಾಗೂ ಕೂದಲನ್ನು ಕಪ್ಪುಗೊಳಿಸುವ ಸಾಧನ—‘ಲೊಮಾ’ವನ್ನು ಲಕ್ಷೋಪ ಲಕ್ಷ ಮಂದಿ ದಿನಾಲೂ ಉಪಯೋಗಿಸಿ ಇದು ಎಲ್ಲರ ವಿಶ್ವಾಸಕ್ಕೆ ಪಾತ್ರವಾದ ತಯಾರಿಕೆಯೆಂದು ಸಿದ್ಧಗೊಳಿಸಿರುವರು.

ಸೋಲ್ ಏಜೆಂಟ್ಸ್:
ಎಮ್.ಎಸ್. ಖಂಬಾಟ್‌ವಾಲಾ,
ಅಹಮ್ಮದಾಬಾದ್ 1.

ಏಜೆಂಟ್ಸ್:
ಪಿ. ನರೋತ್ತಮ್ ಅಂಡ್ ಕಂಪೆನಿ,
ಬೊಂಬಾಯಿ 2.



ಲೋಕವಿಖ್ಯಾತವಾದ
ಕೂದಲೆಣ್ಣೆ ಹಾಗೂ
ಕೂದಲನ್ನು
ಕಪ್ಪುಗೊಳಿಸುವ
ಸಾಧನ.

# ವ್ಯಕ್ತಿ ವೈಶಿಷ್ಟ್ಯ

ಸುಪ್ರಸಿದ್ಧ ಬಂಗಾಲಿ ಕಾದಂಬರಿಕಾರ ಶರಚ್ಚಂದ್ರರು ಲೇಖನಿವಿಲಾಸಿಗಳು. ಅವರು ಅತಿ ಉತ್ತಮವಾದ, ಹೆಚ್ಚು ಬೆಲೆಯ ಕಾಗದದ ಮೇಲೆ ಬಲು ಬೆಲೆಯ ಫೌಂಟನ್ ಪೆನ್ನುಗಳಿಂದಲೇ ಬರೆಯುತ್ತಿದ್ದರು. ಅವರ ಬಳಿ ನೀಲಿ, ಹಸಿರು, ಕಪ್ಪು, ಕೆಂಪು ಶಾಯಿಗಳಿಂದ ತುಂಬಿದ ೧೯–೨೦ ಪೆನ್ನುಗಳು ಸದಾ ಇರುತ್ತಿದ್ದವು. ಬೆಲೆಯುಳ್ಳ ಕಾಗದ ಮತ್ತು ಪೆನ್‌ಗಳ ಮೇಲಿನ ಅವರ ಮಮತೆಯನ್ನು ಕಂಡು ಅವರ ಸ್ನೇಹಿತರು ಅವರಿಗೆ ಕಾಣಿಕೆ ಕೊಡುವಾಗಲೆಲ್ಲ ಅವನ್ನೆ ಕೊಡುತ್ತಿದ್ದರು. ಶರಚ್ಚಂದ್ರರೂ ಹಾಗೆಯೆ. ಎರಡನೆಯವರಿಗೆ ಕಾಣಿಕೆ ಕೊಡುವಾಗ ಕಾಗದ-ಪೆನ್ನುಗಳನ್ನೇ ಕೊಡುತ್ತಿದ್ದರು. ಅವಕ್ಕಿಂತ ಬೆಲೆಯುಳ್ಳ ವಸ್ತು ಅವರ ಜಗತ್ತಿನಲ್ಲಿ ಇರಲಿಲ್ಲ.

ಬರೆಯುವ ಕಾಗದದ ಮೂಲೆಯಲ್ಲಿ ಅವರೊಂದು ಮೊನೊಗ್ರಾಮ್ ಹಾಕಿಸಿರುತ್ತಿದರು. ಈ ಸಂಕೇತ ಚಿಹ್ನ ಒಂದು ಹಸಿರು ತೆಂಗಿನ ಕಾಯಿಯಾಗಿತ್ತು. "ಶರದೃತುವಿನಲ್ಲಿ ತೆಂಗಿನ ಕಾಯಿಗಳು ವಿಪುಲವಾಗಿ ಸಿಗುತ್ತವೆ. ಆಗ ಅವುಗಳ ಪ್ರಯೋಜನವೂ ಹೆಚ್ಚು. ನನ್ನ ಹೆಸರೂ ಶರತ್ ಎಂದಿದೆ. ಆದ್ದರಿಂದ ತೆಂಗಿನ ಕಾಯಿಯನ್ನೆ ನನ್ನ ಗುರುತನ್ನಾಗಿ ಮಾಡಿಕೊಂಡಿದ್ದೇನೆ" ಎಂದು ಅವರನ್ನುತ್ತಿದ್ದರು.

ಪೆನ್ನಿನ ನಿಬ್ಬು ಎಷ್ಟು ತೆಳ್ಳಗಾಗಿ, ಚೂಪಾದ ತುದಿಯುಳ್ಳದ್ದಾಗಿರುತ್ತಿತ್ತೊ ಅಷ್ಟು ಅವರಿಗೆ ಪ್ರಿಯವಾಗಿರುತ್ತಿತ್ತು. ಯಾವುದಾದರೂ ಹೊಸ ಪೆನ್ನಿನ ಸುದ್ದಿ ಕೇಳಿದೊಡನೆ ಆ ಪೆನ್ನನ್ನು ಕೊಂಡುಕೊಳ್ಳಲು ಅವರು ಆತುರರಾಗುತ್ತಿದ್ದರು. ಅವರು "ವಂಗವಾಣಿ" ಯಲ್ಲಿ "ಪಥೇರ ಬಾನಿ" ಕಾದಂಬರಿ ಬರೆಯಲು ತೊಡಗಿದಾಗ ಸಂಪಾದಕರು ಅವರಿಗೊಂದು ಪೆನ್ ಕಾಣಿಕೆಯಾಗಿ ಕೊಟ್ಟರು. ಅದರ ನಿಬ್ಬು ತುಂಬ ತೆಳ್ಳಗಾಗಿದ್ದರೂ ಶರಚ್ಚಂದ್ರರಿಗೆ ಮೆಚ್ಚಿಗೆಯಾಗಲಿಲ್ಲ. ಅದಕ್ಕಿಂತಲೂ ತೆಳ್ಳಗಾದ ನಿಬ್ಬನ್ನು ಸಂಪಾದಕರು ಅಮೇರಿಕೆಯಿಂದ ತರಿಸಿ ಶರಚ್ಚಂದ್ರರನ್ನು ಸಂತುಷ್ಟ ಪಡಿಸಬೇಕಾಯಿತು.

ಮೇಜು ಕುರ್ಚಿಗಳಿಗಿಂತ ಗಾದಿ ಲೋಡುಗಳ ಮೇಲೆ ಕುಳಿತು ಬರೆಯುವುದೇ ಅವರಿಗೆ ಅನುಕೂಲವೆನಿಸುತ್ತಿತ್ತು. ದಿನಕ್ಕೆ ನಾಲ್ಕು ಗಂಟೆಗಳಿಗಿಂತ ಹೆಚ್ಚು ಕಾಲ ಅವರು ಬರೆಯುತ್ತಿರಲಿಲ್ಲ. ಬರೆಯುವಾಗ ಎಡ ಮಗ್ಗಲಲ್ಲಿ ಸದಾ ಹುಕ್ಕಾ ತಯಾರಾಗಿರುತ್ತಿತ್ತು.

—ಕಾಂತಿಲಾಲ ಮೋದಿ

ಚಂಪಾರಣ್ಯದಲ್ಲಿ ನಡೆಯುತ್ತಿದ್ದ ಅನ್ಯಾಯ ಅತ್ಯಾಚಾರಗಳ ಬಗ್ಗೆ ಬಾಪೂಜಿಯವರು ಆಂದೋಲನವೆಬ್ಬಿಸಿದರು. ಜನರಲ್ಲಿ ಜಾಗ್ರತಿಯನ್ನುಂಟುಮಾಡಲಾರಂಭಿಸಿದರು. ಹೊಸ ಶಾಲೆಗಳನ್ನು ಪ್ರಾರಂಭಿಸಿದರು. ಜನರಿಗೆ ತಮ್ಮ ಅರಿವು ಉಂಟಾಗುವಂತೆ ಮಾಡುತ್ತಿದ್ದರು. ಇದರ ಪರಿಣಾಮ ಜನಜೀವನದಲ್ಲಿ ತೋರಿಬರುತ್ತಿತ್ತು. ಜಾಗ್ರತವಾಗುತ್ತಿದ್ದ ಜನತೆಯಲ್ಲಿ, ಒಂದು ಬಗೆಯ ಹೊಸ ಹುರುಪು ಹೊಸ ಉತ್ಸಾಹ ತೋರಿ ಬರುತ್ತಿತ್ತು. ಆದರೆ ಬಿಳಿಯ ಬಂಡವಲದಾರರಿಗೆ ಮಾತ್ರ ಇದು ಸಹನವಾಗುತ್ತಿದ್ದಿಲ್ಲ.

ಒಂದು ದಿನ ಒಬ್ಬರು— "ಬಾಪೂಜೀ,

ಇಲ್ಲಿಯ ಕಾರಖಾನೆ ಒಡೆಯ ಬಹಳ ಕ್ರೂರಿಯಾಗಿದ್ದಾನೆ. ಆತ ನಿಮ್ಮ ಕೊಲೆ ಮಾಡಬೇಕೆಂದಿದ್ದಾನೆ - ಕೊಲೆಗಡಕರಿಗೂ ಹೇಳಿ ಇಟ್ಟಿದ್ದಾನೆ" ಎಂದು ಹೇಳಿದ.

ರಾತ್ರಿ ಬಾಪೂಜಿ ಒಬ್ಬರೆ ಎದ್ದು ಆ ಒಡೆಯನಲ್ಲಿ ಹೋದರು. ಅವನೆದುರು ನಿಂತು, "ನನ್ನನ್ನು ಕೊಲ್ಲುವ ವಿಚಾರ ನಿನಗಿದೆಯಂತೆ. ಅದಕ್ಕೆ ನಾನು ಬಂದಿದ್ದೇನೆ. ನಿನಗೆ ಅನುಕೂಲವಾಗಲೆಂದು ಈ ರಾತ್ರಿ, ಈ ರೀತಿ ಒಬ್ಬನೇ ಬಂದಿದ್ದೇನೆ" ಎಂದರು. ಬಿಳಿಯ ಒಡೆಯನ ಜಂಘಾಬಲವೆ ಉಡುಗಿ ಹೋಯಿತು. ಆತ ಕಾಷ್ಠಪ್ರತಿಮೆಯಂತಾದ.

—ಕಾಕಾ ಕಾಲೇಲಕರ

ವಿಜ್ಞಾನ ವಿಷಯಕ ಸಲಹೆಗಳನ್ನು ತನಗೆ ಇತ್ತಿದ್ದ ನಿಗ್ರೊ ವಿಜ್ಞಾನಿ ಡಾ. ಜಾರ್ಜ್ ವಾಶಿಂಗ್ಟನ್ ಕಾರ್ವರರಿಗೆ ಕೃತಜ್ಞರಾಗಿದ್ದ ಟಾಮ್ ಹಸ್ಟನ್ನರು ಅವರಿಗೆ ಆಗಾಗ ಬೆಲೆಬಾಳುವ ಕಾಣಿಕೆಗಳನ್ನು ಕೊಡುತ್ತಿದ್ದರು. ಒಮ್ಮೆ ಹಸ್ಟನ್ನರು " ತಮಗೇನು ಬೇಕು ?" ಎಂದು ಕೇಳಲು ಕಾರ್ವರರು "ಒಂದು ವಜ್ರ" ಎಂದರು. ಹಸ್ಟನ್ನರು ಪ್ಲಾಟಿನಂ ಉಂಗುರದಲ್ಲಿ ಒಂದು ಉತ್ತಮ ವಜ್ರವನ್ನು ಕೂಡ್ರಿಸಿ ಕಳಿಸಿಕೊಟ್ಟರು.

ಕೆಲ ದಿನಗಳ ನಂತರ ಕಾರ್ವರರನ್ನು ಭೆಟ್ಟಿಯಾದಾಗ ಹಸ್ಟನ್ನರು "ನಾನು ಕಳಿಸಿದ ವಜ್ರ ಮೆಚ್ಚಿಗೆಯಾಯಿತೆ?" ಎಂದು ಕೇಳಿದರು.

"ಓಹೋ! ನಾನು ಯಾವಾಗಲೂ ಅದನ್ನು ಉಪಯೋಗಿಸುತ್ತೇನೆ" ಎಂದವರೇ ಕಾರ್ವರರು ಖನಿಜ ಪದಾರ್ಥಗಳ ಮಾದರಿಗಳನ್ನಿಟ್ಟಿದ ಒಂದು ಪೆಟ್ಟಿಗೆಯನ್ನು ತೋರಿಸಿದರು. ಅದರಲ್ಲಿ ಉಳಿದವುಗಳೊಡನೆ ಆ ವಜ್ರದುಂಗುರವೂ ಇತ್ತು.

— ರೀಡರ್ಸ್ ಡೈಜೆಸ್ಟ್

ಫ್ರೆಂಚ್ ಕಾದಂಬರಿಕಾರ ಬಾಲ್ಜಕ್ ಬಹಳ ದುಂದುಗಾರನಾಗಿದ್ದ. ಅವನ ಚಿಕ್ಕಪ್ಪ ಸಾಯುವಾಗ ತನ್ನ ಸಂಪತ್ತನ್ನು ಇವನ ಹೆಸರಿಗೆ ಬಿಟ್ಟು ಹೋಗಿದ್ದ: ಆಗ ಬಾಲ್ಜಕ್ ತನ್ನ ಚಿಕ್ಕಪ್ಪ ಸತ್ತ ಸುದ್ದಿಯನ್ನು ತನ್ನ ಮಿತ್ರರಿಗೆ ಹೇಗೆ ತಿಳಿಸಿದ್ದನೆಂದರೆ, "ನಿನ್ನೆ ಪ್ರಾತಃಕಾಲದಲ್ಲಿ ನಾನು ಮತ್ತು ನನ್ನ ಚಿಕ್ಕಪ್ಪ ನಮ್ಮ ಮಾರ್ಗಗಳನ್ನು ಬೇರ್ಪಡಿಸಿಕೊಂಡು ಹೆಚ್ಚಿನ ಸುಖ-ಸೌಲಭ್ಯಗಳನ್ನನುಭವಿಸುತ್ತ ನಮ್ಮ ನಮ್ಮ ಮಾರ್ಗದಲ್ಲಿ ನಡೆಯಲು ಪ್ರಾರಂಭಿಸಿದ್ದೇವೆ" ಎಂದು.



ರಾತ್ರಿಯೂ ಎಚ್ಚರಿರುವವರ ಮನೆಯಲ್ಲಿ ಕಳ್ಳರು ಹೋಗಲಾರರು. ಅದರಂತೆಯೆ, ದೇವರಲ್ಲಿ ವಿಶ್ವಾಸವಿಟ್ಟು ಸಂಸಾರದ ಮೋಹಕ್ಕೆ ಬಲಿಯಾಗದಂತೆ ಜಾಗ್ರತರಾಗಿರುವವರ ಚಿತ್ತದಲ್ಲೂ ಕೆಟ್ಟ ವಿಚಾರಗಳು ಪ್ರವೇಶಮಾಡಲಾರವು.

—. ರಾಮಕೃಷ್ಣ

ತನ್ನನ್ನು ತಾನು ದಮನ ಮಾಡಿಕೊಳ್ಳುವುದೇ ಕಷ್ಟ. ಅದನ್ನೇ ನಾವು ಮಾಡಬೇಕು. ಇಂಥವರೇ ಇಹ—ಪರಗಳೆರಡರಲ್ಲೂ ಸುಖಿಯಾಗಿ ಇರುತ್ತಾರೆ.

— ಭಗವಾನ್ ಮಹಾವೀರ





# ಮ್ಯಾನರ್ಸ್ ಗ್ರೈಪ್ ಮಿಕ್ಸ್ಚರ್ ಕೊಡಿರಿ






## ಮತ್ತು ಮುಖದಲ್ಲಿ ಪುನಃ ಮುಗುಳುನಗೆ ಮೂಡುವುದನ್ನು ನೋಡಿರಿ



ಇದು 'ಮ್ಯಾನರ್ಸ್'ರವ

ಮ್ಯಾನರ್ಸ್‌ರ ಗ್ರೈಪ್ ಮಿಕ್ಸ್ಚರ್ ನಿಮ್ಮ ಮಗುವಿನ ವಾಯು ಹಾಗೂ ಹೊಟ್ಟೆ ಶೂಲೆಯ ಉಪದ್ರವವನ್ನು ಸೌಮ್ಯರೀತಿಯಲ್ಲಿ ಉಪಶಮನಗೊಳಿಸುತ್ತದೆ; ಮತ್ತು ಮಗುವಿಗೆ ಹಲ್ಲು ಬರುವಾಗ ಹೊಟ್ಟೆಯ ಅವ್ಯವಸ್ಥೆಗಳು ಉಂಟಾಗದಂತೆಮಾಡಲು ನೆರವಾಗುತ್ತದೆ.

ASP/GM 16 KA.

ಬ್ರಿಟನ್ನಿನ ಹಿಂದಿನ ಕಾರ್ಮಿಕ ಪ್ರಧಾನಮಂತ್ರಿಯ
ಜೀವನ ಕಥೆ

# ಕ್ಲೆಮೆಂಟ್ ಆಟ್ಲಿ

## ಸಾಮಾನ್ಯತೆಯ ಅಸಾಮಾನ್ಯ ಯಶಸ್ಸು

ಪಾವೆಂ

ಎರಡನೇ ಮಹಾಯುದ್ಧದ ಕಾಲದಲ್ಲಿ ಭಾರತವು ಸ್ವಾತಂತ್ರ್ಯಕ್ಕಾಗಿ ಒತ್ತಾಯಪಡಿಸಿದಾಗ ಆಗಿನ ಪ್ರಧಾನಮಂತ್ರಿ ವಿನ್‌ಸ್ಟನ್ ಚರ್ಚಿಲ್ಲರು "ನಾನು ಪ್ರಧಾನಮಂತ್ರಿಯಾದದ್ದು ಬ್ರಿಟಿಶ್ ಸಾಮ್ರಾಜ್ಯದ ದಿವಾಳಿ ತೆಗೆಯುವುದಕ್ಕಲ್ಲ" ಎಂದು ಗರ್ವದಿಂದ ಘೋಷಿಸಿದರು.

ಆಗ ಅವರ ಉಪಪ್ರಧಾನ ಮಂತ್ರಿಯಾಗಿದ್ದ ಮನುಷ್ಯ ಮನಸಿನಲ್ಲಿ ಏನು ಯೋಚಿಸಿದರೋ ಯಾರೂ ಅರಿಯರು. ಆದರೆ ಬ್ರಿಟಿಶ್ ಸಾಮ್ರಾಜ್ಯದ ದಿವಾಳಿ ತೆಗೆಯಲು ಒಲ್ಲದಿದ್ದ ಪ್ರಧಾನ ಮಂತ್ರಿಯನ್ನು ಯುದ್ಧ ಮುಗಿದೊಡನೆ ಬ್ರಿಟಿಶ್ ಜನತೆ ಅಧಿಕಾರದಿಂದ ತಳ್ಳಿತು. ಉಪಪ್ರಧಾನ ಮಂತ್ರಿಯಾಗಿದ್ದ ವ್ಯಕ್ತಿಗೆ ಆ ಪದವಿ ದೊರಕಿತು; ಮತ್ತು ಆ ವ್ಯಕ್ತಿ ಮೂರು ವರ್ಷಗಳು ತೀರುವ ಮುಂಚೆ ಭಾರತ, ಬರ್ಮಾ, ಸಿಂಹಳಗಳಿಗೆ ಸ್ವಾತಂತ್ರ್ಯ ಕೊಟ್ಟು ಸಾಮ್ರಾಜ್ಯದ ದಿವಾಳಿಯನ್ನೇ ತೆಗೆಯಿತು. ಅದರಿಂದ "ಭಾರತ ಸಮ್ರಾಟ್" ಆಗಿದ್ದಾತ ಬರಿಯ ಬ್ರಿಟಿಶ್ ದೊರೆಯಾಗಿ ಉಳಿದ. ಆದರೆ ೪೦ ಕೋಟಿಗೂ ಹೆಚ್ಚಿನ ಜನತೆಯ ಹೃದಯದಲ್ಲಿ ಬ್ರಿಟನ್ನಿನ ಬಗ್ಗೆ ದ್ವೇಷದ ಬದಲು ಪ್ರೀತಿ ಸೌಹಾರ್ದಗಳ ಬೆಳೆ ಬಿತ್ತಲ್ಪಟ್ಟಿತು.

ಹೀಗೆ ದ್ವೇಷದ ಕಳೆ ಇದ್ದಲ್ಲಿ ಪ್ರೀತಿಯ ಬೆಳೆ ಬಿತ್ತುವ ಕಲ್ಪನಾಶಕ್ತಿ ಮತ್ತು ಧೈರ್ಯವಿದ್ದ ವ್ಯಕ್ತಿಯೇ ಆಟ್ಲಿ.

ತೀರ ಸಾಮಾನ್ಯ ಯೋಗ್ಯತೆಯ ಪ್ರಧಾನ ಮಂತ್ರಿಯೊಬ್ಬನು ಅತ್ಯಂತ ಅಸಾಮಾನ್ಯ ಕ್ರಾಂತಿಯೊಂದನ್ನು ರಕ್ತರಹಿತವಾಗಿ ಸಾಧಿಸಿದ ಉದಾಹರಣೆ ಬೇಕಾದರೆ ಬ್ರಿಟನ್ನಿನ ಸಿ. ಆರ್. ಆಟ್ಲಿಯವರನ್ನಲ್ಲದೆ ಬೇರಾರನ್ನೂ ಯಾವ ದೇಶದಲ್ಲೂ ತೋರಿಸುವುದು ಕಷ್ಟವಾದೀತು. ಕೋಟಿಗಟ್ಟಳೆ ಅಧೀನ ಜನತೆಗೆ ಸ್ವಾತಂತ್ರ್ಯವನ್ನು ದಯಪಾಲಿಸಿದ್ದೊಂದೇ ಅಲ್ಲ ಆಟ್ಲಿಯವರ ಸಾಧನೆ. ಬ್ರಿಟಿಶ್ ಕಾರ್ಮಿಕ ಪಕ್ಷದ ಪ್ರಧಾನಿಯಾಗಿ ಅವರು ಬ್ರಿಟನ್ನನ್ನು ಸಮಾಜವಾದದ ದಾರಿಯಲ್ಲಿ ನಡೆಸಿಬಿಟ್ಟರು. ಅವರು ರಾಷ್ಟ್ರದ ಐದರಲ್ಲೊಂದಂಶಕ್ಕಿಂತಲೂ ಹೆಚ್ಚು ಪ್ರಮುಖ ಉದ್ಯಮಗಳನ್ನು ರಾಷ್ಟ್ರೀಕರಿಸಿದರು. ಕಲ್ಲಿದ್ದಲಿ, ರೇಲ್ವೆ, ವಿದ್ಯುತ್ ಮತ್ತು ಗ್ಯಾಸ್, ನಾಗರಿಕ ವಿಮಾನ ಮತ್ತು ಬ್ಯಾಂಕ್ ಆಫ್ ಇಂಗ್ಲಂಡ್ ಇವೆಲ್ಲ ಅವರ ಕೈಕೆಳಗೆ ಸರಕಾರದ ಸೊತ್ತಾದವು. ಬ್ರಿಟಿಶ್ ವೈದ್ಯಕೀಯ ಸೇವೆ ಹೆಚ್ಚು

ಕಡಿಮೆ ಪೂರ್ಣವಾಗಿ ಸರಕಾರದ ನಿಯಂತ್ರಣ ಕೈಕೊಳಪಟ್ಟಿತು. ಬ್ರಿಟಿಶ್ ಕಾರ್ಮಿಕ ಪಕ್ಷದ ನಾಯಕರಾಗಿ ಅವರು ಏಳು ವರ್ಷವೂ ಅಧಿಕಾರ ನಡೆಸಲಿಲ್ಲ. ಕಾನ್ಸರ್ವೇಟಿವ್ ಪಕ್ಷ ಅವರನ್ನು ಸೋಲಿಸಿತು. ಆದರೆ ಅವರು ಸಾಧಿಸಿದ ಕ್ರಾಂತಿಯಿಂದ ದೇಶವನ್ನು ವಿಶೇಷವಾಗಿ ಹಿಂದಿರುಗಿಸಲು ಇಂದಿಗೂ ಕಾನ್ಸರ್ವೇಟಿವರಿಗೆ ಸಾಧ್ಯವಾಗಿಲ್ಲ.

ಸಾಮಾನ್ಯ ವ್ಯಕ್ತಿ ಎಂದೆವಲ್ಲ, ಕ್ಲೆಮೆಂಟ್ ರಿಚಾರ್ಡ್ ಆಟ್ಲಿಯ ವ್ಯಕ್ತಿತ್ವದಲ್ಲಾಗಲಿ ರೂಪದಲ್ಲಾಗಲಿ ಎದ್ದು ಕಾಣಿಸುವಂಥಾದ್ದು ಏನೂ ಇಲ್ಲ. ಎತ್ತರದ ಆಳೂ ಅಲ್ಲ, ದಪ್ಪನೆಯ ಮೈಕಟ್ಟೂ ಅಲ್ಲ, ಬೋಳು ತಲೆ, ನೆರೆತ ಮೀಸೆಯ ಈ ವ್ಯಕ್ತಿ ಯಾವುದಾದರೂ ಕಂಪನಿಯ ಮ್ಯಾನೇಜರ್ ಇರಬಹುದೆಂದು ಯಾರಾದರೂ ಭಾವಿಸಬಹುದು.

ಇಪ್ಪತ್ತು ವರ್ಷ ಕಾಲ ಬ್ರಿಟಿಶ್ ಕಾರ್ಮಿಕ ಪಕ್ಷದ ನಾಯಕತ್ವ ವಹಿಸಿದ ಆಟ್ಲಿಯವರು ಪ್ರಾರಂಭದಲ್ಲಿ ಸಮಾಜವಾದಿಯಾಗಿರಲಿಲ್ಲ. ಅವರು ಕಾರ್ಮಿಕ ಕುಟುಂಬದಲ್ಲಿ ಹುಟ್ಟಿದವರು ಕೂಡ ಅಲ್ಲ. ಪರಂಪರಾಪ್ರಿಯವಾದ ಮಧ್ಯಮ ವರ್ಗ ಕುಟುಂಬದಲ್ಲಿ ೧೮೮೩ ಜನವರಿ ೨೩ ರಂದು ಅವರು ಜನಿಸಿದರು. ಅವರ ತಂದೆ ಅಟಾರ್ನಿಯಾಗಿದ್ದರು. ಕ್ಲೆಮೆಂಟ್ ಆಟ್ಲಿ ಆಕ್ಸ್‌ಫರ್ಡಿನಲ್ಲಿ ಶಿಕ್ಷಣ ಪಡೆದು ಯಾವ ವೈಶಿಷ್ಟ್ಯವನ್ನೂ ಪ್ರದರ್ಶಿಸದೆ ವಕೀಲರಾಗಿ ಹೊರಬಂದರು. ಇಡೀ ಅವಧಿಯಲ್ಲಿ ಅವರು ಒಮ್ಮೆ ಮಾತ್ರ ಡಿಬೇಟಿಂಗ್‌ನಲ್ಲಿ ಭಾಗವಹಿಸಿದ್ದರು. ಅದರಲ್ಲಿ ಅವರು ವಹಿಸಿದ ಪಕ್ಷ ತುಂಬ ಅ-ಸಮಾಜವಾದಿಯಾಗಿತ್ತು. ಅನಿರ್ಬಂಧ ವ್ಯಾಪಾರ-ಫ್ರೀಟ್ರೇಡ್-ವನ್ನು ಅವರು ಪ್ರತಿಪಾದಿಸಿದ್ದರು.

ಮಹಾ ವಕೀಲರಾಗುವ ಆಸೆ ಅವರಿಗಿತ್ತು. ಅದು ಕೈಗೂಡುವಂತೆ ಕಾಣದಿದ್ದ ಮೇಲೆ ಅವರು ನ್ಯಾಯಾಧೀಶರಾಗಲು ಪ್ರಯತ್ನಿಸಿ ಅದರಲ್ಲೂ ಅಯಶಸ್ವಿಯಾದರು. ಅವರು ಎರಡರಲ್ಲಿ ಯಾವುದೊಂದನ್ನಾದರೂ ಕೈಗೂಡಿಸಿಕೊಂಡಿದ್ದರೆ ಸಮಾಜವಾದಿ ಆಟ್ಲಿಯನ್ನು ಜಗತ್ತು ಕಾಣುತ್ತಿದ್ದಿಲ್ಲ.

೧೯೦೫ ರಲ್ಲಿ ನಡೆದ ಒಂದು ಘಟನೆ ಈ ಅಯಶಸ್ವಿ ವಕೀಲನ ದಾರಿಯನ್ನು ಬದಲಿಸಿತು. ಲಂಡನ್ನಿನ ಹೊಲೆಗೇರಿಯಾದ ಸ್ಟೆಪ್ನಿಯಲ್ಲಿ ನಡೆಯುತ್ತಿದ್ದ "ಬಾಯ್ಸ್ ಕ್ಲಬ್" ಎಂಬ ಸಂಸ್ಥೆಗೆ ಅವರು ಯಾರೋ ಮಿತ್ರರೊಡನೆ ಭೆಟ್ಟಿಕೊಟ್ಟರು. ಆಗ ಕಾರಖಾನೆಗಳಲ್ಲಿ ದುಡಿಯುತ್ತಿದ್ದ ಅಪ್ರಾಯಸ್ಥ ಹುಡುಗರನ್ನು, ಅವರಿಗೆ ೧೮ ತುಂಬಿದೊಡನೆ, ಮಾಲಕರು ಹೊರಗೆ ಹಾಕಿಬಿಡುತ್ತಿದ್ದರು. ಏಕೆಂದರೆ ಇನ್ನೂ ಅವರನ್ನಿಟ್ಟುಕೊಂಡರೆ ಪ್ರಾಯಸ್ಥರಿಗೆ ಕೊಡುವಷ್ಟು ಸಂಬಳವನ್ನು ಅವರಿಗೆ ಕೊಡಬೇಕಾಗುತ್ತಿತ್ತಲ್ಲ! ಇಂಥ ಕೆಲಸಗೇಡಿ ತರುಣನಿಗೆ ನೆರವು, ತರಬೇತಿ ಕೊಡಲು ಆ ಕ್ಲಬ್ಬು ಸ್ಥಾಪಿತವಾಗಿತ್ತು.

ಆ ಭೆಟ್ಟಿ ಅವರಿಗೆ ತಾವಿದ್ದ ಐಷಾರಾಮದ ಮಧ್ಯಮ ವರ್ಗಕ್ಕಿಂತ ಭಿನ್ನವಾದ ಹೊಸ ಜಗತ್ತೊಂದನ್ನು ತೋರಿಸಿತು. ಅವರಿಗೆ ಸಖೇದಾಶ್ಚರ್ಯವಾಯಿತು. ಲಂಡನ್ನಿನ ಹೊಲೆಗೇರಿಗಳಿಗೆ ಅವರು ಮೇಲಿಂದ ಮೇಲೆ ಹೋಗಿ ಬರತೊಡಗಿದರು. ನೋಡನೋಡಿದಂತೆ ಅವರಿಗೆ ಪ್ರಚಲಿತ ಸಾಮಾಜಿಕ ಪದ್ಧತಿಯ ಬಗ್ಗೆ ಸಂದೇಹ ಹೆಚ್ಚಿತು. ಈ ಕೂಲಿಕಾರ ಜನರು ಹೀಗೆ ನಿಕೃಷ್ಟವಾಗಿ ಬಾಳುವ ಅಗತ್ಯವುಂಟೆ? ಅವರಿಗೂ ಮಾನವರಾಗಿ ಬಾಳುವ ಅವಕಾಶ ನೀಡುವ ಸಮಾಜ ವ್ಯವಸ್ಥೆ ಸಾಧ್ಯವಿಲ್ಲವೇ? ಆಗ ಸಮಾಜವಾದದ ಪ್ರಚಾರ ಮಾಡುತ್ತಿದ್ದ ಫೇಬಿಯನ್ ಸೊಸೈಟಿಯ ಸಭೆಗಳಿಗೆ ಅವರು ಹೋಗತೊಡಗಿದರು. ಬರ್ನಾರ್ಡ್ ಶಾ ಮೊದಲಾದ ಸಮಾಜವಾದದ ಗಡ್ಡದ ಋಷಿಗಳ ಪ್ರವಚನಗಳನ್ನು ಕೇಳಿದರು. ಹೌದು, ಈ ರೋಗಕ್ಕೆ

ಸಮಾಜವಾದ ಮದ್ದು ಎಂದು ಅವರಿಗೆ ಮನವರಿಕೆಯಾಯಿತು.

೧೯೦೭ ರಲ್ಲಿ ಅವರಾಗಲೇ ಸಮಾಜವಾದಿಯಾಗಿ ಹೋಗಿದ್ದರು. ಅವರು ಸ್ವತಂತ್ರ ಕಾರ್ಮಿಕ ಪಕ್ಷವನ್ನು ಸೇರಿದರು. ಸಾಬೂನು ಪೆಟ್ಟಿಗೆಗಳನ್ನು ಹೊತ್ತುಕೊಂಡು ಹೋಗಿ ಬೀದಿ ಮೂಲೆಗಳಲ್ಲಿ ಅವುಗಳ ಮೇಲೆ ನಿಂತು ಭಾಷಣ ಬಿಗಿಯತೊಡಗಿದರು; "ಕೆಲ ವೇಳೆ ವಿರೋಧಿಗಳು ನನ್ನನ್ನು ಪೆಟ್ಟಿಗೆಗಳಿಂದ ಕೆಳಗೆಳೆದೂ ಹಾಕುತ್ತಿದ್ದರು" ಎಂದವರು ಹೇಳಿದ್ದಾರೆ. ಕಾರ್ಮಿಕರಿಗೆ ಸಹಾಯ ಮಾಡಲು ಸ್ಥಾಪಿತವಾಗಿದ್ದ ಹೇಲ್‌ಬರಿ ಹೌಸ್ ಸಂಸ್ಥೆಯ ಮೆನೇಜರರಾಗಿ ಅವರು ಕಾರ್ಮಿಕರ ಪರವಾಗಿ ಹಲವಾರು ಕಾಯದೆಯ ಕದನಗಳನ್ನು ಸಾಗಿಸಿದರು.

ತಮ್ಮ ವರ್ಗದವನಲ್ಲದಿದ್ದರೂ ತಮಗಾಗಿ ಶಾಂತರೀತಿಯಿಂದ ಪ್ರಾಮಾಣಿಕವಾಗಿ ಹೋರಾಡುವ ಈ ತರುಣ ವಕೀಲನ ಮೇಲೆ ಕಾರ್ಮಿಕರ ಆದರ ಹೆಚ್ಚಿತು. ಮೊದಲನೇ ಮಹಾಯುದ್ಧದಲ್ಲಿ ಯುದ್ಧರಂಗಕ್ಕೆ ಹೋಗಿ ಎರಡು ಬಾರಿ ಗಾಯಗೊಂಡು ಮೇಜರ್ ಹುದ್ದೆಯವರೆಗೇರಿದ ಆಟ್ಲಿಯವರು ಯುದ್ಧ ಮುಗಿದೊಡನೆ ತಮ್ಮ ಹಳೆಯ ಕಾರ್ಯವನ್ನು ಕೈಕೊಂಡರು. ೧೯೨೨ ರಲ್ಲಿ ಅವರು ಪಾರ್ಲಿಮೆಂಟಿಗೆ ಆರಿಸಿ ಬಂದರು. ೧೯೨೪ ರಲ್ಲಿ ಕಾರ್ಮಿಕ ಪಕ್ಷ ಅಧಿಕಾರಕ್ಕೆ— ಪ್ರಥಮತಃ—- ಬಂದಾಗ ಅವರು ಅದರಲ್ಲಿ ಯುದ್ಧ ಶಾಖೆಯ ಅಂಡರ್-ಸೆಕ್ರೆಟರಿ ಆದರು. ೧೯೩೫ ರಲ್ಲಿ ಅವರು ಪಾರ್ಲಿಮೆಂಟಿನಲ್ಲಿ ಕಾರ್ಮಿಕ ಪಕ್ಷದ ನಾಯಕರಾಗಿ ಆರಿಸಲ್ಪಟ್ಟರು. ಹತ್ತು ವರ್ಷದ ನಂತರ ಅವರು ದೇಶದ ಪ್ರಧಾನಮಂತ್ರಿಪದಕ್ಕೇರಿದರು.

ಆಟ್ಲಿಯವರ ಸಾಮಾನ್ಯತೆಯ ವಿಷಯದಲ್ಲಿ ಅವರ ವಿರೋಧಿಗಳು ಹಾರಿಸುವ ಚಟಾಕಿಗಳಿಗೂ ಹೇಳುವ ಕಥೆಗಳಿಗೂ ಲೆಕ್ಕವಿಲ್ಲ. "ಕುರಿಯ ಚರ್ಮ ಹೊದ್ದ ಕುರಿ" ಎಂದು ಅವರನ್ನು ಕೆಲವರು ಹಾಸ್ಯಮಾಡಿದ್ದಾರೆ. ಅವರು ಪ್ರಧಾನ ಮಂತ್ರಿ ಪದ ಸ್ವೀಕರಿಸಿದ ಸಂದರ್ಭವನ್ನು ಪ್ರಸಿದ್ಧ ನಾಟಕಕಾರನೊಬ್ಬ ಒಬ್ಬ ಪಾತ್ರನ ಬಾಯಲ್ಲಿ ಹೀಗೆ ಹಾಸ್ಯ ಮಾಡಿಸಿದ್ದಾನೆ: "ಖಾಲಿ ಟ್ಯಾಕ್ಸಿಯೊಂದು ಡೌನಿಂಗ್ ಬೀದಿಯ ೧೦ನೇ ಮನೆಯ (ಪ್ರಧಾನ ಮಂತ್ರಿಯ ಮನೆ) ಮುಂದೆ ಬಂದು ನಿಂತಿತು. ಅಕೋ, ಅದರೊಳಗಿಂದ ಆಟ್ಲಿ ಹೊರಬಂದ!" ಆಟ್ಲಿ ಪ್ರಧಾನ ಮಂತ್ರಿಯಾಗಿದ್ದಾಗ ವಿರೋಧಿ ಚರ್ಚಿಲ್ಲರ ಭಾಷಣವನ್ನು ಆಟ್ಲಿಯವರು ಬಲು ಚುಟುಕಾಗಿ ಆದರೆ ಸ್ವಾರಸ್ಯವಾಗಿ ಖಂಡಿಸಿ ಪಾರ್ಲಿಮೆಂಟಿನಲ್ಲಿ ಭಾಷಣ ಮಾಡಿದ ಒಂದು ಸಂದರ್ಭದಲ್ಲಿ ಮೆಚ್ಚುಗೆಯಿಂದ ಚರ್ಚಿಲ್ಲರು, "ಕೆಲಸಗಾರ ತುಂಬಿಗೂ ರಾಜಮಧು ತಿನ್ನಿಸಿದರೆ ಅದು ರಾಣಿಯಾಗುತ್ತದೆಂದು ತೋರುತ್ತದೆ" ಎಂದರಂತೆ.

ಆಟ್ಲಿಯವರ ಸಾಮಾನ್ಯತೆಯನ್ನು ಅವರ ವಿರೋಧಿಗಳೇ ಹೇಳಬೇಕೆಂದಿಲ್ಲ. ಅವರ ಬೆಂಬಲಿಗರಾದ ಕಾರ್ಮಿಕ ಕೋಟಿಗೇ ಅದು ಚೆನ್ನಾಗಿ ಗೊತ್ತಿತ್ತು. ಆಟ್ಲಿಯವರ ಕೊರತೆಗಳನ್ನೆಲ್ಲ ತಿಳಿದೇ ಅವರು ತಮ್ಮ ನಾಯಕನಾಗಿ ಅವರನ್ನಾರಿಸಿಕೊಂಡರು. ಪ್ರಚಂಡರಾದ ರ್‍ಯಾಮ್ಸೆ ಮೆಕ್‌ಡೊನಾಲ್ಡರನ್ನು ನಾಯಕರಾಗಿ ಆರಿಸಿಕೊಂಡು ಅವರು ಬುದ್ಧಿ ಕಲಿತಿದ್ದರು. ಅಧಿಕಾರವನ್ನು ಗೆದ್ದುಕೊಂಡು ಪ್ರಧಾನ ಮಂತ್ರಿಯಾದ ಮೇಲೆ ಮೆಕ್‌ಡೊನಾಲ್ಡ್ ಸಮಾಜವಾದಕ್ಕೆ ದ್ರೋಹ ಮಾಡಿದ್ದರು. ಆಟ್ಲಿ "ಪ್ರಚಂಡ"ರಾಗಿರಲಿಕ್ಕಿಲ್ಲ. ಆದರೆ ಪ್ರಾಮಾಣಿಕರಾಗಿದ್ದರೆಂಬುದರಲ್ಲಿ ಯಾರಿಗೂ ಸಂದೇಹಕ್ಕೆಡೆ ಇರಲಿಲ್ಲ. ಅವರ ಸಮಾಜವಾದ ಅಗ್ನಿಭಕ್ಷಕ ಮಟ್ಟದ್ದಾಗಿಲ್ಲ, ಮಂದಗಾಮಿಯೇ ಎಂಬುದನ್ನೂ ಅವರ ಬೆಂಬಲಿಗರು ಅರಿಯದಿಲ್ಲ. ಆದರೆ ತಾವೊಪ್ಪಿಕೊಂಡ ಸಮಾಜವಾದವನ್ನವರು ಕೈಬಿಡುವವರಲ್ಲೆಂದು ನಂಬಬಹುದಾಗಿತ್ತು.

ಮೇಲಾಗಿ ಆಟಿ ಶಾಂತ ಪ್ರಕೃತಿಯವರು,

ಸ್ಥಿರವಾದ ವ್ಯಕ್ತಿತ್ವವುಳ್ಳವರು. ಆಗ ಕಾರ್ಮಿಕ ಪಕ್ಷದ ಇಬ್ಬರು ಪ್ರಮುಖರಾದ ಹರ್ಬರ್ಟ್ ಮಾರಿಸನ್ ಮತ್ತು ಆರ್ಥರ್ ಗ್ರೀನ್‌ವುಡ್ ಒಬ್ಬರೊಬ್ಬರನ್ನು ಕೊಲೆಗಡಿಯುವಷ್ಟು ದ್ವೇಷಿಸುತ್ತಿದ್ದುದರಿಂದ ವಿನಯಶೀಲ ಆಟ್ಲಿ ಮಧ್ಯದಲ್ಲಿ ನಿಂತು ತಮ್ಮ ನಾಯಕತ್ವವನ್ನು ಕಾಪಾಡಿಕೊಳ್ಳ ಬಲ್ಲವರಾದರು.

೧೯೪೦ ರಲ್ಲಿ ಬ್ರಿಟನ್ನಿಗೆ ಯುದ್ಧದಲ್ಲಿ ಸೋಲಾಗುತ್ತಿದ್ದಾಗ ಚರ್ಚಿಲ್ಲರು ಪ್ರಧಾನ ಮಂತ್ರಿತ್ವ ವಹಿಸಿ ಸಕಲ ಪಕ್ಷೀಯ ಸರಕಾರ ಸ್ಥಾಪಿಸಿದರು. ಅದರಲ್ಲಿ ಆಟ್ಲಿಯವರಿಗೆ ಉಪ ಪ್ರಧಾನಿ ಪದ ದೊರೆಯಿತು. ಈ ಪದದಲ್ಲಿ ಅವರು ಅನೇಕ ಶಾಖೆಗಳ ಕಾರ್ಯವನ್ನು ಬಲು ದಕ್ಷತೆಯಿಂದ ನಿರ್ವಹಿಸಿದರು. ಚರ್ಚಿಲ್ಲರು ವಿದೇಶ ನೀತಿ, ಯುದ್ಧದ ಮಹಾ ಗತ್ತುಗಳನ್ನಷ್ಟೇ ರೇಖಿಸುವವರಾಗಿದ್ದರು. ಆದರೆ ಒಳ ಆಡಳಿತ ಮುಖ್ಯವಾಗಿ ಆಟ್ಲಿಯವರ ಹತ್ತಿರವೇ ಇತ್ತು. ಪ್ರತಿಯೊಂದನ್ನೂ ವಿವರವಾಗಿ ಅಭ್ಯಸಿಸುವ ಆಟ್ಲಿಯವರು ಈ ಕಾರ್ಯಕ್ಕೆ ಅತ್ಯಂತ ಯೋಗ್ಯರಾಗಿದ್ದರು.

ಯುದ್ಧ ಮುಗಿದ ನಂತರ ಚುನಾವಣೆಗಳಲ್ಲಿ ಆಟ್ಲಿಯವರ ಪಕ್ಷ ಕಾನ್ಸರ್ವೇಟಿವರಿಗಿಂತ ಇಮ್ಮಡಿ ಸ್ಥಳಗಳನ್ನು ಗೆದ್ದು ಅಧಿಕಾರಕ್ಕೆ ಬಂತು. ೨೩ ರ ತಾರುಣ್ಯದಿಂದ ತಾವು ನಂಬಿದ್ದ ತತ್ವಗಳನ್ನು ಕೃತಿಗಿಳಿಸಲು ಇದು ತಕ್ಕ ಸಂದರ್ಭವಾಗಿತ್ತು. ಬ್ರಿಟಿಶ್ ಜನತೆಯ ಜೀವನವನ್ನು ಕಷ್ಟದಿಂದ ದೂರವಾಗಿರಿಸಲು, ಶೋಷಣೆಯಿಂದ ಮುಕ್ತವಾಗಿರಿಸಲು ಸಮಾಜವಾದದ ಕ್ರಮಗಳನ್ನು ಅವರು ಜಾರಿಗೆ ತಂದರು.

ಅಟ್ಲಿಯವರಿಗೆ ಭಾರತದ ಸಮಸ್ಯೆ ಸಾಕಷ್ಟು ಪರಿಚಿತವಾದುದಿತ್ತು. ಅವರು ಸೈಮನ್ ಕಮಿ-ಶನ್ನಿನ ಸದಸ್ಯರಾಗಿ ಭಾರತಕ್ಕೆ ಬಂದಿದ್ದರು. ಆದ್ದರಿಂದ ಅವರು ಅಧಿಕಾರಕ್ಕೆ ಬಂದೊಡನೆ ಭಾರತಕ್ಕೆ ಸ್ವಾತಂತ್ರ್ಯ ಕೊಡಲನುವಾದರು. ಭಾರತ, ಬರ್ಮಾ, ಸಿಂಹಳಗಳಿಗೆ ಸ್ವಾತಂತ್ರ್ಯ-ವನ್ನಲ್ಲದೆ ಮಲಯ, ಪೂರ್ವಾಫ್ರಿಕ, ಗೋಲ್ಡ್ ಕೋಸ್ಟ್‌ಗಳಿಗೆ ಅವರು ಮತಾಧಿಕಾರವನ್ನೂ ನೀಡಿದರು. ಅವುಗಳಲ್ಲಿ ಎರಡು ಇಂದು ಸ್ವತಂತ್ರವಾಗಿವೆ; ಪೂರ್ವ ಆಫ್ರಿಕ ಆ ದಾರಿಯಲ್ಲಿ ಬಹಳ ಮುಂದೆ ಸಾಗಿದೆ.

೧೯೪೫ ರಲ್ಲಿ ಅಧಿಕಾರಕ್ಕೆ ಬಂದ ಬ್ರಿಟಿಶ ಕಾರ್ಮಿಕ ಪಕ್ಷ ೧೯೫೦ ರ ಚುನಾವಣೆಯಲ್ಲಿಯೂ ಆರಿಸಿ ಬಂದರೂ ಅದರ ಬಹುಮತ ಬಹಳ "ಕಟಾನುಕಟಿ"ಯಾಯಿತು. ಹದಿನೆಂಟೇ ತಿಂಗಳ ನಂತರ ಅದು ಮತ್ತೊಂದು ಚುನಾವಣೆಯಲ್ಲಿ ಅಧಿಕಾರ ಕಳೆದುಕೊಂಡಿತು. ಆಟ್ಲಿಯವರ ನಾಯಕತ್ವದಲ್ಲಿ ಬ್ರಿಟಿಶ್ "ಪ್ರಸ್ಥ" ಇಳಿಯಿತೆಂದೂ ಜನರಿಗೆ ಸಮಾಜವಾದವು ನಿರೀಕ್ಷಿಸಿದಷ್ಟು ಸುಖ ತರಲಿಲ್ಲೆಂದೂ ಈ ಸೋಲಿಗೆ ಅರ್ಥ ಹಚ್ಚಲಾಗಿದೆ. ಅದು ಹೇಗೇ ಇದ್ದರೂ ಅವರು ತಂದ ಕ್ರಾಂತಿಕಾರಿ ಬದಲಾವಣೆ ಬ್ರಿಟಿಶ್ ಸಮಾಜದಲ್ಲಿ ಅಳಿಯದ ಪರಿಣಾಮ ಮಾಡಿದೆ.

ಆಟ್ಲಿಯವರು ವೃತ್ತಿಯಲ್ಲಿ ಬಲು ವಿನಯವಂತರು. ಆದರೆ ಇದು ಅವರ ಅಪಧೈರ್ಯದ ಕುರುಹಲ್ಲ. ಅವರಲ್ಲಿ ಪರಮಾವಧಿ ಆತ್ಮವಿಶ್ವಾಸವಿದೆ. ಆತ್ಮವಿಶ್ವಾಸದ ದೆಸೆಯಿಂದಲೇ ಅವರು ತಮ್ಮೊಡನೆ ನಾಯಕತ್ವಕ್ಕಾಗಿ ಹೋರಾಡಬಹುದಾದ ಜನರು ತಂತಮ್ಮೊಳಗೆ ಹೋರಾಡುವುದನ್ನು ನೋಡುತ್ತ ನಿಶ್ಚಿಂತೆಯಿಂದ ಸುಮ್ಮನಿರುತ್ತಿದ್ದರು. ಇಬ್ಬರೂ ಸೋತು ತಮ್ಮ ಕಡೆ ಬರುವ ದಿನವಿದೆಯೆಂದು ಅವರಿಗೆ ಖಾತ್ರಿಯಿತ್ತು.

ಅವರ ಆತ್ಮವಿಶ್ವಾಸಕ್ಕೊಂದು ಆಧಾರವಿದೆ. ಅವರಿಗೆ ತಮ್ಮ ಕೊರತೆಗಳೇನೆಂದು ಗೊತ್ತಿದೆ. ತಮಗೆ ಪ್ರತ್ಯಕ್ಷ ಪರಿಚಯವಿರದ ವಿಷಯವನ್ನು ಕಲ್ಪನಾಬಲದಿಂದ ಅರಿತುಕೊಳ್ಳುವ ಸಾಮರ್ಥ್ಯ ತಮಗಿಲ್ಲವೆಂದು ಬಲ್ಲ ಅವರು ತಮಗೆ ಗೊತ್ತಿದ್ದ ಸಂಗತಿಗಳಲ್ಲಷ್ಟೇ ವ್ಯವಹರಿಸುತ್ತಾರೆ. ಭಾರತ, ಬರ್ಮಾ ತಮಗೆ ಗೊತ್ತು; ಆದ್ದರಿಂದ ಅವುಗಳಿಗೆ ಸ್ವಾತಂತ್ರ್ಯವೀಯಲು ಧೈರ್ಯಮಾಡಿದರು.

## ಇಂದಿನ ಮನೆಗಳಲ್ಲಿ ಸರ್ಫ್...






## "ನಾನು ಕಾಣಲು ಬಯಸುವ ಹೊಸ ಕ್ರಮ..."

ಎಂದು ಮುಂಬಯಿಯ ಸಮಾಜ ಸೇವಿಕಾ ಶ್ರೀಮತಿ ನೊರೀನ್ ಅಮೋಲಿಕ್ ಹೇಳುತ್ತಾರೆ.

'ನಾನು ಕಾಣಲು ಬಯಸುವ ಹೊಸ ಕ್ರಮ ಮನೆಗಳಿಗೆ ಅನ್ವಯಿಸುತ್ತದೆ.' ಎಂದು ಸಮಾಜ ಸೇವಿಕಾ ಶ್ರೀಮತಿ ನೊರೀನ್ ಅಮೋಲಿಕ್ ಹೇಳುತ್ತಾರೆ. 'ಉದಾಹರಣೆಗೆ ಸರ್ಫನ್ನೆ ತೆಗೆದುಕೊಳ್ಳಿರಿ. ನಾನು ಸಂದರ್ಶಿಸಿದ ಅನೇಕ ಮನೆಗಳಲ್ಲಿ ಅದು ಪ್ರಗತಿಯ ಪ್ರತೀಕವಾಗಿದೆ. ಸೀರೆಗಳು, ಷರ್ಟುಗಳು ಇತ್ಯಾದಿ ಮನೆಯ ಎಲ್ಲ ಬಟ್ಟೆಗಳನ್ನು ಸರ್ಫ್ ಚೆನ್ನಾಗಿ, ಬೆಳ್ಳಗೆ ಒಗೆಯುತ್ತದೆ.' ಆಧುನಿಕ ಗೃಹಿಣಿಯರು ಒಪ್ಪುತ್ತಾರೆ—ಸರ್ಫ್ ಬಟ್ಟೆಗಳಿಗೆ ಅನುಪಮ ಬಿಳುಪು ಬರುವಂತೆ ಒಗೆಯುತ್ತದೆ, ಎಂದು. ನಿಮ್ಮ ಮನೆಯಲ್ಲಿಯೂ ಸರ್ಫನ್ನು ಏಕೆ ಉಪಯೋಗಿಸಬಾರದು?

**ಸರ್ಫ್ ನಿಮ್ಮ ಬಟ್ಟೆಗಳಿಗೆ**

**ಅನುಪಮ ಬಿಳುಪು ಬರುವಂತೆ ಒಗೆಯುತ್ತದೆ**

ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

SU. 17-X29 KN

ಆಫ್ರಿಕ ಅವರಿಗೆ ಅಪರಿಚಿತ. ಆದ್ದರಿಂದ ಅದರ ವಿಷಯ ಅವರು ಮುಂದೋಡಲಿಲ್ಲ.

ಸುಮ್ಮನೆ ಕುಳಿತಾಗ ಕಾಗದದ ಮೇಲೆ ಗೀಚುವ ಅಭ್ಯಾಸವೊಂದು ಅವರಿಗಿದೆ. ಪಾರ್ಲಿಮೆಂಟಿನಲ್ಲಿ ಭಾಷಣಗಳು ನಡೆಯುತ್ತಿರುವಾಗ ಅವರು ಶಾಂತವಾಗಿ ಗೀಚುತ್ತ ಕೂಡ್ರುತ್ತಿದ್ದರು. ಕೆಲವೇಳೆ ಅವರು ಹಲವು ಬಣ್ಣಗಳ ಪೆನ್ಸಿಲುಗಳಿಂದ ಗೀಚುತ್ತಾರೆ. ಆದರೆ ಗೀಚಿದ ಆಕೃತಿಗಳೆಲ್ಲ ವ್ಯವಸ್ಥಿತವಾದವುಗಳು. ವ್ಯವಸ್ಥಿತಚಿತ್ತವೊಂದು ಯೋಚನೆಯಲ್ಲಿದೆಯೆಂದು ಅದು ತೋರಿಸುತ್ತದೆ. ಅವರು ನಾಯಕತ್ವದಿಂದ ನಿವೃತ್ತರಾದ ಮೇಲೆ ತಮ್ಮ ಆತ್ಮಕಥೆಯನ್ನು ಬರೆದರು. ಚರ್ಚಿಲ್ಲರ ಆತ್ಮಕಥೆಯ ವೈಖರಿಯಲ್ಲಿ ಒಂದಂಶವೂ ಅದರಲ್ಲಿಲ್ಲ. ಆದರೆ ನಿರ್ವಿಶೇಷವಾದರೂ ವ್ಯವಸ್ಥಿತ, ನಿಶ್ಚಿತ ಬುದ್ಧಿಯೊಂದು ಇದ್ದದ್ದನ್ನು ಇದ್ದಂತೆ ಹೇಳುವ ಕಥೆ ಅದು. ನೀವು ಅದರಿಂದ ತಮಾಷೆ ಹೊಂದಲಾರಿರಿ; ಬಹಳ ಕಲಿಯಬಲ್ಲಿರಿ.

ಆಟ್ಲಿಯವರಿಗೆ ಮಾತು ಕಡಿಮೆ. ಭಾಷಣಗಳೂ ಚುಟುಕು. ಒಮ್ಮೆ ಅವರು ಒಬ್ಬ ಮಂತ್ರಿಯನ್ನು ಎರಡೇ ಶಬ್ದ ಹೇಳಿ ಕೆಲಸದಿಂದ ತೆಗೆದಿದ್ದರಂತೆ.

ಎಪ್ಪತ್ತು ದಾಟಿದ ಮೇಲೆ ೧೯೫೫ರಲ್ಲಿ ಅವರು ಕಾರ್ಮಿಕ ಪಕ್ಷದ ನಾಯಕತ್ವದಿಂದ ನಿವೃತ್ತರಾದರು. ಅನಂತರ ಅವರನ್ನು ಲಾರ್ಡ್ಸ್ ಪದವಿಗೇರಿಸಿ ರಾಣಿ ಗೌರವಿಸಿದಳು. ಆದರೆ ನಾಲ್ಕು ಮಕ್ಕಳ ತಂದೆಯಾದ ಈ ಮುತ್ಸದ್ದಿ ರಾಜಕಾರಣದಲ್ಲಿ ಆಸ್ಥೆ ಕಳೆದುಕೊಂಡಿಲ್ಲ. ಅವರು ತುಂಬ ದೇಶಾಟನೆ ಮಾಡಿದ್ದಾರೆ. ಈಚೆಗೆ ಅವರು ಭಾರತಕ್ಕೆ ಬಂದುಹೋದರು. *



## ಬ್ರಹ್ಮನ ಮಕ್ಕಳು

"ಸ್ವಪ್ನ" ಮತ್ತು "ಯಥಾರ್ಥ" ಇವುಗಳೆರಡೂ ಬ್ರಹ್ಮನ ಪ್ರೀತಿಯ ಮಕ್ಕಳು. ಒಂದು ದಿನ ಇವು ಎರಡರ ನಡುವೆ ಜಗಳ ಉಂಟಾಯಿತು. ಎರಡೂ ತಂದೆಯ ಬಳಿಗೆ ಹೋಗಿ "ಅಪ್ಪಾ, ನಮ್ಮಿಬ್ಬರಲ್ಲಿ ಯಾರ ಮಹಿಮೆ ಅಧಿಕವಾದುದು ಎಂದು ಇಂದು ನಿರ್ಣಯವಾಗಬೇಕಾಗಿದೆ" ಎಂದು ಹೇಳಿದುವು. ಬ್ರಹ್ಮ ಮಕ್ಕಳ ಮೂಢತನಕ್ಕಾಗಿ ಮುಗುಳು ನಕ್ಕು ಹೇಳಿದ "ನೆಲದ ಮೇಲೆ ನಿಂತುಕೊಂಡೇ ಯಾರು ಆಕಾಶವನ್ನು ಮುಟ್ಟುತ್ತಾನೋ ಅವನ ಮಹಿಮೆ ಅಧಿಕವಾದುದು" ಎಂದು. ಎರಡೂ ಈ ಪರೀಕ್ಷೆಗಾಗಿ ಉತ್ಸುಕಗಳಾದವು. "ಸ್ವಪ್ನ"ವು ಆಕಾಶವನ್ನೇನೋ ಮುಟ್ಟಿತು. ಆದರೆ ಅದರ ಕಾಲುಗಳು ನೆಲದ ವರೆಗೆ ತಲುಪಲು ಶಕ್ತವಾಗಲೇ ಇಲ್ಲ. ಅದಕ್ಕೆ ಬಹಳ ನಿರಾಶೆಯಾಯಿತು. ಈಗ 'ಯಥಾರ್ಥ'ದ ಸರದಿ ಬಂದಿತು. ನೆಲದ ಮೇಲೇನೋ ಅದು ಸ್ಥಿರವಾಗಿ ನಿಂತಿತು. ಆದರೆ ಸಾವಿರಾರು ಬಾರಿ ಹಾರಿದರೂ ಅದು ಆಕಾಶಕ್ಕೆ ತಲುಪಲಿಲ್ಲ. ಎರಡರ ಈ ವಿಫಲ ಪ್ರಯಾಸವನ್ನು ನೋಡಿ ಬ್ರಹ್ಮನು ನಕ್ಕು ಹೇಳಿದ "ನೋಡಿದಿರಲ್ಲವೇ, ನಿಮ್ಮ ಮಹಿಮೆಯು ಒಂದು ಇನ್ನೊಂದಕ್ಕೆ ಪೂರಕವಾಗಿ ಇರುವುದರಲ್ಲೇ ಇದೆಯಲ್ಲದೆ ಒಂದೇ ಆಗಿ ಇರುವುದರಲ್ಲಿ ಇಲ್ಲ."

ಸಂಗ್ರಹ: ಎಂ. ಗೋಪಾಲ ಕೃಷ್ಣ ಭಟ್ಟ.

# ಲೈಫ್‌ಬಾಯ್ ಎಲ್ಲಿದೆಯೋ ಅಲ್ಲಿದೆ ಆರೋಗ್ಯ!

ಲೈಫ್‌ಬಾಯ್‌ಯಿಂದ ಸ್ನಾನಮಾಡುವಾಗ ಉಂಟಾಗುವ ಆನಂದವೇ ಆನಂದ! ಮೈಗೆ ನಿರ್ಮಲತೆ, ಮನಸ್ಸಿಗೆ ಉಲ್ಲಾಸ. ಮೈಕೈಗಳಲ್ಲಿ ಕೊಳೆಯಾಗುವುದನ್ನು ತಪ್ಪಿಸುವುದಕ್ಕೆ ಯಾರಿಗೂ ಸಾಧ್ಯವಿಲ್ಲ. ಲೈಫ್‌ಬಾಯ್‌ಯ ಸಮೃದ್ಧ ನೊರೆ ಕೊಳೆಯಲ್ಲಿರುವ ಕ್ರಿಮಿಗಳನ್ನು ತೊಳೆದು ತೆಗೆದು ನಿಮ್ಮ ಆರೋಗ್ಯವನ್ನು ರಕ್ಷಿಸುತ್ತದೆ.
ಲೈಫ್‌ಬಾಯ್‌ಯಿಂದ ಮನೆಯವರೆಲ್ಲರು ಆರೋಗ್ಯವಂತರಾಗಿರುತ್ತಾರೆ.




ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

L 17-X29 KN

ಮೋಜಿನ ಕಥೆ—ಆದರೆ ವಿಷಾದ ರೇಖೆಯೊಡನೆ !

# ಹೊಸ ಗೆಳೆಯ




ಟಿ. ಎಸ್. ಕೃಷ್ಣರಾವ್

ನನ್ನನ್ನು ಗುಮ್ಮಣ್ಣಗುಸಕ ಎಂದು ಕರೀತಾರೆ. ಈ ಹೆಸರು ಕೊಟ್ಟವರು ಮತ್ಯಾರೂ ಅಲ್ಲ. ನನ್ನ ಗೆಳೆಯರೇ. ಅವರ ಹೆಸರುಗಳೂ ಹಾಗೆಯೇ ಇವೆ. ಒಬ್ಬನ ಹೆಸರು ಗೆಂಡೆಪುಟ್ಟ- ಒಳ್ಳೆಗಡ್ಡೆ ಗೆಣಸಿನ ಹಾಗೆ ಗಟ್ಟಿಗಟ್ಟಾಗಿ ಪುಟ್ಟಪುಟ್ಟದಾಗಿದ್ದ. ಇನ್ನೊಬ್ಬನ ಹೆಸರು ಹಸಿರು ಬದಾಮಿ. ಬಾದಾಮಿಯಂತೆ ಊದಿದ್ದ ತನ್ನ ಹೊಟ್ಟೆಯ ಮೇಲೆ ಯಾವಾಗಲೂ ಹಸಿರು ಬುಷ್‌ಕೋಟ್ ಹಾಕಿರುತ್ತಿದ್ದ. ಮತ್ತೊಬ್ಬನ ಹೆಸರು ಭಟ್ಟಿದೇವ ಅಂತ. ಎಂತಹ ಕಚಡ ಕಾಫೀಪುಡಿ ಕೊಟ್ಟರೂ ಸೊಗಸಾದ ಕಾಫೀ ಭಟ್ಟಿ ಇಳಿಸಿ ಕೊಡುತ್ತಿದ್ದ. ಮಗದೊಬ್ಬನ ಹೆಸರು ಷಾಕೋತ್ತಮ; ಅವನ ನಿಜವಾದ ಹೆಸರು ಪುರುಷೋತ್ತಮ. ಆದರೆ ಅವನ ಕಿಡಿಮಾತುಗಳು ಎಂತಹವರಿಗೂ 'ಷಾಕ್' ಕೊಡುತ್ತಿದ್ದವು. ಹೀಗೆ ಇತ್ಯಾದಿ.. ಇತ್ಯಾದಿ. ಅಂದಮೇಲೆ ನನಗೆ 'ಗುಗು' ಅಂತ ಹೆಸರು ಬಂದಿದ್ದ್ಯಾಕೆ ಅಂತ ನಾನು ಹೇಳಲೇ ಬೇಕಾದ್ದಿಲ್ಲ.

ಆದರೆ ನಿಜವಾಗಿಯೂ ನಾನು ಗುಗು ಅಲ್ಲ. (ಗುಗ್ಗು ಹೌದೇನೋ ಗೊತ್ತಿಲ್ಲ). ಹಾಗೆ ತಿಳಿದುಕೊಂಡಿರುವವರಿಗೇ ಆ ಹೆಸರು ಒಪ್ಪುತ್ತೇ ಅಂತ ಎದೆ (ಮೂಳೆ ಮೂಳೆ ಬಿಟ್ಟುಕೊಂಡಿದೆ) ತಟ್ಟಿಕೊಂಡು ಹೇಳುತ್ತೇನೆ. ಜನ ಕಂಡರೆ ನನಗೆ ಬಹಳ ಆಸೆ. ಎಲ್ಲಾದರೂ ಒಂದು ಗುಂಪು ಕಂಡರೆ ಅದರಲ್ಲಿ ಹೇಗೋ ನುಸುಳಿರುತ್ತೇನೆ. ಇದಕ್ಕೆ ನನ್ನ ಗಿಡ್ಡನೆಯ ಆಕೃತಿಯೇ ಸಹಕಾರಿ. ಗುಂಪಿನಲ್ಲಿ ಸೇರಿದ ಮೇಲೆ ನನ್ನ ರೀತೀನೆ ಬೇರೆ. ಗುಂಪು ಹ್ಯಾಗೋ, ಹಾಗೆ ನಾನೂನು. ಹೆಚ್ಚಿಗೆ ಜನ ನಗುತ್ತಿದ್ದರೆ ನಾನೂ ನಗುತ್ತೇನೆ. ಮುಂದಿನ ಮನೆ ಹರಿ (ದ ಪಂಚೆ) ರಾಯರ ವಿಷಯ ಮಾತಾ

ಅಲಿವರ್ ಗೋಲ್ಡ್‌ಸ್ಮಿತ್ತನ ಕಥೆಯನ್ನಾಧರಿಸಿ

ಡುತ್ತಾ ಇದ್ದರೆ ನಾನೂ ಏನಾದರೂ ಹೇಳೋದು ಅಥವಾ ಬಿಳೀ ಟೋಪಿಗಳನ್ನು ನೋಡಿದರೆ ಕಾಂಗ್ರೆಸ್ಸೇ ಸರಿ ಅನ್ನೋದು, ಕಾವಿ ಟೋಪಿಗಳನ್ನು ನೋಡಿದರೆ ಅಶೋಕ ಮೇಹ್ತಾನ ಹೊಗಳೋದು. ಅಂತೂ ಎಲ್ಲರಿಗೂ ಬೇಕಾದವ ಎನ್ನಿಸಿಕೊಳ್ಳುವುದಕ್ಕೆ ಏನೇನು ಮಾಡಬೇಕೋ ಅವೆಲ್ಲಾ ಕರಾಮತ್ತೂ (ಇದು ಮರಾಮತ್ತು ಮಂತ್ರಿ ಶಾಖೆಗಿಂತ ಮಿಗಿಲಾದದ್ದು) ನನ್ನ ಹತ್ತಿರ ಉಂಟು. ಬಹಳ ಜನ ನನಗೆ ಪರಿಚಯ ಇರೋದಕ್ಕೆ ಇದೇ ಕಾರಣ. ಯಾವ ಬೀದಿಗೆ ಹೋದರೂ "ಹೋ.. ಹೋ.. ನಮಸ್ಕಾರ", "ಹ್ಹ.. ಹ್ಹ...ಬೆಳಗಾಯ್ತೇ!", . "ಹ್ಹಿ..ಹ್ಹಿ ಹೊರಟಿದ್ದೀರೀ ಅಂತ ಕಾಣುತ್ತೆ" ಇತ್ಯಾದಿ ಕೇಳುವವರು, ಮುಖನೋಡಿ ಹಲ್ಕಿಸಿಯುವವರು, ಹಸುವಿನ್ಮುಖಿಯಾಗಿ ತಮ್ಮ ಬಾಯಿಯು ಕಿವಿಗಳನ್ನು ಮುಟ್ಟುವಂತೆ ಹಸಿ ಹಸಿಯಾಗಿ ನಗುವವರು ನನಗೆ ಸಿಕ್ಕೇ ಸಿಗುತ್ತಾರೆ. ಇಂತಹ ಸ್ನೇಹಿತರ ಸೇನೆ ನಮ್ಮ ಭಾರತೀಯ ಸೇನೆಯನ್ನೂ ಸಂಖ್ಯೆಯಲ್ಲಿ ಮೀರಿಸಿರಬಹುದು. ಆದರೆ ಸುಂದರರಾಯ (ನಿಜವಾದ ಹೆಸರು ಬೇರೆ, ನಿಮಗೆ ಹೇಳುವುದಲ್ಲ) ಆ ಜಾತಿಗೆ ಸೇರಿದವನಲ್ಲ. ನನಗೆ ನಿಜವಾದ ಗೆಳೆಯ ಅವನು. ಎಂತಹ ಸಮಯದಲ್ಲೂ ಕೈಬಿಡದೆ ನನಗೆ ಸಹಾಯ ಮಾಡಿದ್ದಾನೆ. ಮದುವೆ ಮಂಟಪದಲ್ಲೂ, ಹೆಂಡತಿಯಾಗುವವಳ ಕೈಹಿಡಿಯುವ ಬದಲು ನನ್ನ ಕೈ ಹಿಡಿದಿದ್ದ. ಆ ಮೇಲೆ ಪುರೋಹಿತರು ಮಂತ್ರ ಹೇಳಿ ಬಿಡಿಸಬೇಕಾಯಿತು.

ಪ್ರತಿನಿತ್ಯ ನಾನೂ ಅವನೂ ಸಂಜೆಗೆ ತಿರುಗಾಡುವುದಕ್ಕೆ ಹೋಗುವ ವಾಡಿಕೆ. ನಾವಿಬ್ಬರೂ ಸೇರಿಬಿಟ್ಟರೆ ಹರಟೆಗೆ ಹದ್ದು (ಪಕ್ಷಿಯಲ್ಲ) ಮೇರೆ ಇರುತ್ತಿರಲಿಲ್ಲ. ಆಚೆ ಮನೆ ಆರುಮೊಗಂ ಲೋಕನಾದನ ಕಂತ್ರಿ ನಾಯಿಮರಿ ಬಾಲದ ವಿಷಯದಿಂದ ಹಿಡಿದು, ಕ್ರುಶ್ಚೋವನ ಕುತಂತ್ರದವರೆಗೂ ನಮ್ಮ ಚರ್ಚಾಟೆ* ನಡೆಯುತ್ತಿತ್ತು. ಅವರಿವರಲ್ಲಿ ಇರುವ, ಇಲ್ಲದಿರುವ ಎಲ್ಲ ಗುಣಗಳನ್ನೂ ಜಾಲಾಡಿ ಬಿಡುತ್ತಿದ್ದೆವು. ಇಷ್ಟೆಲ್ಲಾ ಹೇಳದಿದ್ದರೆ ನಿಮಗೆ ನನ್ನ ಮತ್ತು ಸುಂದರರಾಯನ ವಿಷಯ ಏನೂ ಗೊತ್ತಾಗೋದಿಲ್ಲ.

ಆವತ್ತು ಭಾನುವಾರ. ಸಾಯಂಕಾಲ. ಮಳೆ ಮೋಡದ ಸುಳಿವಿಲ್ಲ. ಬಿರುಗಾಳಿಯ ಭರವಿಲ್ಲ. ಹವಾ ಹಿತಕರವಾಗಿತ್ತು. ಅಂತಹ ಹೊತ್ತಿನಲ್ಲಿ ಹೊರಗಡೆ ಹೋಗದೆ ಮನೆಯೊಳಗೆ ಕುಳಿತಿರಲು ಜಡಭರತನಿಗೂ ಭಾರವಾಗುತ್ತಿತ್ತೋ ಏನೋ ನಾ ಕಾಣೆ. ಸುಂದರರಾಯ ಸುಂದರವಾಗಿ ಪೋಷಾಕು ಧರಿಸಿ ಐದು ಘಂಟೆಗೆ ಸರಿಯಾಗಿ ಹಾಜರಾದ. ಸರಿ ಹೊರಟೆವು ಗಾಳಿಸವಾರಿಗೆ. ಕೆರೆ ಏರಿ ಮೇಲೆ ಹೋಗಬೇಕೆಂದು ಸುಂದರರಾಯನ ಮೊರೆ. ಜನಜಂಗುಳಿ ಬೇಕಾದ ನಾನು ಅದಕ್ಕೆ ಪೂರ್ತಿ ಒಪ್ಪದೆ, ದೊಡ್ಡ ರಸ್ತೆಯ ಮೂಲಕ ಸ್ವಲ್ಪ ದೂರ ಹೋಗಿ ನಂತರ ಕೆರೆ ಕಡೆಗೆ ತಿರುಗಬಹುದೆಂದು ಸೂಚಿಸಿದೆ. ಸೂಚನೆ ಅಂಗೀಕಾರವಾಯಿತು.

ದೊಡ್ಡ ರಸ್ತೆ ಎಂದ ಮೇಲೆ ಅದರ ಬಗ್ಗೆ ನಾನು ಹೆಚ್ಚಿಗೆ ಹೇಳಬೇಕಾದುದೇನಿಲ್ಲ. ಸಮಸ್ತ ರೀತಿಯ ಜನಸ್ತೋಮವನ್ನು ನಾವಲ್ಲಿ ಕಾಣಬಹುದು. ಚಮ್ಮಾರ, ಸಾಹುಕಾರ; ಬಡವ, ಬೇಡುವವ; ಪತ್ರಿಕೆಯುವ, ಓಟಿಯುವ; ಕರಿಯ, ಕೊರಿಯ; ಹಣ್ಣು, ಹೆಣ್ಣು, ಮಣ್ಣು, ಹೊನ್ನು ಎಲ್ಲಾ! ಏನೇನು ಕಲ್ಪನೆಗೆ ಸಿಗಬಹುದೋ ಅವೆಲ್ಲಾ. ಕಾದಂಬರಿಕಾರನಿಗೆ ಸಾಮಗ್ರಿಗೆ ಕೊರತೆಯೇ ಇಲ್ಲ. ಅದನ್ನು ಗ್ರಹಿಸುವ ಕಣ್ಣೊಂದಿದ್ದರೆ ಸಾಕು. ಈ ಸೂಕ್ಷ್ಮಗ್ರಾಹಿ ಕಣ್ಣು ಅಗಲವಾಗಿ ತೆಗೆದಿರಬೇಕು. ಆದರೆ ಧೂಳು ಸೇರುವುದಕ್ಕೆ ಅವಕಾಶ ಕೊಡಬಾರದು. ನನ್ನ ಗೆಳೆಯ

* Chit Chat ಅನ್ನುವುದರ ಭಾವಾನುವಾದ

ಸುಂದರರಾಯ, ಕಾದಂಬರಿಕಾರನಲ್ಲದಿದ್ದರೂ ಸೂಕ್ಷ್ಮಗ್ರಾಹಿ. ಯಾವ ಕಿಂಚಿತ್ ವಿಷಯವೂ ಅವನ್ ಗಮನ ತಪ್ಪಿಸಿ ಹೋಗುವುದಕ್ಕಾಗುತ್ತಿರಲಿಲ್ಲ. ನಮ್ಮ ಗೆಳೆಯರ ಗುಂಪಿಗೆ ಅವನೊಬ್ಬ ಷೆರ್‌ಲಾಕ್ ಹೋಮ್ಸ್ ಇದ್ದಂತೆ.

"ನೋಡೋ ಈ ಕಡೆ, ಯಾರೋ ನಮ್ಕಡೇಗೆ ಬರ್‍ತಾ ಇರೋ ಹಾಗಿದೆ" ಎಂದ ಸುಂದರರಾಯ ನನ್ನ ಭುಜ ಜಗ್ಗಿಸಿ.

ತಿರುಗಿ ನೋಡಿದೆ. ಹೌದು, ತುಸು ದೂರದಲ್ಲೊಂದು ವ್ಯಕ್ತಿ ನಮ್ಮ ಕಡೆಗೇ ಧಾವಿಸಿತ್ತು.

"ಸುಂದ್ರು, ನಿನ್ನ ಕೈಕೊಡಿಲ್ಲಿ. ನಾನು ಎಳೆದ ಕಡೆ, ದನ ಬಂದಂತೆ ಬಾ. ಆಮೇಲೆ ವಿವರ" ಎಂದವನೆ ಸುಂದರರಾಯನನ್ನು ಎಳೆದುಕೊಂಡು ಎಡಗಡೆಯಿದ್ದ ಸಂದಿಯೊಂದರಲ್ಲಿ ನುಗ್ಗಿದೆ. ಆದರೆ ಆ ವ್ಯಕ್ತಿ ನಮ್ಮನ್ನು ಹಿಡಿಯಲೇಬೇಕೆಂದು ನಿರ್ಧರಿಸಿದ್ದಂತೆ ತೋರಿತು. ಆತನ ಚಪ್ಪಲಿಯ ಪಟಪಟ ಶಬ್ದ ಜೋರು ಜೋರಾಗುತ್ತ ಬಂತು. ರಾತ್ರಿಯಲ್ಲಿ ದೀಪವಿಲ್ಲದೆ ಹೋಗುತ್ತಿದ್ದ ಸೈಕಲ್ ಸವಾರ, ಪೋಲೀಸನನ್ನು ಕಂಡಂತಾಗಿತ್ತು ನನ್ನ ಸ್ಥಿತಿ. ಪಾಪ, ಸುಂದರರಾಯ ನಳನ ಜೊತೆ ಅಲೆದ ದಮಯಂತಿಯಂತಿದ್ದ. ಅವನ ಕೈ ಇನ್ನೂ ನನ್ನ ಕೈಯಲ್ಲೇ ಇತ್ತು. ಎಷ್ಟೊತ್ತು ಹಾಗೆ ಓಡಿದೆವೋ ತಿಳಿಯಲಿಲ್ಲ. ತುಸು ಭಾರ ದೇಹಿಯಾದ ಸುಂದರರಾಯ "ನನಗಿನ್ನು ಓಡಕ್ಕಾಗೋಲಪ್ಪ" ಅಂತ ತಟಸ್ಥನಾಗಿ ನಿಂತೇಬಿಟ್ಟ. ನಮ್ಮ ಕೈಗಳ ಸಂಬಂಧದಿಂದ ನಾನೂ ನಿಲ್ಲಲೇಬೇಕಾಯಿತು. ಧೈರ್ಯ ಮಾಡಿ ಹಿಂತಿರುಗಿ ನೋಡಿದೆ.

"ಏನೋ, ಎಲ್ಲಡಗಿಕೊಂಡಿದ್ದೆ ಇಷ್ಟು ದಿವಸ? ಮದುವೆಯಾದ್ದೆ ಕಾರಣ ಮಾಡಿಕೊಂಡು ಸ್ನೇಹಿತರನ್ನೆಲ್ಲಾ ಮರೆತುಬಿಡೋದೆ!" ಎನ್ನುತ್ತಾ, ಆ ಹಿಂಬಾಲಿಸಿದ ವ್ಯಕ್ತಿ ನನ್ನ ಬಿಡುವಾಗಿದ್ದ ಕೈಯನ್ನು ಹಿಡಿದು ಕುಲುಕಿಸಿತ್ತು. ಆ ಕುಲುಕಾಟಕ್ಕೆ ನನ್ನ ಮೈಯೆಲ್ಲಾ ಕಲಕಿ ಹೋಯಿತು.

"ಹೌದಪ್ಪ, ಏನು ಮಾಡಲಿ? ಕೈಲಾಸಂ ಕೈಲಾಸ ಸೇರಿದ. ಗೋವಿಂದರಾಯ ಗೋತ ಹೊಡೆದ. ಇನ್ನೊಬ್ಬ ಕಾನ್ವೆಂಟ್‌ಗರ್ಲ್ ಹಿಂದೆ ನಡೆದ. ನಾನು ತಾನೇ ಏನು ಮಾಡ್ಲಿ? ಮದುವೆಯಾದ ಮೇಲೆ ಮನೆ ಸೇರಿದೆ" ಎಂದು ಉಸಿರು ಏರಿ ಬರುತ್ತಿದ್ದರೂ ಒಂದೆ ಉಸಿರಿನಲ್ಲಿ ಬಾರಿಸಿದೆ.

"ಸರಿ, ನೀನು ಬಿಡಪ್ಪ ಕವಿ. ಮಾತಿನಲ್ಲಿ ನಿನ್ನ ಗೆಲ್ಲಕ್ಕಾಗೋಲ್ಲ" ಎಂದು ಆ ವ್ಯಕ್ತಿ ಕಿಸಿಸ್ಮುಖಿಯಾದ.

ಇಷ್ಟರಲ್ಲಿ ನನ್ನ ಕೈ ಸಂಬಂಧ ಕಡಿಸಿ, ಷೆರ್‌ಲಾಕ್ ಸುಂದರರಾಯ ತನ್ನ ತೀಕ್ಷ್ಣ ಕಣ್ಣುಗಳಿಗೆ ಕೆಲಸ ಕೊಟ್ಟಿದ್ದ. ಆ ವ್ಯಕ್ತಿಯ ಪಡಿಯಚ್ಚು ಅವನ ಮನಸ್ಸಿನಲ್ಲಿ ಮೂಡಿತ್ತು. ಕೆರೆ ದಂಡೆಗೆ ಹೋಗಿ ಕುಳಿತಾಗ ಅವನು ಕೊಟ್ಟ ವಿವರಣೆ ಹೀಗಿತ್ತು:

ಆ ವ್ಯಕ್ತಿ ಉಟ್ಟುಕೊಂಡಿದ್ದ ಪಂಚೆ ಹಳೆಯದಾಗಿ ಹರಿದಿದ್ದರೂ ಅದನ್ನು ಚೆನ್ನಾಗಿ ಒಗೆದು ಹೊಲೆದು ಇಸ್ತ್ರಿ ಮಾಡಿಸಿ, ಅಂದವಾಗಿ ಕಚ್ಚೆ ಪಂಚೆ ಉಟ್ಟಿದ್ದ. ಪಂಚೆಯ ತುದಿಯಲ್ಲಿ ಅಂಟಿಕೊಂಡಿದ್ದ ಜರಿ,ತಾನು ಮದುವೆಯ ಕಾಲದ್ದೆಂದು ಸಾರಿಹೇಳುತ್ತಿತ್ತು. ಮುಚ್ಚಿದೆಯ ಕೋಟನ್ನು ಧರಿಸಿದ್ದರಿಂದ ಒಳಗಿನ ಅಂಗಿ ಕಾಣುತ್ತಿರಲಿಲ್ಲ. ಕೋಟು ತನ್ನ ಹಳೆಯತನವನ್ನು ಬಿಟ್ಟುಕೊಟ್ಟಿತ್ತು. ಒಂದಾನೊಂದು ಕಾಲದಲ್ಲಿ ಅದು ನೀಲಿಯ ಕೋಟಾಗಿತ್ತೆಂದು ಕಾಣುತ್ತಿತ್ತು. ಈಗ ಅಲ್ಲಲ್ಲಿ ನೀಲಿಯ ಮಚ್ಚೆಗಳು ಮಾತ್ರ ಕಾಣುತ್ತಿದ್ದವು. ಕೋಟಿನ ಗುಂಡಿಗಳು ಹಿತ್ತಾಳಿಯವಾದರೂ, ಚೆನ್ನಾಗಿ ತಿಕ್ಕಿ ತಿಕ್ಕಿ ಫಳ ಫಳ ಹೊಳೆಯುವಂತೆ ಮಾಡಿದ್ದನು. ತಲೆಯಮೇಲಿದ್ದ ಟೋಪಿ, ಕೊಂಡಾಗ ಮಕ್‌ಮಲ್ಲಿನದಾಗಿತ್ತೆಂದು ತೋರುತ್ತೆ. ಈಗ ಮಣಕು ಮಾತ್ರ ಇತ್ತು. ಕಾಲಿಗೆ ಪಾಲೀಷು ಮಾಡಿಸಿ ಹಾಕಿಕೊಂಡ ಗಿರಕಿ ಚಡಾವುಗಳ ಮೂತಿಗಳು ಬಾಯಿಬಿಟ್ಟುಕೊಂಡು ನಮ್ಮನ್ನೆ ನುಂಗುವಂತಿದ್ದವು. ಕೈಯ್ಯ-

ಲ್ಲೊಂದು ಚಿತ್ತ. ಆಕಾರ ಇನ್ನೂ ಉಳಿದಿತ್ತು ಅದಕ್ಕೆ. ವ್ಯಕ್ತಿಯ ರೂಪರೇಷಗಳು ಹಾಗಿದ್ದವು. ಇರಲಿ, ನಮ್ಮ ಭೇಟಿಸ್ಥಳಕ್ಕೆ ಹಿಂದಿರುಗೋಣ ಮತ್ತೆ.

"ಅದಿರ್ಲಿ, ಏನು ಇಷ್ಟು ಜೋರಾಗಿ ಹೋಗುತ್ತಿದ್ದಿಯಲ್ಲಾ, ಯಾವ ಕಡೆ?" ಎಂದೆ.

"ಅಂತಹದೇನೂ ಇಲ್ಲ. ನಿನ್ನ ಹಿಡೀಬೇಕು ಅಂತಲೇ ಬಂದೆ. ಯಾಕೆ, ನಾನು ಕೂಗಿದ್ದು ಕೇಳಿಸಲಿಲ್ಲವೆ?" ಎಂದು ಉತ್ತರ ನಿರೀಕ್ಷಿಸದೆಯೆ ತನ್ನ ಮಾತನ್ನು ಮುಂದುವರಿಸಿದ. "ನಿನಗೆ ಹೇಳಬೇಕಾದ ಸಮಾಚಾರ ಬಹಳ ಇದೆ. ಆದ್ರೆ ಎಲ್ಲಿ ನೀ ಸಿಗೋದೆ ಇಲ್ಲ. ನೋಡು ನಮ್ಮ ಮುನಿಸಿಪಲ್ ಪ್ರೆಸಿಡೆಂಟ್ .....ಪ್ಪನವರು ಒಂದು ಪಾರ್ಟಿ ಕೊಟ್ಟಿದ್ದರಲ್ಲಾ ಅದಕ್ಕೆ ನನ್ನನ್ನು ಬಾ ಅಂತ ಬಲವಂತಮಾಡಿದ್ದರು. ಹೋಗಿದ್ದೆ. ಆದರೆ ನೋಡಪ್ಪ, ಅದೇನೋ ಎಂತೋ ಕಾಣೆ, ಎಲ್ಲರೂ ನನ್ನನ್ನೇ ಮುತ್ತಿಕೊಂಡರು. ಅಲ್ಲಿ ಎಲ್ಲರ ಜೊತೆ ಮಾತಾಡೋದರಲ್ಲಿ ಸುಸ್ತಾಯಿತು. ಏನಾದರೂ ಮಾಡಿ ತಪ್ಪಿಸಿಕೊಂಡ್ರೆ ಸಾಕು ಎನಿಸ್ತು. ಅಷ್ಟರಲ್ಲಿ ಸರಿಯಾಗಿ ಒಂದು ವಿಷಯ ಜ್ಞಾಪಕ ಬಂತು. ಹೇಳಿ ತಪ್ಪಿಸಿಕೊಂಡು ಹೊರಟು ಬಂದೆ. ಮಹಿಳಾ ಸಮಾಜದ ಅಧ್ಯಕ್ಷಿಣಿ ಕ...ಮ್ಮ ನವರು ನನ್ನನ್ನು ಡಿನ್ನರ್‌ಗೆ ಕರೆದಿದ್ದರು. ಯಾರೋ ಜೊತೆಯವರು ಅಮೇರಿಕಾಕ್ಕೆ ಹೋಗುವವರಂತೆ. ನಾನು ಹೋಗೋದು ತಡವಾಯಿತೆಂದು ಕ....ಮ್ಮನವರಿಗೆ ಬಹಳ ಹೆದರಿಕೆಯಾಗಿತ್ತಂತೆ. ಎಲ್ಲಿ ಕೋಪ ಬಂದ್ಬಿಟ್ಟಿತ್ತೊ ನನಗೆ ಅಂತ. ಪಾಪ, ಎಲ್ಲಾರೂ ನನಗೋಸ್ಕರ ಕಾದುಕೊಂಡಿದ್ದರು. ಡಿನ್ನರ್ ಬಲು ಸೊಗಸಾಗಿತ್ತು. ನಾನು ಸಾಯಂಕಾಲ ಬೇರೆ ಪಾರ್ಟಿಗೆ ಹೋಗಿದ್ದೆ ಅಂತ ಎಷ್ಟು ಹೇಳಿದರೂ ಬಲವಂತ ಮಾಡಿ ಬಹಳ ತಿನ್ನಿಸಿಬಿಟ್ಟರು. ಹೊಟ್ಟೆ ಭಾರವಾಗಿ ಮನೆಗೆ ಹೋಗುವುದೆ ಕಷ್ಟವಾಗಿದೆ. ನೋಡು ಕ....ಮ್ಮನವರ ಪರಿಚಯ ನಿನಗೆ ಖಂಡಿತ ಮಾಡ್ಕೊಡುತ್ತೀನಿ. ಯಾವಾಗ ಅಂತ ನಾಳೆ ತಿಳ್ಕೊಂಡು ಫೋನ್ ಮಾಡ್ತೀನಿ" ಅಂತ ಒಂದೇ ಉಸಿರಿನಲ್ಲಿ ಬಡಬಡಾಯಿಸಿದ. ಇನ್ನೂ ಉಸುರುತ್ತಿದ್ದನ್ಯೋ ಏನೊ. ಅಷ್ಟರಲ್ಲಿ ಸುಂದರ ರಾಯ "ಇವರ್‍ಯಾರು ಅಂತ ನನಗೆ ಪರಿಚಯನೇ ಮಾಡ್ಲಿಲ್ಲವಲ್ಲಯ್ಯಾ?" ಎಂದು ನನ್ನ ಸಹಾಯಕ್ಕೆ ಬಂದ.

"ನೋಡು ಅಯ್ಯಂಗಾರಿ, ಇವರು ನನ್ನ ಆಪ್ತ ಗೆಳೆಯರು. ಸುಂದರರಾವ್ ಅಂತ. ದೊಡ್ಡ ಸಾಹಿತಿ. ಹೆಸರು ಏನೂ ನಿನಗೆ ಪರಿಚಯವಿಲ್ಲದೆ ಇಲ್ಲ. 'ಬಾಡಿದ ಹೂ' ಎಂಬ ಕವನಸಂಕಲನ ಪ್ರಕಟಿಸಿದ್ದಾರೆ. 'ನಿಜವಾಣಿ' ಯಲ್ಲಿ ಉಪಸಂಪಾದಕರಾಗಿದ್ದಾರೆ," ಎನ್ನುತ್ತಾ ಸುಂದರರಾಯನ ಕಡೆ ಮುಖ ತಿರುಗಿಸಿದೆ. ಅವನಾದರೋ ಕೋಸುನ್ಮುಖಿ (ಕೋಸಿನಂತೆ ಮುಖ ಅಗಲ ಮಾಡಿ ಎಂದರ್ಥ) ಯಾಗಿ ಅಯ್ಯಂಗಾರಿಯ ಮುಖದಲ್ಲಿ ಕಾಣುತ್ತಿದ್ದ ಬಿಳಿಯ ಕೂದಲುಗಳನ್ನು ಎಣಿಸುತ್ತಿದ್ದಂತೆ ತೋರಿತು.

"ಇವರೇ ಕಣೋ ಅಪ್ಪಣ್ಣಯ್ಯಂಗಾರ್‍ರು. ಇವರ ಬಗ್ಗೆ ನಿನಗೆ ಅನೇಕ ಸಲ ಹೇಳಿದ್ದೀನಿ. ಜ್ಞಾಪಕವಿಲ್ವೆ? ಏನು ಮಾಡಿದರೂ ಮರೆಯಲಾಗದ ಸ್ನೇಹಿತರು. ಇವರ ಹಿರಿಮೆ ಎಷ್ಟು ಅಂತ ಹೇಳೋದಿಕ್ಕೆ ಆಗುಲ್ಲ" ಎಂದು ನನ್ನ ಪುಟ್ಟ ಪರಿಚಯ ಭಾಷಣವನ್ನು ಮುಗಿಸಿದೆ. ಮತ್ತೆ ಹ್ಯಾಗೋ ನನ್ನ ಕೈಯಲ್ಲಿದ್ದ ಸುಂದರರಾಯನ ಹಸ್ತ ಅಪ್ಪಣ್ಣಯ್ಯಂಗಾರಿಯ ಹಸ್ತದೊಳಗೆ ನಡುಗುತ್ತಿತ್ತು. ಅವರಿಬ್ಬರ ಬಾಯಿಗಳು ಪಿಟಿ ಪಿಟಿ ಮಂತ್ರಗಳನ್ನು ಬಾರಿಸಿದವು. ಎಷ್ಟೊತ್ತು ಹಾಗೆ ನಿಂತಿದ್ದೆವೊ ಪರಿವೆಯಿಲ್ಲ. ಕೊನೆಗೆ ಸುಂದರ ರಾಯ ತನ್ನ ಚಮತ್ಕಾರದ ರೀತಿಯಲ್ಲಿ ಅಗಲುವ ಸೂಚನೆ ಕೊಟ್ಟ. ಆಗ ಅಪ್ಪಣ್ಣಯ್ಯಂಗಾರಿ ಇದ್ದೋನು "ಓಹೋ! ಹೊತ್ತಾಯ್ತು, ಆಗಲೇ ಆರೂವರೆ" ಎಂದು ಒಳ ಜೇಬಿನಿಂದ ವಸ್ತು

ವೊಂದನ್ನು ತೆಗೆದು, ತನ್ನ ಅಂಗೈಯಲ್ಲೆ ನೋಡಿದ ಹಾಗೆ ಮಾಡಿ ಅಲ್ಲಿ ಇರಿಸಿದ. ಅದು ಗಡಿಯಾರದ ಖಾಲಿ ಚೌಕಟ್ಟೆಂದು ಸುಂದರರಾಯ ನನಗೆ ನಂತರ ತಿಳಿಸಿದ. ಅಯ್ಯಂಗಾರಿ ಗಂಟೆ ಊಹಿಸಿ ಹೇಳಿದ್ದಿರಬೇಕು.

"ಅಂದ್ಹಾಗೆ ನಿನ್ನಿಂದ ಒಂದು ಕೆಲಸ ಆಗ್ಬೇಕು ನೋಡು. ಮಧ್ಯಾಹ್ನ ಮನೆ ಬಿಡುವಾಗ ಈ ಕೋಟು ಹಾಕಿಕೊಂಡು ಬಂದ್ಬಿಟ್ಟೆ. ಪಾಕೀಟು ಇನ್ನೊಂದು ಕೋಟಿನಲ್ಲಿದ್ದಿದ್ದು ಅಲ್ಲೆ ಉಳಿದಿದೆ. ಮಗೂಗೆ ಟಾನಿಕ್ ತೊಗೊಂಡು ಬನ್ನಿ ಅಂತ ಮನೆಯೋಳು ಹೇಳಿದ್ದಾಳೆ. ನಿನಗೆ ಗೊತ್ತಲ್ಲ. ಇವತ್ತೇ ತೊಗೊಂಡು ಹೋಗದಿದ್ದರೆ ಅವಳೆಷ್ಟು ಪಂಚಾಯಿತಿ ಮಾಡುತ್ತಾಳೆ ಅಂತ. ಒಂದೈದು ರೂಪಾಯಿ ಇದ್ದರೆ ಕೊಟ್ಟಿರು. ನಾಳೆ ನಿನ್ನ ಆಫೀಸಿಗೆ ಹನ್ನೊಂದುಗಂಟೆಗೆ ತಂದ್ಕೊಟ್ಟುಬಿಡುತ್ತೇನೆ ನೋಡು,ನೀನಿಷ್ಟು ಮಾಡಿದ್ರೆತುಂಬಾ ಉಪಕಾರ ವಾಗುತ್ತೆ. ಹೆಂಡತಿ ಬೈಗುಳ ತಪ್ಪಿಸ್ಕೊಬಹುದು" ಎಂದು ಅಪ್ಪಣ್ಣಯ್ಯಂಗಾರಿ ಹಲ್ಲುಹಲ್ಲು (ಎಲ್ಲಾ ಕೆಟ್ಟು ಕರ‍್ರಗಾಗಿದ್ದವು) ಬಿಟ್ಟ. ಇಲ್ಲವೆನ್ನುವಂತೆ ನಾನು ಜೇಬುಗಳನ್ನು ಹಾಗೆ ಹೀಗೆ ತಡಕಾಡಿದೆ. ಅಷ್ಟರಲ್ಲಿ ಸುಂದರರಾಯ "ನಾನು ಕೊಟ್ಟಿರಲೇ" ಎಂದವನೇ ಜೇಬಿನಿಂದ ಐದು ರೂಪಾಯಿ ತೆಗೆದು ಅಯ್ಯಂಗಾರಿಯ ಮುಂದೆ ಹಿಡಿದ. ತೆಗೆದುಕೊಳ್ಳಲೋ, ಬೇಡವೋ ಎಂದು ಅನುಮಾನಿಸುವಂತೆ ನನ್ನ ಮುಖ ಒಂದು ಸಲ, ಸುಂದರರಾಯನ ಮುಖ ಒಂದು ಸಲ ನೋಡಿ, ಕೊನೆಗೆ ನೋಟನ್ನು ತೆಗೆದುಕೊಂಡು ಅಯ್ಯಂಗಾರಿ "ತುಂಬಾ ಥ್ಯಾಂಕ್ಸ್, ನಾಳೆ ಖಂಡಿತ ಕೊಡುತ್ತೇನೆ" ಎಂದವನೆ ಅಲ್ಲಿಂದ ಕಾಲ್ಕಿತ್ತ.

"ಕೊಡ್ತಾನೆ ನಿನಗೆ ಕೈ. ಅವನ್ಯಾಕಯ್ಯ, ನಂಬಿ ಕೊಡೋಕ್ಹೋದೆ? ಅವನಿಗೆ ಕೊಟ್ಟರೆ ತಿರುಗಿ ಬರುವ ಹಾಗೇ ಇಲ್ಲ. ಅವನು ಹೇಳಿದ್ದೆಲ್ಲಾ ಬರೀ ಬುರುಡೆ, ಬಡಾಯಿ, ನೀನೊಳ್ಳೆ ಪೆಚ್ಚು. ಅವನ್ಹೇಳಿದ್ದೆಲ್ಲಾ ನಂಬಿಬಿಟ್ಟೆ" ಉದ್ವೇಗದಲ್ಲಿ ಸುಂದರರಾಯನಿಗೆ ಹೊಡೆಯಲೂ ಸಿದ್ಧನಾಗಿದ್ದೆ.

ಆದರೆ ಅವನು ಕೊಟ್ಟ ಉತ್ತರ ನನ್ನನ್ನು ಮಂಕು ಮಾಡಿತು. "ನನಗೂ ಗೊತ್ತಯ್ಯ. ಅವನಿಗೆ ಕೊಟ್ಟ ಹಣ ವಾಪಸ್ ಬರೋಲ್ಲ ಅಂತ ನನಗೂ ಗೊತ್ತಾಯ್ತು. ಆದರೂ ಅವನ ಸ್ಥಿತಿ ನೋಡಿ ಮರುಕವಾಯಿತು. ನೋಡು, ಅವನ್ಮುಖ ನೋಡಿದರೆ ಮೂರು ದಿವಸ ಉಪವಾಸ ಮಾಡಿದಂತಿತ್ತು. ಹೋಗಲಿ, ಇವತ್ತಾದರೂ ಸರಿಯಾಗಿ ಊಟ ಮಾಡಲಿ ಅಂತ ಕೊಟ್ಟೆ. ಸದಾ ಇಂತಹ ನಾಟಕ ಹೂಡಬೇಕಲ್ಲಯ್ಯ ಇವನು ತನ್ನ ಜೀವನರಥ ನಡೆಸುವುದಕ್ಕೆ. ಮನೆಯಲ್ಲಿ ಹೆಂಡತಿ ಮಕ್ಕಳು ಹಸಿವಿನಿಂದ ಕಾದಿರುತ್ತಾರೆ. ಈ ಹೊಸ ಗೆಳೆಯನಿಗೆ ಸಹಾಯಮಾಡಿದ್ದು ತಪ್ಪೇನಲ್ಲಾ."

ನಾನು ತೆಪ್ಪಗಾದೆ. ಈಗಲೂ ಸಹ ಸುಂದರರಾಯ ನನ್ನ ಕೈ ಹಿಡೀದೇ ಹೋಗದಿದ್ದರೆ, ನಾನು, ಏನು ಮಾಡುತ್ತಿದ್ದೆನೋ ಗೊತ್ತಿಲ್ಲ. ಆದರೆ ನಮ್ಮ ಕೈಕೈಗಳ ಸಂಬಂಧ ಸುಖವಾಗಿ ಕೆರೆಯಂಗಳ ಹಾಸಿ ಮನೆ ತಲುಪಿದೆ. *

---

**ನಮ್ಮ ಮೇಲಿನ ಭಾರ ಇಳಿಸಿರೆಂದು ದೇವರನ್ನು ಪ್ರಾರ್ಥಿಸಬಾರದು; ನಮಗೆ ನಿನ್ನ ದೊಡ್ಡ ಬೆಂಬಲವಿರಲಿ ಎಂದು ಕೇಳಿಕೊಳ್ಳಬೇಕು.**

— ಥಿಯೋಡೋರ ರೂಜವೆಲ್ಟ್

**ಕುಸ್ತಿ ಮತ್ತು ವಿವಾಹ ಇವೆರಡರಲ್ಲಿ ಬಹಳ ಅಂತರವಿದೆ. ಕುಸ್ತಿಯಲ್ಲಿ ಯಾರು ಗೆಲ್ಲುವರು ಎಂಬುದು ಮೊದಲಿಗೆ ತಿಳಿದಿರುವುದಿಲ್ಲ.**

# ನಿಮ್ಮ ಶಬ್ದ ಭಂಡಾರ ಬೆಳೆಯಲಿ

**ಶಬ್ದಭಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

**ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ**

೧. ಶ್ವಾಪದ

(ಅ) ನಾಯಿಯ ಕಾಲು (ಆ) ಕಷ್ಟ (ಇ) ತಪ್ಪು (ಈ) ಕಾಡುಪ್ರಾಣಿ

೨. ಉಪಾದೇಯ

(ಅ) ಚೆನ್ನಾಗಿರುವ (ಆ) ಬಿರುದು (ಇ) ಶಿಕ್ಷಕ (ಈ) ಮೊದಲನೆಯ

೩. ಪ್ರತ್ಯವಾಯ

(ಅ) ಒಂದು ರೋಗ (ಆ) ಹಿಂತೆಗೆದುಕೊಳ್ಳುವುದು (ಇ) ಅಡ್ಡಿ (ಈ) ಕಳೆದು ಹೋಗುವಿಕೆ

೪. ಕವಡು

(ಅ) ಮುಗುಚಿ ಹಾಕು (ಆ) ಮೋಸ (ಇ) ಕಲಕು (ಈ) ಬಿಸಿ

೫. ಗಣನೀಯ

(ಅ) ಶಿವನ ಪರಿವಾರ (ಆ) ಮಹತ್ವದ (ಇ) ವೇಶ್ಯೆಯ ಮಗ (ಈ) ಸವಿಯಾದ

೬. ಕಿವಿಚು

(ಅ) ಆಲಿಸು (ಆ) ಕೊಳೆ (ಇ) ಹಿಂಡು (ಈ) ಹರಿ

೭. ಅಪಾಂಗ

(ಅ) ಕುಂಟ (ಆ) ಕಡೆಗಣ್ಣು (ಇ) ಕಾಲು (ಈ) ಹಾಡು

೮. ಪರಿಪಕ್ವ

(ಅ) ರೆಕ್ಕೆ (ಆ) ಸುತ್ತುವರಿ (ಇ) ಮಾಗಿದ (ಈ) ಚಿಂತೆ

೯. ಸುತರಾಂ

(ಅ) ಎಂದೆಂದೂ (ಆ) ಮಗಳು (ಇ) ದಾಟುವಿಕೆ (ಈ) ನೂಲು

೧೦. ಭ್ರಂಶ

(ಅ) ತುಂಬುವುದು (ಆ) ಪೂರ್ಣ (ಇ) ಹುಚ್ಚು (ಈ) ಬೀಳುವಿಕೆ

೧೧. ಭಾಜನ

(ಅ) ಹೊಳೆಯುವಿಕೆ (ಆ) ಊಟ (ಇ) ಹಾಡುವುದು (ಈ) ಪಾತ್ರ

೧೨. ಪ್ರತಿಷೇಧ

(ಅ) ತಡೆಯುವುದು (ಆ) ಸ್ನಾನ (ಇ) ಕೊಲೆ (ಈ) ಸೀಮೆ

# 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ಶ್ವಾಪದ** (ಈ) ಕಾಡು ಪ್ರಾಣಿ, ಕ್ರೂರ ಮೃಗ; ಹುಲಿ. [ಸಂ.]

೨. **ಉಪಾದೇಯ** (ಅ) ಚೆನ್ನಾಗಿರುವ, ಶ್ರೇಷ್ಠವಾದ; ತೆಗೆದುಕೊಳ್ಳಲು ಅರ್ಹವಾದ, ಸ್ವೀಕಾರಾರ್ಹ. ಉದಾ— ಈ ಪುಸ್ತಕ ತುಂಬ ಉಪಾದೇಯವಾಗಿದೆ. [ಸಂ. ಉಪ = ಹತ್ತಿರಕ್ಕೆ ಆ+ದೇಯ= ತೆಗೆದುಕೊಳ್ಳತಕ್ಕಂಥ]

೩. **ಪ್ರತ್ಯವಾಯ** (ಇ) ಅಡ್ಡಿ, ಆತಂಕ; ವಿರೋಧ; ಕಡಿಮೆಯಾಗುವಿಕೆ, ಕ್ಷೀಣ ದಶೆ; ಪಾಪ, ಅಪರಾಧ. ಉದಾ— ಯಾವುದಕ್ಕೂ ನನ್ನಿಂದ ಪ್ರತ್ಯವಾಯ ವಿಲ್ಲ. [ಸಂ.]

೪. **ಕವಡು** (ಆ) ಮೋಸ; ಕಪಟ; ಮಾಯೆ; ಕವಲು. ಉದಾ— ಕವಡು ನುಡಿಗಳಿಗೆ ನಾನು ಮರುಳಾಗುವವನಲ್ಲ. [ಕನ್ನಡ]

೫. **ಗಣನೀಯ** (ಆ) ಮಹತ್ವದ, ಹೆಚ್ಚಿನ; ಲೆಕ್ಕಿಸತಕ್ಕ. ಉದಾ— ನೀನು ಗಣನೀಯವಾದಷ್ಟು ಸೇವೆ ಮಾಡಿರುವೆ ಅಂದರೆ ಸಾಕಷ್ಟು ಸೇವೆ ಮಾಡಿರುವೆ. [ಸಂ. ಗಣನೀಯ = ಲೆಕ್ಕ ಮಾಡಬೇಕಾದ]

೬. **ಕಿವಿಚು** (ಇ) ಹಿಂಡು, ಹಿಸುಕು, ಮರ್ದಿಸು. [ಕನ್ನಡ]

೭. **ಅಪಾಂಗ** (ಆ) ಕಡೆಗಣ್ಣು, ಕಣ್ಣಿನ ಕುಡಿ. ಉದಾ— ಅವಳ ಅಪಾಂಗ ದೃಷ್ಟಿಗೆ ಅವನು ಮನಸೋತ. [ಸಂ]

೮. **ಪರಿಪಕ್ವ** (ಇ) ಮಾಗಿದ, ಸರಿಯಾಗಿ ಹಣ್ಣಾದ; ಸರಿಯಾಗಿ ಬೆಂದ; ಪ್ರಬುದ್ಧವಾದ, ಪೂರ್ಣವಾಗಿ ಬೆಳೆದ; ಸುಸಂಸ್ಕೃತವಾದ. ಉದಾ— ಆವನ ಮನಸ್ಸು ಪರಿಪಕ್ವವಾಗಿಲ್ಲ ಅಂದರೆ ಇನ್ನೂ ಬಲಿತಿಲ್ಲ. [ಸಂ. ಪರಿ = ಸುತ್ತಲೂ, ಪಕ್ವ=ಬೆಂದ]

೯. **ಸುತರಾಂ** (ಅ) ಎಂದೆಂದೂ, ಎಂದಿಗೂ; ಸರ್ವಥಾ; ಅತಿಶಯವಾಗಿ, ಚೆನ್ನಾಗಿ. ಉದಾ— ನನಗಿದು ಸುತರಾಂ ಇಷ್ಟವಿಲ್ಲ ಎಂದರೆ ಸರ್ವಥಾ ಇಷ್ಟವಿಲ್ಲ. [ಸಂ. ಸುತರಾಂ = ಅತಿಶಯವಾಗಿ]

೧೦. **ಭ್ರಂಶ** (ಈ) ಬೀಳುವಿಕೆ, ಜಾರುವಿಕೆ; ಕಳೆದು ಹೋಗುವಿಕೆ; ನಾಶ; ತಪ್ಪುವಿಕೆ. ಉದಾ— ಧರ್ಮಭ್ರಂಶ ಎಂದರೆ ಧರ್ಮ ತಪ್ಪಿ ನಡೆಯುವುದು. [ಸಂ. ಭ್ರಂಶ್ = ಬೀಳು. ಇಂದ]

೧೧. **ಭಾಜನ** (ಈ) ಪಾತ್ರ, ಭಾಂಡಿ; ಪಾಲು ಮಾಡುವಿಕೆ; ಭಾಗಿಸುವಿಕೆ; ಪಡೆಯಲು ಯೋಗ್ಯ ಅಥವಾ ಪಾತ್ರ. ಉದಾ: ಅವನು ದುಃಖಭಾಜನನಾದ, ಅಂದರೆ ದುಃಖಕ್ಕೆ ಗುರಿಯಾದ. ಅವಳ ಪ್ರೇಮ ಭಾಜನನಾದ ಅಂದರೆ ಪ್ರೀತಿಪಾತ್ರನಾದ.

೧೨. **ಪ್ರತಿಷೇಧ** (ಅ) ತಡೆ, ನಿಷೇಧ; ತಿರಸ್ಕಾರ; ಅಲ್ಲಗಳೆಯುವಿಕೆ. ಉದಾ:- ರತಿಯನ್ನರು ಈ ಗೊತ್ತುವಳಿಯನ್ನು ಪ್ರತಿಷೇಧ ಮಾಡಿದರು ಅಂದರೆ ಅದು ಕೂಡದು ಎಂದು ತಡೆದರು. [ಸಂ.]

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೬—೮ ಸರಿಯಿದ್ದರೆ | .... | ಸಾಧಾರಣ |
| ೯—೧೦ " | .... | ಉತ್ತಮ |
| ೧೧—೧೨ " | .... | ಅತ್ಯುತ್ತಮ |

ವಜ್ರೋತ್ಸವದ ವಿಜೃಂಭಣೆಯಲ್ಲಿ........

ಕೊರ್ಪೊರೇಶನ್ ಬೇಂಕ್

## ಪಂಚವಾರ್ಷಿಕ ವಜ್ರೋತ್ಸವ ಠೇವಣಾತಿ ಯೋಜನೆಯು



● ಧಾರಾಳ ಬಡ್ಡಿ ● ಉದಾರ ಶರ್ತು ● ವಿಶೇಷ ಸವಲತ್ತುಗಳಿಂದ ಕೂಡಿ ಆಕರ್ಷಕವಾಗಿದೆ; ಅತಿ ಫಲದಾಯಕವೂ ಆಗಿದೆ.

ವಿವರಗಳಿಗೆ:

ಈ ಬೇಂಕಿನ 62 ಶಾಖೆಗಳ ಪೈಕಿ, ನಿಮಗೆ ಸಮೀಪವಿರುವ ಶಾಖೆಯಲ್ಲಿ ವಿಚಾರಿಸಿರಿ



**ಫಲಭರಿತವಾದ ಠೇವಣಾತಿ ಯೋಜನೆಗೆ—**

**ಧಾರಾಳ ಬಡ್ಡಿ ಸಂಪಾದನೆಗೆ—**

**ಠೇವಣಾತಿಗಳಲ್ಲೆಲ್ಲಾ ಉತ್ತಮ ಠೇವಣಾತಿಗೆ—**

ಕೋರ್ಪೊರೇಶನ್ ಬೇಂಕ್

ಪಂಚವಾರ್ಷಿಕ ವಜ್ರೋತ್ಸವ ಠೇವಣಾತಿ !

## ದಿ ಕೆನರಾ ಬೇಕಿಂಗ್ ಕೊರ್ಪೊರೇಶನ್ ಲಿಮಿಟೆಡ್

ಸ್ಥಾಪನೆ: 1906

ರಜಿಸ್ಟರ್ಡ್ ಆಫೀಸು— ಉಡುಪಿ, ಮೈಸೂರು ರಾಜ್ಯ


H 5-12

# ಬಾಳು ನನಗೇನು ಕಲಿಸಿದೆ?

ಕಾಂಚಿ-ಕಾಮಕೋಟಿ ಪೀಠದ
ಜಗದ್ಗುರು ಶಂಕರಾಚಾರ್ಯರಿಂದ

ಜೀವನವು ನಿತ್ಯವೂ ನನಗೆ ಹೊಸ ಪಾಠಗಳನ್ನು ಕಲಿಸಲು ಸತತವಾಗಿ ಪ್ರಯತ್ನಿಸುತ್ತಿದ್ದರೂ ನನಗೆ ಎಳ್ಳಷ್ಟೂ ಕಲಿಯುವುದು ಸಾಧ್ಯವಾಗಿಲ್ಲವೆಂದು ನನಗೆ ಆಗಾಗ ಅನಿಸುತ್ತಿದೆ. ಯಾಕಂದರೆ ಜೀವನವನ್ನು ನಾನು ನೋಡುವ ಹಾಗು ಆ ಕುರಿತು ವಿಚಾರಿಸುವ ನನ್ನ ದೃಷ್ಟಿ ಅಷ್ಟೊಂದು ಆಳದಾಗಿರದೆ ತೋರಿಕೆಯದು ಮಾತ್ರವಾಗಿದೆಯಾದುದರಿಂದ ನನ್ನ ಜೀವನದಲ್ಲಿ ನನಗೆ ಬಂದ ವಿವಿಧ ಅನುಭವಗಳು ನನ್ನ ಈ ಕುಂದನ್ನು ಸರಿಪಡಿಸಲು ಸಮರ್ಥವಾಗಿಲ್ಲ.

ನನಗೆ ನೆನಪಿರುವ ಮಟ್ಟಿಗೆ ನನ್ನ ತೀರ ಹಳೆಯ ಅನುಭವಗಳೆರಡು ನಾನು ಮೂರು ಅಥವಾ ನಾಲ್ಕು ವರ್ಷ ವಯಸ್ಸಿನವನಿದ್ದಾಗ ಆಗಿರಬೇಕೆಂದೆನಿಸುತ್ತಿದೆ. ಆದರೆ ಅವುಗಳನ್ನು ನೆನೆಯುವುದೇ ಇಂದು ಭಯಾನಕವೆನಿಸುತ್ತಿದೆ. ಯಾಕಂದರೆ ಆ ಘಟನೆಗಳೊಂದಿಗೆ ಲೋಭ, ಅತ್ಯಾಶೆ, ಮೋಸ, ದುಃಖಗಳೆಲ್ಲವೂ ಬೆರೆತುಕೊಂಡಿವೆ.

ಒಮ್ಮೆ ಬೆಕ್ಕೊಂದು ನಮ್ಮ ಮನೆ ಹೊಕ್ಕಾಗ ಸಣ್ಣ ಬಾಯಿಯ ಪಾತ್ರೆಯೊಂದರಲ್ಲಿನ ಬೆಲ್ಲವನ್ನು ತಿನ್ನಬಯಸಿ ಅದರಲ್ಲಿ ಹೇಗೊ ಮುಖವನ್ನು ಹಾಕಿತು. ಆದರೆ ಪಾಪ, ತಿರುಗಿ ಮುಖವನ್ನು ಹೊರತೆಗೆಯುವುದು ಮಾತ್ರ ಅದಕ್ಕೆ ಸಾಧ್ಯವಾಗದೆ ಅದು ನೋವಿನಿಂದ ಅತ್ತಿಂದಿತ್ತ ಇತ್ತಿಂದತ್ತ ಓಡಾಡತೊಡಗಿತು. ಮನೆಯವರು ಹಾಗೂ ನೆರೆಹೊರೆಯವರು ಈ ಸಪ್ಪಳ ಕೇಳಿ ಕಳ್ಳನು ಮನೆ ಹೊಕ್ಕಿರಬಹುದೆಂದು ತಿಳಿದರು. ಆದರೆ ಬಹಳ ಹೊತ್ತಿನ ವರೆಗೆ ಈ ಸಪ್ಪಳ ನಿಲ್ಲದಾಗಲು ಆಯುಧಧಾರಿಗಳಾಗಿ ಧೈರ್ಯದಿಂದ ಮುಂದೆ ಬಂದು ಕೆಲವರು ಬಾಗಿಲು ತೆರೆದಾಗ ಈ ಆಸೆಬುರುಕ ಬೆಕ್ಕು ಕಣ್ಣಿಗೆ ಬಿದ್ದಿತು. ಆಗ ಅವರು ಅದನ್ನೊಂದು ಹಗ್ಗದಿಂದ ಕಂಬಕ್ಕೆ ಕಟ್ಟಿದರು. ನಂತರ ಅತಿ ಪ್ರಯಾಸದಿಂದ ಅದರ ಮುಖವನ್ನು ಹೊರತೆಗೆಯಲಾಯಿತು. ತನ್ನ ಪ್ರಾಣ ಉಳಿಸಿಕೊಳ್ಳಲು ಹೋರಾಡುತ್ತಿದ್ದ ಆ ಬೆಕ್ಕನ್ನು ಬಹುಶಃ ಬಯಲಿಗೆ ತಂದು ತನ್ನಷ್ಟಕ್ಕೆ ತಾನೇ ಓಡಾಡಿಕೊಂಡಿರಲೆಂದು ಬಿಟ್ಟಿರಬೇ

"ಭವನ್ಸ್ ಜರ್ನಲ್" ನಿಂದ

ಕೆಂದು ನನಗೆನಿಸುತ್ತದೆ. ದುರಾಶೆಯಿಂದ ಪ್ರೇರಿತವಾಗಿ ನೆರೆಹೊರೆಯವರನ್ನೆಲ್ಲ ನಿದ್ದೆಗೆಡಿಸಿದ, ಧೃತಿಗೆಡಿಸಿದ ಈ ಘಟನೆಯೆ ನನ್ನ ಮನಃಪಟಲದ ಮೇಲೆ ಅಳಿಯದಂತೆ ಮೂಡಿರುವ ನನ್ನ ಪ್ರಥಮ ಅನುಭವ.

ಇನ್ನೊಮ್ಮೆ ನಾನು ನಮ್ಮ ಮನೆಯ ಪಡಸಾಲೆಯಲ್ಲಿ ಒಬ್ಬನೇ ಆಡುತ್ತಿದ್ದುದನ್ನು ಕಂಡು ಎದುರಿನ ರಸ್ತೆಯಲ್ಲಿ ಹೋಗುತ್ತಿದ್ದವನೊಬ್ಬನು ಒಳಬಂದು ನನ್ನ ಎರಡೂ ಕೈಗಳಲ್ಲಿದ್ದ ಪುಟ್ಟ ಚಿನ್ನದ ಕೈಕಡಗಗಳಿಗೆ ಕೈಹಾಕಿದನು. ಅವುಗಳ ಕೊಂಡಿಗಳು ಸಡಿಲಾಗಿದ್ದುದರಿಂದ ಕೂಡಲೇ ಅವನ್ನು ಸರಿಪಡಿಸಿಕೊಂಡು ಮರಳಿ ತಂದುಕೊಡಬೇಕೆಂದು ಅವನಿಗೆ ಆಜ್ಞಾಪಿಸಿದೆನು. ಅವನು ಸಾವಧಾನವಾಗಿ ನನ್ನ ಕೈಕಡಗಗಳೆರಡನ್ನೂ ಬಿಚ್ಚಿಕೊಂಡು ಹೊರಗೆ ಹೊರಟುಹೋದನು. ಅವನ ಹೆಸರನ್ನು ವಿಚಾರಿಸಿದಾಗ ಪೊನ್ನುಸ್ವಾಮಿ ಎಂದು ಹೇಳಿದನು. ನನ್ನ ಕೈಕಡಗಗಳನ್ನು ಸರಿಪಡಿಸಲು ಕೊಟ್ಟಿದ್ದರಿಂದ ನನಗೆ ಅತ್ಯಾನಂದವಾಗಿತ್ತು. ಅಂತೆಯೆ ಈ ಸಂತಸದ ಸುದ್ದಿಯನ್ನು ಬೀರಲು ನಾನು ಕೂಡಲೇ ಮನೆಯೊಳಗೆ ಓಡಿದೆ. ಸಂಗತಿಯನ್ನು ನನ್ನಿಂದ ಕೇಳಿ ತಿಳಿದ ಹಿರಿಯರು ಕೂಡಲೇ ಆ ಮನುಷ್ಯನನ್ನು ಹಿಡಿಯಲು ಹೊರಗೆ ಧಾವಿಸಿದರು. ಆದರೆ ಅವನು ಆಗಲೇ ಮಾಯವಾಗಿದ್ದ; ನನ್ನ ಚಿನ್ನದ ಕೈಕಡಗಗಳು ಅವನ ಹೆಸರಿಗೆ ತಕ್ಕಂತೆ ಅವನವೇ ಆಗಿಬಿಟ್ಟಿದ್ದವು. (ಪೊನ್ನುಸ್ವಾಮಿ = ಚಿನ್ನದ ಒಡೆಯ).

ನನ್ನ ಎಳೆ ವಯಸ್ಸಿನಲ್ಲಿ ನಡೆದು ಹೋದ ಈ ಎರಡು ಘಟನೆಗಳು ನನ್ನ ಎಪ್ಪತ್ತರ ನೆರೆಹೊರೆ-ಯಲ್ಲಿನ ಈ ಮುದಿವಯಸ್ಸಿನಲ್ಲಿಯೂ ಒಂದಿಲ್ಲೊಂದು ರೂಪದಲ್ಲಿ ಮರುಕಳಿಸಿ ಬರುತ್ತಿವೆ.

ವಾಸ್ತವ ಜಗತ್ತನ್ನು ಈ ಸ್ವಾರ್ಥ ಹಾಗೂ ಪೊಳ್ಳುತನದ ಅಳತೆಗೋಲಿನಿಂದಲೇ ನಾನು ಅಳೆಯುತ್ತಿದ್ದುದರಿಂದ ಚಾಣಾಕ್ಷ ಸ್ವಾಮಿ ಎಂದು ಹೆಸರು ಗಳಿಸಿದೆ. ಇದರಿಂದಾಗಿ ಸ್ವಾರ್ಥ ಬುದ್ಧಿ ಇಲ್ಲದೆ ಕೆಲಸ ಮಾಡುವವರು ಈ ಜಗತ್ತಿನಲ್ಲಿ ಇಲ್ಲವೇ ಇಲ್ಲವೆಂಬ ನಿರ್ಣಯಕ್ಕೆ ನಾನು ಆಗಾಗ ಬರುವ ಸಂಭವವೇ ಹೆಚ್ಚಾಗಿತ್ತು.

ಆದರೆ ವರುಷಗಳುರುಳಿದಂತೆ, ನನ್ನ ಸ್ವಭಾವ ಸಹಜವಾಗಿ ಅಷ್ಟೊಂದು ಆಳವಾದುದಲ್ಲವಾದರೂ ಮತ್ತೊಂದು ಭಾವನೆ ನನ್ನ ಮೇಲೆ ಪರಿಣಾಮ ಮಾಡುತ್ತಿದೆ. ಈ ಪೃಥ್ವಿಯ ಮೇಲೆ ಧರ್ಮ, ನೀತಿಗಳನ್ನು ಅಳವಡಿಸಿಕೊಂಡು ತಮ್ಮ ಲೌಕಿಕ ಹಿತವನ್ನಷ್ಟೇ ಏಕೆ, ತಮ್ಮಪಾರಮಾರ್ಥಿಕ ಸಾಧನೆಯನ್ನೂ ಬದಿಗಿರಿಸಿ ಸ್ವಯಂಪ್ರೇರಣೆಯಿಂದ ತಮ್ಮ ಜೀವನವನ್ನೇ ಬೇರೆಯವರಿಗಾಗಿ ಸವೆಸುವವರೂ ಕೆಲವರಿದ್ದಾರೆ ಎಂಬುದೇ ಆ ಭಾವನೆ.

ಅದು ೧೯೦೭ ರ ಪ್ರಾರಂಭದಲ್ಲಿ ಒಂದು ದಿನ. ಆಗ ನಾನು ದಕ್ಷಿಣ ಅರ್ಕಾಟ್ ಜಿಲ್ಲೆಯ ತಿಂಡಿವನಮ್ ಎಂಬ ಊರಲ್ಲಿ ಮಿಶನ್ ಶಾಲೆಯ ವಿದ್ಯಾರ್ಥಿಯಾಗಿದ್ದೆ. ಅದರ ಹಿಂದಿನ ವರುಷ ನಮ್ಮೂರಿಗೆ ಸಂದರ್ಶನವಿತ್ತಿದ್ದ ಕಾಮಕೋಟಿ ಪೀಠದ ಶಂಕರಾಚಾರ್ಯರು ಕಲವಾಯಿ ಎಂಬ ಹಳ್ಳಿಯಲ್ಲಿ ದೇಹವಿಟ್ಟರು ಎಂಬ ವಾರ್ತೆ ಬಂದಿತು.

ಋಗ್ವೇದವನ್ನು ಅಭ್ಯಸಿಸಿದ ನಂತರ ನನ್ನ ತಾಯಿಯ ಸೋದರಿಯ ಮಗನು ಆಚಾರ್ಯರ ಅನುಜ್ಞೆಯಿಂದ ಅವರ ಪರಿವಾರ ಸೇರಿದ್ದನು. ಈಗ ಅವನನ್ನು ಶಂಕರಾಚಾರ್ಯ ಪೀಠಕೆ ಕೂಡಿಸಲಾಯಿತೆಂದು ವಾರ್ತೆ ಬಂತು.

ವಿಧವೆಯಾದ ನನ್ನ ಅಬಚಿಗೆ ಅವನೊಬ್ಬನೇ ಮಗ. ಅವನು ಸಂನ್ಯಾಸ ದೀಕ್ಷೆ ಪಡೆದುದು ಅವ-ಳಿಗೆ ವಜ್ರಾಘಾತವನ್ನುಂಟುಮಾಡಿತ್ತು. ಮಠದ ಪರಿವಾರದಲ್ಲಿ ಅವಳಿಗೆ ಸಮಾಧಾನ ಹೇಳದವರು ಒಬ್ಬರೂ ಉಳಿಯಲಿಲ್ಲ. ತನ್ನ ಸೋದರಿಗೆ ಸಮಾಧಾನ ಹೇಳುವುದು ತಾನು ಮಾಡಲೇಬೇಕಾದ ಕರ್ತವ್ಯವೆಂದು ನನ್ನ ತಾಯಿ ಬಗೆದುದರಿಂದ ನಾವಿಬ್ಬರೂ ಕಲವಾಯಿಗೆ ಹೊರಟೆವು.

ಕಾಂಚೀಪುರದವರೆಗೆ ನಾವು ರೈಲಿನಲ್ಲಿ ಹೋಗಿ ಅಲ್ಲಿಯ ಶಂಕರಾಚಾರ್ಯರ ಮಠದಲ್ಲಿ ಉಳಿದು ಕೊಂಡೆವು. ನಾನು ಕುಮಾರ ಕೋಷ್ಠ ತೀರ್ಥ ದಲ್ಲಿ ನನ್ನ ಸ್ನಾನ ಸಂಧ್ಯಾದಿಗಳನ್ನು ತೀರಿಸಿ ಕೊಂಡೆನು. ಆಚಾರ್ಯರ ಪರಮ ಗುರುಗಳು ಸಿದ್ಧಿಪಡೆದು ಹತ್ತು ದಿನಗಳಾದನಂತರ ನಡೆಯುವ ಮಹಾಪೂಜೆಗೆಂದು ಸಾಮಾನುಗಳನ್ನು ಕೊಂಡೊಯ್ಯಲು ಅಲ್ಲಿಗೆ ಮಠದ ಬಂಡಿ ಬಂದಿದ್ದಿತು. ವಂಶಪರಂಪರವಾಗಿ ಮಠದ ಪಾರುಪತ್ಯಗಾರರಾಗಿದ್ದ ನಮ್ಮ ಪರಿಚಯಸ್ಥರೊಬ್ಬರು ನನ್ನ ಬಳಿಗೆ ಬಂದು ಕಲವಾಯಿಗೆ ತಮ್ಮೊಡನೆ ಬರಬೇಕೆಂದು ಕೇಳಿಕೊಂಡರು. ನನ್ನ ಸಂಗಡ ಬಂದಿದ್ದ ನನ್ನ ತಾಯಿ ಹಾಗು ಇತರರಿಗೆ ನಮ್ಮ ಹಿಂದಿನಿಂದ ಬೇರೆ ಬಂಡಿಯಲ್ಲಿ ಬರಲು ತಿಳಿಸಲಾಯಿತು.

ಕಲವಾಯಿ ಸಮೀಪಕ್ಕೆ ಬರುತ್ತಿದ್ದಂತೆಯೆ ಪಾರುಪತ್ಯಗಾರರು ವಿಷಯವನ್ನು ಒಂದೊಂದಾಗಿ ಬಿಡಿಬಿಡಿಸಿ ಹೇಳತೊಡಗಿದರು. ಪೂರ್ವಾಶ್ರಮದಲ್ಲಿ ನನ್ನ ಅಣ್ಣನೆನಿಸಿದ ಆಚಾರ್ಯರಿಗೆ ಜ್ವರ ಬಂದು ಈಗಾಗಲೇ ಮತಿವಿಭ್ರಮ ಉಂಟಾಗಿದೆ ಯೆಂದು ತಿಳಿಯಿತು. ನನ್ನನ್ನು ಕರೆದುಕೊಂಡು ಬರಲೆಂದೆ ತಮಗೆ ತಿಂಡಿವನಕ್ಕೆ ಹೋಗಲು ಹೇಳಲಾಗಿತ್ತೆಂದೂ ಆದರೆ ಕಾಂಚೀಪುರದಲ್ಲಿಯೆ ನಾನು ಭೆಟ್ಟಿಯಾದದ್ದು ಅನುಕೂಲವಾಯಿತೆಂದೂ ಅವರು ಹೇಳಿದರು. ಅಂತೆಯೆ ನನ್ನನ್ನು ನಮ್ಮ ಕುಟುಂಬದ ಇತರರಿಗಿಂತ ಮೊದಲೇ ಕರೆದೊಯ್ಯಲಾಗುತ್ತಿದೆಯೆಂದೂ ತಿಳಿಸಿದರು. ಈ ಅನಿರೀಕ್ಷಿತವಾದ ವಾರ್ತೆಯಿಂದ ನನಗೆ ಏನೂ ತಿಳಿಯದಂತಾಯಿತು. ನಾನು ಬಂಡಿಯಲ್ಲಿಯೇ ಸಾಷ್ಟಾಂಗವೆರಗಿ "ರಾಮ, ರಾಮ" ಎಂದು ದೇವರ ನಾಮವನ್ನು ಸ್ತುತಿಸತೊಡಗಿದೆನು.

ನನ್ನ ತಾಯಿ ಇತರರೊಡನೆ, ನಾವು ಕಲವಾಯಿ ಮುಟ್ಟಿದ ನಂತರ, ಕೆಲ ಸಮಯದ ಮೇಲೆ ಬಂದಳು. ತನ್ನ ಸೋದರಿಯನ್ನು ಸಮಾಧಾನಪಡಿಸುವ ಉದ್ದೇಶದಿಂದ ಅವಳು ಅಲ್ಲಿಗೆ ಬಂದಿದ್ದರೆ ಅವಳಿಗಾಗಿ ಬೇರೆಯೇ ಕಾದಿತ್ತು. ಈಗ ಅವಳನ್ನೇ ಇತರರು ಸಂತಯಿಸುವ ಪ್ರಸಂಗ ಒದಗಿಬಂದಿತ್ತು!

ನಾನು ಸಂನ್ಯಾಸ ಸ್ವೀಕರಿಸಿದ್ದೇನೋ ನಿಜ. ಆದರೆ ಅದು ನಾನಾಗಿಯೆ ಃಸರ್ವಸಂಗಪರಿತ್ಯಾಗ ಮಾಡಿದುದರ ಪರಿಣಾಮವೇನಲ್ಲ. ಅಲ್ಲದೆ ಯಾರೊಬ್ಬ ಗುರುಗಳಡಿಯಲ್ಲಿದ್ದುಕೊಂಡು ಅಭ್ಯಾಸ ಮಾಡಿದ ಅರ್ಹತೆಯು ನನ್ನಲ್ಲಿರಲಿಲ್ಲ. ನನ್ನ ಸಂನ್ಯಾಸಾಶ್ರಮದ ಮೊದಲ ದಿನದಿಂದಲೂ ರಾಜವೈಭವದ ಸುಖಸೌಕರ್ಯಗಳೂ ಹೊಣೆಗಾರಿಕೆಗಳೂ ನನ್ನನ್ನು ಮುತ್ತಿಬಿಟ್ಟವು.

ಆದರೆ ನಾನು ಸಂನ್ಯಾಸ ಸ್ವೀಕರಿಸಿದಾಗ ದಕ್ಷಿಣ ಅರ್ಕಾಟ್ ಜಿಲ್ಲಾ ನ್ಯಾಯಾಲಯದಲ್ಲಿ ತುಮ್ಮಲೂರು ರಾಮಕೃಷ್ಣಯ್ಯ ಹಾಗು ಅಡಯಪ್ಪಲಮ್ ಪಶುಪತಿ ಅಯ್ಯರ್ ಎಂಬಿಬ್ಬರು ಸದ್ಗೃಹಸ್ಥರು ನೌಕರಿಗಿದ್ದರು. ಅವರು ನನ್ನ ಗುರುಗಳ ಗುರುವಿನ ಪರಮ ಶಿಷ್ಯರಾಗಿದ್ದರು. ಆಗ ಅವರಿಬ್ಬರೂ ಕಲವಾಯಿಯಲ್ಲಿಯೆ ಇದ್ದರು. ನನ್ನ ತಾರುಣ್ಯದ ದಿನಗಳಲ್ಲಿ ನನ್ನ ಜೀವನವು ಮಹಾಮಠದ ಪೀಠಸ್ಥ ಸಂನ್ಯಾಸಿಗೊಪ್ಪುವ ರೀತಿಯಲ್ಲಿಯೇ ನಾನು ಬೆಳೆಯುವಂತೆ ನನಗೆ ಸಹಾಯ ಮಾಡಬೇಕೆಂದು ಅವರು ದೃಢ ನಿಶ್ಚಯ ಮಾಡಿದ್ದರೆಂದು ನನಗೆ ಅನಂತರ ಸ್ಪಷ್ಟವಾಯಿತು.

ರಾಮಕೃಷ್ಣಯ್ಯನವರು ನಿರ್ಲಿಪ್ತ ಮನೋಭಾವವುಳ್ಳವರಾದರೂ ಸಂಸಾರದ ತಾಪತ್ರಯಗಳು ಅವರಿಗೆ ಮಿತಿಮೀರಿ ಹೆಚ್ಚಿದ್ದರಿಂದ ಆ ಕೆಲಸದ ಪೂರ್ಣ ಹೊಣೆಯನ್ನು ಪಶುಪತಿ ಅಯ್ಯರರೆ ಹೊರಬೇಕಾಗಿಬಂತು. ಪಶುಪತಿ ತಮ್ಮ ವೇಳೆಯ ಬಹುಭಾಗವನ್ನು ಏಕಾಂತದಲ್ಲಿ ಧ್ಯಾನಸ್ಥರಾಗಿರುವುದಕ್ಕೂ ವೇದಾಂತ ಪ್ರಕರಣಗಳು ಹಾಗು ಶ್ರೀ ಶಂಕರಾಚಾರ್ಯರ ಕೃತಿಗಳನ್ನು ಓದುವುದರಲ್ಲಿಯೂ ವ್ಯಯಿಸುತ್ತಿದ್ದರು.

ಮುಂದೆ ಕೆಲವೇ ದಿನಗಳಲ್ಲಿ ಸರಕಾರಿ ಸೇವೆ

ಯಿಂದ ಪಶುಪತಿ ನಿವೃತ್ತರಾದರು. ಅನಂತರ ಅವರು ಮಠದಲ್ಲಿಯೇ ಬಂದು ಇರಲಾರಂಭಿಸಿ ನನ್ನ ಪ್ರತಿಯೊಂದು ಕೃತಿ, ಮಾತು ಇಷ್ಟೇ ಏಕೆ ನಾನು ಕಣ್ಣು ಮಿಳುಕಿಸುವುದರ ಮೇಲೆಯೂ ಸದಾಕಾಲ ಕಣ್ಣಿಟ್ಟರು. ಮಠದ ಆಡಳಿತದ ಮೇಲ್ವಿಚಾರಣೆ ಮಾಡಲೋಸುಗವೆಂದು ತಮ್ಮ ಧ್ಯಾನ ಸಮಯವನ್ನೂ ಅವರು ಕೆಲ ಮಟ್ಟಿಗೆ ಕಡಿಮೆ ಮಾಡಿದರು.

ಆಗಾಗ ಅವರು ನನ್ನನ್ನು ಪ್ರತ್ಯೇಕವಾಗಿ ಕಂಡು ತಾವು ನನ್ನಲ್ಲಿ ಕಂಡ ಕುಂದು ಕೊರತೆಗಳೆಲ್ಲವನ್ನೂ ಸ್ಪಷ್ಟವಾಗಿ ತಿಳಿಸಿ ಅವುಗಳು ಇಲ್ಲವಾಗುವಂತೆ ನಾನು ಏನು ಏನು ಮಾಡಬೇಕೆಂಬ ಬಗ್ಗೆ ಸೂಚನೆಗಳನ್ನಿತ್ತು, ಈ ಸೂಚನೆಗಳನ್ನು ನಾನು ತಪ್ಪದೇ ಪಾಲಿಸಬೇಕೆಂದು ದೈನ್ಯದಿಂದ ಬೇಡಿಕೊಳ್ಳುತ್ತಿದ್ದರು. ಒಮ್ಮೊಮ್ಮೆ ಅವರು ಬಹು ಕಟುವಾಗಿ ನನಗೆ ಅನ್ನುವ ಪ್ರಸಂಗಗಳೂ ಬರುತ್ತಲಿದ್ದವು. ಅಂಥ ಸಮಯದಲ್ಲಿ ಅವರು ಅತ್ಯಂತ ವಿನಯದಿಂದ ಶ್ರೇಷ್ಠ ಆಶ್ರಮದಲ್ಲಿರುವ ನನಗೆ ಬಗೆಯುತ್ತಿರುವ ಈ ಎಲ್ಲ "ಅಪರಾಧ"ಗಳಿಗಾಗಿ ನಾನು ವಯಸ್ಕನಾಗಿ ಪೂರ್ಣ ಸಂನ್ಯಾಸಿಯಾದಾಗ ತಾವು ಪ್ರಾಯಶ್ಚಿತ್ತ ಪಡೆಯುವುದಾಗಿ ಹೇಳುತ್ತಿದರು.

ನಿತ್ಯವೂ ಪಶುಪತಿ ಅಯ್ಯರ್ ತಾವು ಭೆಟ್ಟಿಯಾದ ತಮ್ಮ ಮಿತ್ರರೆಲ್ಲರಿಗೂ ಅಂತರ್ಮುಖರಾಗಲು ಉಪದೇಶಿಸುತ್ತಿದ್ದರು. ಅವರೊಂದಿಗೆ ಬೇಕಾದಷ್ಟು ವಾದ ಮಾಡಿ ಲೌಕಿಕತೆಯ ಲೋಪದೋಷಗಳನ್ನೆತ್ತಿ ತೋರಿಸಿ ಉಪನಿಷತ್ತು ಹಾಗು ಶಂಕರರ ಪ್ರಕರಣಗಳು ಅವರಿಗೆ ದಾರಿ ತೋರಬಹುದೆನ್ನುತ್ತಿದ್ದರು.

ಅವರು ೧೯೨೬ ರ ವರೆಗೆ, ಅಂದರೆ ೧೮ ವರುಷ ಸದಾಕಾಲ ನನ್ನೊಡನಿದ್ದು ನನ್ನ ಶಂಕರ ಭಾಷ್ಯ ಪಾಠಗಳಲ್ಲಿ ಭಾಗವಹಿಸುತ್ತಿದ್ದರು. ನನಗಾಗಿ ಅವರು ಸೊಳ್ಳೆಗಳು ಮತ್ತು ಆನೇಕಾಲು ರೋಗಕ್ಕಾಗಿ ಪ್ರಸಿದ್ಧವಿರುವ ಕುಂಭಕೋಣದಲ್ಲಿದ್ದು ಫಿಲೇರಿಯಾಸಿಸ್ ರೋಗ ಹಾಗು ಜ್ವರ ತಾಪಗಳಿಂದ ಬಳಲಿದರು. ಆದರೂ ಅವರು ನನ್ನನ್ನು ಬಿಟೆ,ರಲು ಒಪ್ಪಲಿಲ್ಲ.

ಅವರು ಕಡ್ಡಾಲೂರಿನಲ್ಲಿ ತಮ್ಮ ಮನೆಯಲ್ಲಿ ಆರು ತಿಂಗಳು ಹಾಸಿಗೆ ಹಿಡಿದರು. ಆಗ ಒಮ್ಮೆ ನಾನು ಕಡ್ಡಾಲೂರಿಗೆ ಹೋದಾಗ ನಮ್ಮ ಮೆರವಣಿಗೆ ಅವರ ಮನೆಯೆದುರು ಹಾಯಿತು. ಆಗ ಅವರು ಹೊರಬಂದು ಮಠದ ಆನೆಯನ್ನು ತಟ್ಟಿದರು. ಅದೇ ರಾತ್ರಿ ಅವರು ತಮ್ಮ ಕೊನೆಯುಸಿರನ್ನೆಳೆದರು.

ಪಶುಪತಿ ಅಯ್ಯರರ ಜೀವನವೆಲ್ಲ ಇತರರಿಗಾಗಿ ಅಪಾರ ಪ್ರೇಮದಿಂದ ತುಂಬಿತ್ತು. ಅದನ್ನು ವ್ಯಕ್ತಪಡಿಸುವಲ್ಲಿ ಅವರಿಗೆ ಭಯವೆಂಬುದು ಇರಲಿಲ್ಲವಷ್ಟೇ ಅಲ್ಲ, ಅದಕ್ಕಾಗಿ ಅವರು ಯಾರ ಬಗ್ಗೆಯೂ ಪಕ್ಷಪಾತವೆಸಗಲಿಲ್ಲ.

೧೯೨೩ ರಲ್ಲಿ ತ್ರಿಚನಾಪಳ್ಳಿ ಜಿಲ್ಲೆಯ ಪ್ರವಾಸ ಕೈಕೊಂಡಾಗ ನಾನೊಂದು ಹಳ್ಳಿಯಲ್ಲಿ ತಂಗುವ ಪ್ರಸಂಗ ಬಂತು. ಅಲ್ಲಿ ಸುಮಾರು ಹನ್ನೆರಡು ವರ್ಷದ ಮುಗ್ಧ ಬಾಲಿಕೆಯೊಬ್ಬಳು ತನ್ನ ತಮ್ಮ ಸುಳ್ಳು ಮಾತಾಡಿದುದಕ್ಕಾಗಿ ಅವನಿಗೆ ಬುದ್ಧಿ ಹೇಳುತ್ತಿದ್ದುದನ್ನು ಕಂಡೆ. ಸತ್ಯದ ಬಗ್ಗೆ ಅವಳಲ್ಲಿನ ಶ್ರದ್ಧೆ, ತನ್ನ ತಮ್ಮನ ಬಗೆಗೆ ಅವಳಲ್ಲಿ ಪ್ರೇಮ ಅವನು ಕೆಡದಂತೆ ನೋಡಿಕೊಳ್ಳಲು ಅವಳನ್ನು ಪ್ರೇರೇಪಿಸಿರಬೇಕು. ಸಾಧುಸಂತರ ಉಪದೇಶಕ್ಕಿಂತ ಇದು ಎಷ್ಟೋ ಮಿಗಿಲು. ಅನಂತರ ಇಷ್ಟೊಂದು ವರುಷಗಳುರುಳಿದರೂ ಈ ಘಟನೆ ಅಚ್ಚಳಿಯದೆ ನನ್ನ ಮನದಲ್ಲಿ ಉಳಿದಿದೆ.

ನಾನು ಕೇರಳದ ಪ್ರವಾಸದಲ್ಲಿದ್ದಾಗ ಒಮ್ಮೆ ಸಾರ್ವಜನಿಕ ವಾಸಸ್ಥಳವೊಂದರಲ್ಲಿ ಉಳಿದುಕೊಳ್ಳಬೇಕಾಯಿತು. ನಮ್ಮ ಕೋಣೆಯ ಹತ್ತಿರದ ಕೋಣೆಯಲ್ಲಿ ಕೆಲವು ಹಿರಿಯ ನಂಬೂದ್ರಿ ಬ್ರಾಹ್ಮಣರು ಮಾತನಾಡುತ್ತ ಕುಳಿತಿದ್ದರು. ಅವರಲ್ಲಿ ಒಬ್ಬರು ತಮ್ಮ ನಿತ್ಯ ಪೂಜೆ ಮುಗಿಸ

ಲೆಂದು ದೇವರ ಪೆಟ್ಟಿಗೆಯನ್ನು ತೆಗೆದರು. ಆದರೂ ಹರಟೆಯಲ್ಲಿ ಅವರೂ ಭಾಗವಹಿಸಿದ್ದರು. ಕೆಲ ಸಮಯದ ನಂತರ ತಮ್ಮ ತಪ್ಪಿನ ಅರಿವು ಅವರಿಗಾಯಿತೆಂದು ತೋರಿತು. ಕೂಡಲೇ ಅವರು ತಮ್ಮ ದೇವರ ಪೆಟ್ಟಿಗೆಯನ್ನು ಕಟ್ಟಿಟ್ಟರು. ಅದನ್ನು ಕಂಡು ಇತರರು ಅದೇಕೆಂದು ಕೇಳಿದಾಗ ಹರಟೆ ಹೊಡೆಯುತ್ತಿರುವುದರಿಂದ ದೇವರ ಪೂಜೆಗೆ ಅವಶ್ಯವಾದ ಮಾನಸಿಕ ಸ್ತಿಮಿತವನ್ನು ತಾವು ಕಳೆದುಕೊಂಡಿರುವುದಾಗಿಯೂ ಹಾಗೆಯೇ ಪೂಜೆಗೈದರೆ ಅದು ತೋರಿಕೆಗೆ ಮಾತ್ರವಾಗುವುದರಿಂದ ಆ ದಿನ ಪೂಜೆ ಮಾಡದಿರಲು ನಿರ್ಧರಿಸಿರುವುದಾಗಿಯೂ ಉತ್ತರಿಸಿದರು.

ವೈಯಕ್ತಿಕ ಧರ್ಮಾಚರಣೆಯಲ್ಲಿ ಆ ಬ್ರಾಹ್ಮಣ ಅಂದು ತೋರಿದ ಪ್ರಾಮಾಣಿಕತೆ ಎಂದೂ ಅಳಿಯದ ಪರಿಣಾಮವನ್ನು ನನ್ನ ಮೇಲೆ ಮಾಡಿದೆ.

ಉತ್ತರ ಅರ್ಕಾಟ್ ಜಿಲ್ಲೆಯ ಗಡಿ ಹಳ್ಳಿಯೊಂದರಲ್ಲಿ ೧೯೨೯ರಲ್ಲಿ ನಾನೊಬ್ಬ ಸಂನ್ಯಾಸಿಯನ್ನು ಕಂಡೆ. ಅವನಿಗೆ ತಮಿಳು ಇಲ್ಲವೆ ತೆಲಗು ಬರುತ್ತಿರಲಿಲ್ಲ; ಮರಾಠಿ, ಹಿಂದಿಗಳನ್ನು ಮಾತ್ರ ಅವನು ಬಲ್ಲನು. ರೈಲಿನ ಮೂಲಕ ರಾಮೇಶ್ವರಕ್ಕೆ ಹೋಗಿ ಬಂದುದಾಗಿಯೂ ದಾರಿಯಲ್ಲಿ ತನ್ನ ದಂಡ ಕಳೆದುಹೋದುದಾಗಿಯೂ ಅವನು ನನಗೆ ಹೇಳಿದನು. ಅಲ್ಲದೆ ಹೊಸ ದಂಡ ಸಿಕ್ಕುವವರೆಗೆ ಅವನು ಉಪವಾಸ ಮಾಡುತ್ತಿರುವಂತೆ ಕಂಡಿತು ಆದುದರಿಂದ ಅವನಿಗೆ ದಂಡವೊಂದನ್ನೀಯಲಾಯಿತು. ನಾನು ತನ್ನ ಆಶ್ರಮಧರ್ಮವನ್ನು ರಕ್ಷಿಸಿದೆನೆಂದು ಅವನು ಅಂದಿನಿಂದ ನನ್ನನ್ನು ತನ್ನ ಗುರುವೆಂದು ತಿಳಿಯಲಾರಂಭಿಸಿದನು. ಆಗಲೇ ಅವನು ಎಂಬತ್ತರ ಗಡಿಯನ್ನು ದಾಟಿದ್ದನು. ೧೯೪೫ ರಲ್ಲಿ ಸಿದ್ಧಿಪಡೆಯುವವರೆಗೆ ಅವನು ನನ್ನನ್ನು ಬಿಟ್ಟಿರಲು ಒಂದು ಕ್ಷಣ ಕೂಡ ಒಪ್ಪಲಿಲ್ಲ.

೧೯೨೯ ರ ಚಾತುರ್ಮಾಸ್ಯದಲ್ಲಿ ಅವನು ನಮ್ಮಲ್ಲಿಗೆ ಬಂದು ಕೆಲ ದಿನಗಳಾಗುವುದರಲ್ಲಿಯೆ ನಾನು ಸುಮಾರು ೪೦ ದಿನಗಳವರೆಗೆ ಚಳಿಜ್ವರದಿಂದ ಬಳಲಿದೆನು. ಅದುವರೆಗೆ ಯಾರೂ ನನ್ನನ್ನು ಮುಟ್ಟುತ್ತಿರಲಿಲ್ಲ. ಆದರೆ ಆಗ ಇತರರ ಸಹಾಯವಿಲ್ಲದೆಯೆ ನಿಲ್ಲುವುದು ಕೂಡ ನನಗೆ ಅಸಾಧ್ಯವಾಗಿ ಪರಿಣಮಿಸಿತು. ಈ ವೃದ್ಧ ಸಂನ್ಯಾಸಿ ನನ್ನ ಸೇವೆ ಮಾಡುವುದು ತನ್ನ ಕರ್ತವ್ಯವೆಂದು ಬಗೆದು ಅದಕ್ಕೆ ಮುಂದಾದನು.

ಅವನು ತೀರ ಸಿಡುಕಿನ ಸ್ವಭಾವದವನು. ಅವನ ವಾಣಿ ಅಧಿಕಾರಯುತ ದರ್ಪದಿಂದಲೇ ಕೂಡಿರುತ್ತಿತ್ತು. ಅಂತೆಯೆ ಎಲ್ಲರೂ ಅವನನ್ನು ಎದುರುಹಾಕಿಕೊಳ್ಳಲು ಅಂಜುತ್ತಿದ್ದರು. ಮಧ್ಯಭಾರತದ ದೇವಾಸ ಸಂಸ್ಥಾನದ ಕಂದಾಯ ಖಾತೆಯಲ್ಲಿ ಅವನು ನಿವೃತ್ತ ಅಧಿಕಾರಿಯಂತೆ. ಅವನ ದರ್ಪದೆದುರು ನಾನಾಸಾಹೇಬ ಪೇಶ್ವೆ ಹಾಗೂ ಝಾಂಸಿ ರಾಣಿ ಲಕ್ಷ್ಮೀಬಾಯಿ ಕೂಡ ತಲೆ ತಗ್ಗಿಸಲೇಬೇಕಾಗುತ್ತಿತ್ತೇನೊ!

ನನ್ನ ಪಾದಪೂಜೆ ಮಾಡುವುದನ್ನು ಒಂದು ದಿನ ಕೂಡ ಅವನು ತಪ್ಪಿಸಲಿಲ್ಲ. ಅದನ್ನು ಬಿಡಿಸಲು ಯಾರೂ ಸಮರ್ಥರಾಗಲಿಲ್ಲ. ಈ ಪೂಜೆಯ ಸಮಯದಲ್ಲಿ ಅವನ ಕಣ್ಣೀರು ಧಾರೆ ಧಾರೆಯಾಗಿ ಹರಿಯುತ್ತಿತ್ತು.

ಒಮ್ಮೆ ಕಾಂಚಿಯಲ್ಲಿ ಯಾತ್ರೆಗೆಂದು ಬಂದ ಅವನ ಸಂಬಂಧಿಕನೊಬ್ಬನು ಅವನೊಂದಿಗೆ ಮಾತಾಡಿದನಂತರ ನನ್ನೆಡೆಗೆ ಬಂದು ನನ್ನನ್ನು ತರಾಟೆಗೆ ತೆಗೆದುಕೊಂಡನು. ತನ್ನ ಆಯುಷ್ಯದ ಶತಮಾನವನ್ನು ಸಮೀಪಿಸಿದ ಒಬ್ಬನು ನನ್ನನ್ನು ಯಾವ ದೇವರಿಗಿಂತಲೂ ಹೆಚ್ಚೆಂದು ಭಾವಿಸುತ್ತಿರುವಾಗ ಅದಕ್ಕೆ ಪ್ರತಿಯಾಗಿ ನಾನೇನನ್ನೂ ಮಾಡದಿರುವುದಕ್ಕಾಗಿ ಅವನು ಆಶ್ಚರ್ಯ ವ್ಯಕ್ತ ಮಾಡಿದನು. ನನ್ನ ಸ್ವಭಾವಸಿದ್ಧ ಪೊಳ್ಳುತನದ ಮೂಲಕ ಅದಕ್ಕೆ ಯಾವ ಪ್ರತಿಕ್ರಿಯೆ ವ್ಯಕ್ತಪಡಿಸಲೂ ನನ್ನಿಂದಾಗಲಿಲ್ಲ.

ಒಮ್ಮೆ ತಿರುಪತಿಗೆ ಹೋದಾಗ ನಮ್ಮ ಪರಿ

ನೀವು







ಕೊಳ್ಳುವಾಗ

ಜೂಜು







ಆಡ

ಬೇಡರಿ

ಜೀವನ ಮತ್ತು ಸೌಂದರ್ಯವು ಜೂಜಾಡಲು ಬಹಳೇ ಮೌಲ್ಯವಾದವುಗಳು:— ಆದರೆ ನಿಮಗೆ ನಿಮ್ಮ ನಿಮ್ಮ ಅದೃಷ್ಟವನ್ನು ಪರೀಕ್ಷಿಸುವದೇ ಆಡ ಪಕ್ಷಕ್ಕೆ ನಿಮಗೆ ಬೇಕಾದ್ದನ್ನು, ಪಣ ತೊಡಿರಿ— ಆದರೆ ನಿಮ್ಮ ಸೌಂದರ್ಯವನ್ನು ಮಾತ್ರ ಬಿಟ್ಟು, ಒಮ್ಮೆ, ನಿಮ್ಮ ಶುದ್ಧವಾದ ಮತ್ತು ಜಾಜ್ವಲ್ಯವಾದ ಕಾಂತಿಯನ್ನು ನಿರ್ಲಕ್ಷಿಸಿದರೆ, ಜಗತ್ತಿನ ಯಾವ ಶಕ್ತಿಯೂ ಅದನ್ನು ಮರಳಿ ಕೊಡಲಾರದು. ನಿಮ್ಮ ಸೌಂದರ್ಯ ಕಾಂತಿಗಾಗಿ "ಅಪಘಾನ ಸ್ನೋ" ವನ್ನು ಅವಲಂಬಿಸಿರಿ. ಸೌಂದರ್ಯ ವೃದ್ಧಿಸುತ್ತದೆ.... ಅವು ನಿಜವಾಗಿಯೂ ಒಳ್ಳೇಯವಾಗಿರುವವು....
ಅವಲಂಬನೀಯ........
ಯೋಗ್ಯ— ಬೆಲೆಯುಳ್ಳವು

# ಅಫಘಾನ ಸ್ನೋ

## ಸೌಂದರ್ಯ ವೃದ್ಧಿಸುತ್ತದೆ !

ಈ. ಎಸ್. ಪಾಟನವಾಲಾ,
ಮುಂಬಯಿ-೨೭ (ಭಾರತ)

ವಾರದಲ್ಲಿ ಈ ವೃದ್ಧ ಸ್ವಾಮಿಯೂ ಇದ್ದನು. ನಾನು ಬೆಟ್ಟವನ್ನೇರಿ ಬಾಲಾಜಿಯ ಪೂಜೆ ಮಾಡಿ ಮರಳುತ್ತಿರುವಂತೆಯೆ ಹೇಗೊ ಈ ವೃದ್ಧನು ಕೂಡ ಬೆಟ್ಟವನ್ನೇರಿ ನಮ್ಮನ್ನು ಎದುರುಗೊಂಡನು. ಅವನ ವಯಸ್ಸು, ಆಶ್ರಮ ಹಾಗು ನಮ್ಮ ಮಠದೊಂದಿಗೆ ಅವನಿಗಿರುವ ಸಂಬಂಧವನ್ನು ಕಂಡು ದೇವಸ್ಥಾನದ ಅಧಿಕಾರಿಗಳು ಈ ಸಂನ್ಯಾಸಿಗೆ ಬಾಲಾಜಿಯ ದರ್ಶನ ಮಾಡಿಸಲು ವಿಶೇಷ ವ್ಯವಸ್ಥೆ ಮಾಡುವುದಾಗಿ ಹೇಳಿದರು. ಕೂಡಲೇ ಅವನು ನನ್ನ ಪಾದಗಳ ಮೇಲೆಬಿದ್ದು, "ಇವರೇ ನನ್ನ ಬಾಲಾಜಿ. ಕ್ಷಮಿಸಿರಿ, ನಿಮ್ಮ ಕೊಡುಗೆಯನ್ನು ಸ್ವೀಕರಿಸಲಾರೆ" ಎಂದುಸುರಿದನು! ಬಾಲಾಜಿಯ ದರ್ಶನವಿಲ್ಲದೆಯೆ ಅವನು ಮರಳಿದನು.

ಇದಲ್ಲದೆ ಮತ್ತಿಬ್ಬರು ವ್ಯಕ್ತಿಗಳೊಂದಿಗೆ ನನ್ನ ಸಂಬಂಧ ಬೆಳೆದುಬಂದಿತು. ಸ್ವಭಾವದಿಂದ ಅವರಿಬ್ಬರೂ ಈ ವೃದ್ಧ ಸಂನ್ಯಾಸಿಗಿಂತ ತೀರ ಭಿನ್ನವಾಗಿದ್ದರು. ಆ ಇಬ್ಬರಿಗೂ ಒಬ್ಬರಿಗೊಬ್ಬರ ಪರಿಚಯವಿರಲಿಲ್ಲವಷ್ಟೆ ಅಲ್ಲ, ಅವರ ವಯಸ್ಸಿನಲ್ಲಿಯೂ ೩ ವರುಷಗಳ ಅಂತರವಿತ್ತು. ಆದರೂ ಅವರ ವಿಚಾರ ಸರಣಿ ಹಾಗೂ ಕೃತಿಗಳು ಒಂದೇ ಬಗೆಯವಾಗಿದ್ದವು.

ನನ್ನ ಪಾದಗಳನ್ನು ಪೂಜಿಸುವಾಗ ಅವರಿಬ್ಬರಿಗೂ ಅಮಿತಾನಂದವಾಗುತ್ತಿತ್ತು. ನಿತ್ಯ ಹಗಲು ರಾತ್ರಿಯೆಲ್ಲ ನನ್ನ ಧ್ಯಾನದಲ್ಲಿಯೇ ಇರುತ್ತಿರುವುದಾಗಿಯೂ ಅದರಿಂದಲೇ ಎಂಥ ಆಪತ್ತನ್ನೂ ಹಗುರಾಗಿ ಎದುರಿಸಲು ಸಾಧ್ಯವಾಗಿದೆಯೆಂದೂ ಅವರು ನನಗೆ ಹೇಳುತ್ತಿದ್ದರು. ಆದರೆ ಅವರಿಗೆ ನನ್ನ ಕುಂದುಕೊರತೆಗಳೂ ನನ್ನ ಸ್ವಭಾವಸಿದ್ಧ ಅಧೈರ್ಯವೂ ತಿಳಿದುಬಂದಾಗ ನನ್ನ ಪಾದಪೂಜೆಯನ್ನು ಕೂಡಲೇ ನಿಲ್ಲಿಸಿಬಿಟ್ಟಿದ್ದಲ್ಲದೆ ಇತರರೂ ಹಾಗೆ ಮಾಡುವುದನ್ನು ತಡೆಗಟ್ಟಲು ಅವರು ಶಕ್ತಿಮೀರಿ ಪ್ರಯತ್ನಿಸಿದರು. ಈ ರೀತಿಯ ನನ್ನ ಪೂಜೆಯಿಂದಾಗಿಯೇ ನನಗೆ ಪೂರ್ಣ ಬೆಳೆಯುವುದು ಸಾಧ್ಯವಾಗಿಲ್ಲವೆಂದು ಅವರ ಸ್ಪಷ್ಟ ಅಭಿಪ್ರಾಯವಾಗಿತ್ತು.

ಅವರಿಬ್ಬರೂ ಲೌಕಿಕವನ್ನು ಪೂರ್ಣ ತೊರೆದು ನನ್ನನ್ನು ಸುಧಾರಿಸುವುದಕ್ಕಾಗಿಯೆ ತಮ್ಮ ಜೀವನವನ್ನು ಮೀಸಲಾಗಿಟ್ಟರು. ಅದಕ್ಕಾಗಿ ಅವರು ನನ್ನ ತಪ್ಪು ತಡೆಗಳನ್ನು ನನಗೆ ಮುಚ್ಚುಮರೆಯಿಲ್ಲದೆ ತಿಳಿಸಿ ತಿದ್ದಿಕೊಳ್ಳಲು ಬೇಡಿಕೊಳ್ಳುತ್ತಿದ್ದರು. ಅಲ್ಲದೆ ಅದಕ್ಕಾಗಿ ಅವರು ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಿದ್ದುದೂ ಉಂಟು.

**"ದೇವರು ಕೆಲವರನ್ನು ಬೇರೆಯವರಿಗಾಗಿ ತಮ್ಮ ಜೀವ ಸವೆಸಲೆಂದೇ ಸೃಷ್ಟಿಸಿರುತ್ತಾನೆ"** ಎಂಬುದೇ ಜೀವನದಲ್ಲಿ ನಾನು ಕಲಿತ ಪಾಠ. *



ಭಯಂಕರ ಬಿರುಗಾಳಿಯಿಂದಲೂ ನಮ್ಮನ್ನು ಪಾರು ಮಾಡಬಲ್ಲ ಶಕ್ತಿಯೆಂದರೆ ನಮ್ಮ ವಿಶ್ವಾಸ. ವಿಶ್ವಾಸದ ಸಹಾಯದಿಂದಲೇ ನಾವು ಸಾಗರಗಳನ್ನು ಲಂಘಿಸಬಹುದು. ಪರ್ವತಗಳನ್ನು ಎತ್ತಿ ಇಡಬಹುದು. ವಿಶ್ವಾಸವೇ ನಮ್ಮ ಅಂತರಂಗದೊಳಗಿನ ದೇವರು.

ವಿಶ್ವಾಸವಿಲ್ಲದಿದ್ದರೆ ಒಂದು ನಿಮಿಷದಲ್ಲಿ ಸೃಷ್ಟಿಯೆ ನಷ್ಟವಾಗಬಹುದು.

—ಗಾಂಧೀಜಿ

ಭೂಮಿಗೆ ಇಂದಿನ ಸ್ವರೂಪ ಬರಲು ಕೋಟಿ ಕೋಟಿ ವರ್ಷಗಳು ಹಿಡಿದವು

# ಭೂಮಿ ಹೇಗೆ ಹುಟ್ಟಿತು?



ಮುರಲೀಧರ

ಅನಾದಿಯಿಂದ, ಮಾನವ ಮರಗಳಿಂದಿಳಿದು ಬಂದು, ಇದು ಏನು? ಇದು ಹೇಗೆ? ಎಂಬ ಪ್ರಶ್ನೆಗಳನ್ನು ಕೇಳುವಷ್ಟು ವಿಚಾರ ಶಕ್ತಿಯನ್ನು ಸಂಪಾದಿಸಿಕೊಂಡಂದಿನಿಂದ, ಆತ ತಾನು ನಿಂತ ಭೂಮಿಯ, ತನ್ನ ತಲೆಯ ಮೇಲಣ ಆಕಾಶದ ಬಗ್ಗೆ ಪ್ರಶ್ನೆಗಳನ್ನು ಕೇಳುತ್ತ ಬಂದಿದ್ದಾನೆ. ಹಗಲಲ್ಲಿ ಗಗನವನ್ನು ಬೆಳಗುವ ಆ ಉರಿಯುವ ಪಿಂಡ, ರಾತ್ರಿಯಲ್ಲಿ ಹಾಲು ಚೆಲ್ಲುವ ಆ ಬೆಳ್ಳಿಯ ಬಟ್ಟಲು— ಇವೇನು? ಸೂರ್ಯ ಕಂತಿದೊಡನೆ ಕಣ್ಣು ಮಿಟುಕಿಸತೊಡಗುವ ಆ ತಾರೆಗಳೇನು? ನಾವು ಎಷ್ಟು ದೂರ ನಡೆದು ಹೋದರೂ ಮತ್ತೂ ಮುಗಿಯದ ಈ ಭೂಮಿ ಏತರ ಮೇಲೆ ನಿಂತಿದೆ? ಶರತ್ಕಾಲದೊಡನೆ ಬೆಳಗಿ, ಶಿಶಿರದೊಡನೆ ನಡುಗಿ, ವಸಂತದೊಡನೆ ಚಿಗುರಿ ಕಾಲದ ಚಕ್ರ ಗತಿಯ ಗುರುತುಗಳನ್ನು ಹಾಕುವ ನಮ್ಮ ಭೂಮಿ ಎಂದು ಮೊದಲಾಯಿತು? ಹೇಗೆ ಮೊದಲಾಯಿತು?

ಪ್ರತಿಯೊಂದು ಯುಗದಲ್ಲಿ ಪ್ರತಿಯೊಬ್ಬ ಚಿಂತಕ ಇದಕ್ಕೆ ಉತ್ತರ ಕೊಡಲು ಯತ್ನಿಸಿದ್ದಾನೆ. ಅನುಭವದ ಅಳವಿಗಿಂತ ಕಲ್ಪನೆಯ ಹೊಳವು ಹೆಚ್ಚಾಗಿದ್ದ ಮಾನವನ ಆದಿ ಕಾಲದಲ್ಲಿ ಈ ಪ್ರಶ್ನೆಗಳನ್ನು ಅದ್ಭುತ ರಮ್ಯವಾಗಿ ಉತ್ತರಿಸಲಾಗುತ್ತಿತ್ತು. ತನಗೆ ಕಂಡದ್ದರ ಮೇಲಿಂದ ಭೂಮಿ ಚಪ್ಪಟೆಯಾಗಿದೆಯೆಂದು ತೀರ್ಮಾನಿಸಿದ ಆದಿ ಭಾರತೀಯರು ಇದನ್ನು ಮಹಾ ಕೂರ್ಮವೊಂದರ ಬೆನ್ನ ಮೇಲೆ ನಿಂತ ನಾಲ್ಕು ಆನೆಗಳು ನಾಲ್ಕು ದಿಕ್ಕುಗಳಿಂದ ಎತ್ತಿ ಹಿಡಿದಿವೆಯೆಂದು ಕಲ್ಪಿಸಿದರು. ಇಜಿಪ್ಟಿನವರು ಭೂಮಿಯೆಂಬುದೊಂದು ಭಾರೀ ಕೋಣೆ, ಗಗನವೆಂಬುದೊಂದು ಲೋಹದ ಮುಚ್ಚಳ, ತಾರೆಗ-

ಳೆಂದರೆ ದೇವತೆಗಳು ತೂಗ ಹಾಕಿದ ದೀಪಗಳು ಎಂದರು. ಸೂರ್ಯನೆಂಬವ ದಿನಾಲೂ ಗಗನ ಪಥದಲ್ಲಿ ಸವಾರಿ ಮಾಡುವ ದೇವತೆಯೆನಿಸಿದ.

ಇದೆಲ್ಲ ಎಂದು ಪ್ರಾರಂಭವಾಯಿತು? ಇದಕ್ಕೆ ಒಂದೊಂದು ಕಡೆ ಒಂದೊಂದು ಉತ್ತರ ಕೊಡಲ್ಪಟ್ಟಿತು. ಎಂದೋ ಒಂದು ದಿನ ಇದು ಪ್ರಾರಂಭವಾಯಿತು ಎಂದು ಬಹುಮಂದಿ "ಋಷಿ"ಗಳು ಒಪ್ಪಿದವರೇ. "ನೋ ಸದಾಸಿತ್ ನಾ ಸದಾಸೀತ್ ತದಾನೀಂ" ಅಂದು ಇದೆ ಎಂಬುದೂ ಇದ್ದಿಲ್ಲ, ಇಲ್ಲವೆಂಬುದೂ ಇದ್ದಿಲ್ಲ — ಎಂದು ಉಪನಿಷತ್ತಿನ ಋಷಿಗಳು ಹೇಳಿ ಅನಂತರ ಪ್ರಪಂಚ ಸೃಷ್ಟಿಯಾಯಿತು ಎಂದು ಹೇಳಿದ್ದಾರೆ. "ಮೊದಲು ದೇವರು ಆಕಾಶವನ್ನೂ ಭೂಮಿಯನ್ನೂ ಮಾಡಿದ. ಆಗ ಭೂಮಿಗೆ ಆಕಾರವಿದ್ದಿಲ್ಲ, ಅದು ಶೂನ್ಯವಾಗಿತ್ತು...."ಎಂದು ಬೈಬಲ್ಲಿನ ದ್ರಷ್ಟಾರರು ಸಾರಿದ್ದಾರೆ.

ಆದಿಮ ತತ್ವ ಚಿಂತಕರ ಈ ಸ್ಫೂರ್ತಿ ಊಹನೆಯನ್ನು ಬಹುಮಟ್ಟಿಗೆ ಇಂದು ವಿಜ್ಞಾನ ದೃಢಪಡಿಸಿದೆ. ಆದರೆ ಸೃಷ್ಟಿಯ ಆದ್ಯಂತಗಳ ಪ್ರಶ್ನೆಗಳಿಗೆ ಖಚಿತವಾದ ಉತ್ತರ ಆದ್ಯರಿಂದ ಬರಲಿಲ್ಲ. ಕೆಲಕಾಲ ಪಶ್ಚಿಮದಲ್ಲಿ ಗ್ರೀಕರೂ ಪೂರ್ವದಲ್ಲಿ ಭಾರತೀಯರೂ ಸರಿಯಾದ ಉತ್ತರಕ್ಕೆ ಹತ್ತಿರ ಹತ್ತಿರ ಹೋಗುವಂತೆ ಕಂಡರು. ಪೈಥಾಗೊರಸನು (ಕ್ರಿ. ಪೂ. ೫೩೦) ಭೂಮಿಯೊಂದು ಗೋಲ, ಅದು ಗಗನದಲ್ಲಿ ನಿರಾಧಾರವಾಗಿ ನಿಂತಿದೆ ಎಂದ. ಅವನಿಂದ ಎರಡೂವರೆ ಶತಮಾನಾನಂತರ ಅರಿಷ್ಟಾರ್ಕಸನು ಭೂಮಿಯೇ ಸೂರ್ಯನ ಸುತ್ತ ತಿರುಗುತ್ತಿದೆಯೆಂದು ತರ್ಕಿಸಿದನು. ಭಾರತದಲ್ಲಿ ಪೌರಾಣಿಕರು ಭೂಮಿಯ ಆಕೃತಿಯನ್ನು ಕುರಿತು ಹುಲುಸು ಕಲ್ಪನೆಯಲ್ಲಿ ವಿಹರಿಸುತ್ತಿರುವಾಗ್ಗ ಭೂಮಿ ಗೋಲಾಕಾರವಾಗಿದೆಯೆಂದು ಜ್ಯೋತಿಷ ಶಾಸ್ತ್ರಗಳು ಸಾರುತ್ತ ಬಂದರು. ಕ್ರಿ. ಶ. ೫ನೇ ಶತಕದಲ್ಲಿ ಆರ್ಯಭಟ್ಟ ಭೂಮಿ ತನ್ನ ಅಚ್ಚಿನ ಸುತ್ತ ತಿರುಗುವುದರಿಂದಲೇ ಹಗಲಿರುಳುಗಳಾಗುತ್ತವೆಂದು ಬರೆದನು. ಇದಕ್ಕೆ ಬೆಂಬಲ ಸಿಗಲಿಲ್ಲವೆಂಬುದು ದುರ್ದೈವದ ಸಂಗತಿ.

ಯುರೋಪ್ ಏಶಿಯಗಳೆರಡರಲ್ಲೂ ವಿಜ್ಞಾನದ ತಾರ್ಕಿಕ ಪದ್ಧತಿಯ ವಿರುದ್ಧ ಪೌರಾಣಿಕ ಪಂಥದ ವಿಜಯವು ಸತ್ಯಶೋಧನೆಗೆ ಅಡ್ಡಗಾಲಿಕ್ಕಿತು. ವಿಜ್ಞಾನಿಗಳಿಗೆ ತಮ್ಮ ಮಾತುಗಳನ್ನು ಸಿದ್ಧಪಡಿಸಿ ಜನರಿಗೆ ತೋರಿಸುವ ಯಾವ ಉಪಕರಣವೂ ಇದ್ದಿಲ್ಲವಾಗಿ ಅವರು ಮೂಕರಾಗಬೇಕಾಯಿತು. ಆದರೆ ದೂರದರ್ಶಕದ ನಿರ್ಮಾಣವೂ ಅದರೊಡನೆ ಯುರೋಪಿನಲ್ಲಿ ಗೆಲಿಲಿಯೋ, ಕೋಪರ್ನಿಕಸ್, ನ್ಯೂಟನ್ನರಂಥ ವಿಜ್ಞಾನ ಬ್ರಹ್ಮರ ಕಾರ್ಯವೂ ಪರಿಸ್ಥಿತಿಯನ್ನು ಬದಲಿಸಿದವು.

ಈ ವಿಜ್ಞಾನಿಗಳು ತೆರೆದು ತೋರಿಸಿದ ವಿಶ್ವ ಯಾವ ಕಲ್ಪನಾ ವಿಲಾಸಕ್ಕಿಂತಲೂ ಅದ್ಭುತವಾಗಿತ್ತು. ಕೋಟಿ ಕೋಟಿ ಕೋಟಿ ಗಾವುದ ವಿಸ್ತಾರವಾದ ವಿಶ್ವದಲ್ಲಿ ಅಸಂಖ್ಯ ನಕ್ಷತ್ರಪುಂಜಗಳಲ್ಲೊಂದಾದ ಆಕಾಶ ಗಂಗೆಯ ಕೋಟ್ಯಂತರ ನಕ್ಷತ್ರಗಳಲ್ಲಿ ಒಂದು ಸಾಮಾನ್ಯ ನಕ್ಷತ್ರ ನಮ್ಮ ಸೂರ್ಯನೆಂದೂ ಅದರ ಸುತ್ತ ಪರಿಭ್ರಮಿಸುವ ಗೋಲ ಮಾಲೆಯಲ್ಲಿ ನಮ್ಮ ಭೂಮಿ ಒಂದೆಂದೂ ನಾವಿಂದು ಅರಿತಿದ್ದೇವೆ. ಆಕಾಶಗಂಗೆಯೆಂಬ ನಕ್ಷತ್ರ ಮಂಡಲದಲ್ಲಿ ನಮ್ಮ ಸೂರ್ಯ ಸೆಕೆಂಡಿಗೆ ೧೭೦ ಮೈಲು ವೇಗದಿಂದ ಸಾಗುತ್ತಿರುವಾಗ್ಗ ಅವನೊಡನೆ, ಅವನ ಸುತ್ತ, ಸೆಕೆಂಡಿಗೆ ೨೦ ಮೈಲು ವೇಗದಿಂದ ಪ್ರದಕ್ಷಿಣೆ ಹಾಕುತ್ತ, ಸ್ವತಃ ತನ್ನ ಅಚ್ಚಿನ ಸುತ್ತ ಗಂಟೆಗೆ ೧,೦೦೦ ಮೈಲಿನಂತೆ ತಿತ್ತಿರಿ ತಿರುಗುವ ಬುಗರಿಯಾದ ಈ ಭೂಮಿಯ ಮೇಲೆ ನಾವಿದ್ದೇವೆಂಬ ಆಶ್ಚರ್ಯಕರ ಅಂಶವಿಂದು ಸಿದ್ಧವಾಗಿದೆ.

ವಿಶ್ವದ ಸ್ವರೂಪವನ್ನೊಮ್ಮೆ ಸಂಶಯಾತೀತವಾಗಿ ಸಿದ್ಧಾಂತ ಪಡಿಸಿದ ಮೇಲೆ ವಿಜ್ಞಾನಿಗಳ ಕುತೂಹಲ ಭೂಮಿ ಎಂದು, ಹೇಗೆ ಹುಟ್ಟಿತು ?

ಎಂಬತ್ತ ತಿರುಗಿತು. ೧೬೫೪ ರಲ್ಲಿ ಐಯರ್ಲಂಡಿನ ಆರ್ಚಿಬಿಷಪ್ ಅಶರರು ಬೈಬಲ್ಲಿನ ಆಧಾರದಿಂದ, ಪ್ರಪಂಚಸೃಷ್ಟಿ ಕ್ರಿ. ಪೂ. ೪೦೦೪, ಅಕ್ಟೋಬರ ೨೬ ರಂದು ಬೆಳಗ್ಗೆ ೯ ಗಂಟೆಗೆ ಆಯಿತೆಂದು ಲೆಕ್ಕ ಹಾಕಿದ್ದರು. ಧರ್ಮಾಧಿಕಾರಿಗಳು ಅದಕ್ಕೆ ಮನ್ನಣೆ ಕೊಟ್ಟಿದ್ದರು. ಅದರ ವಿರುದ್ಧ ಮಾತಾಡುವುದೂ ಧರ್ಮದ್ರೋಹವೆನಿಸಿತ್ತು.

ಆದರೆ ೧೯ನೇ ಶತಮಾನದ ಆರಂಭದಲ್ಲಿ ತಲೆಯೆತ್ತಿದ ಭೂಗರ್ಭ ಶಾಸ್ತ್ರ ಈ ಊಹೆಯನ್ನು ಸಂಪೂರ್ಣವಾಗಿ ಅಲ್ಲಗಳೆಯಿತು. ಮಾನವ ನೆಲವನ್ನಗೆದ ಹಾಗೆ ಅಸಾಧ್ಯ ಸ್ಥಳಗಳಲ್ಲಿ ಅಸಾಧ್ಯ ಪದಾರ್ಥಗಳು ಗೋಚರಕ್ಕೆ ಬಂದವು. ಲೀಬಿಯಾದ ಮರುಭೂಮಿಯಲ್ಲಿ ಸಮುದ್ರ ಚಿಪ್ಪುಗಳು ಅಮೇರಿಕದ ವರ್ಮಾಂಚ್ ಪರ್ವತ ಶಿಖರದಲ್ಲಿ ತಿಮಿಂಗಿಲದ ಎಲುವು, ಇಂಗ್ಲಂಡಿನಲ್ಲಿ ತಾಳ ವೃಕ್ಷಗಳ ಪಳೆಯುಳಿಕೆಗಳು ಭೂಮಿಯ ಕಥೆ ಇಂದಿದ್ದಂತೆ ಹಿಂದಿದ್ದಿಲ್ಲವೆಂದು ತೋರಿಸಿದವು. ಇಂದಿನ ಮಾನವನಾಗಲಿ ಅವನ ಪೂರ್ವಜರಾಗಲಿ ಕಂಡು ಕೇಳಿರದ ಅಪೂರ್ವ ಜೀವಿಗಳ ಅವಶೇಷಗಳು ಭೂಮಿಯ ಗರ್ಭದ ಬೇರೆ ಬೇರೆ ಸ್ತರಗಳಲ್ಲಿ ಒಂದು ವಿಶಿಷ್ಟ ಕ್ರಮದಲ್ಲಿ ಸಿಕ್ಕಿದವು. ಇವೆಲ್ಲವೂ ಈ ಭೂಮಿ ಮಾತ್ರವಲ್ಲ, ಅದರಲ್ಲಿಯ ಪ್ರಾಣಿಗಳ ವಿಕಾಸ ಕೂಡ ಕೋಟ್ಯಂತರ ವರ್ಷಗಳನ್ನು ದಾಟಿ ಬಂದಿದೆಯೆಂದು ತೋರಿಸಿಕೊಟ್ಟವು.

ಅನಂತರ ಈ ಶತಮಾನದ ಆರಂಭದಲ್ಲಿ ಕಂಡು ಹಿಡಿದ ವಿಕಿರಣಶೀಲ (radio active) ಧಾತುಗಳ ಸ್ವಭಾವವು ಭೂಮಿಯ ವಯಸ್ಸಿನ ಪ್ರಶ್ನೆಯನ್ನು ತೀರ್ಮಾನಿಸಿದಂತೆಯೇ ಮಾಡಿತು. ಯುರೇನಿಯಂ, ಥೋರಿಯಂ, ರೇಡಿಯಂ ಕಾಲ ಕಳೆದಂತೆ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಹ್ರಾಸ ಹೊಂದುತ್ತ ಹೋಗುತ್ತವೆ; ಮತ್ತು ಈ ಹ್ರಾಸವು ಉಷ್ಣತೆ, ಒತ್ತಡ ಮೊದಲಾದ ಯಾವ ಬಾಹ್ಯ ಕಾರಣಗಳಿಂದಲೂ ಹೆಚ್ಚು ಕಡಿಮೆಯಾಗುವುದಿಲ್ಲ. ಈ ಹ್ರಾಸದ ಫಲವಾಗಿ ಪದಾರ್ಥಗಳ ಈ ಪರಮಾಣುಗಳು ಸಾವಕಾಶವಾಗಿ ಸೀಸದ ಪರಮಾಣುಗಳಾಗುತ್ತ ಹೋಗುವವು. ಹೀಗೆ ಒಂದು ರಾಶಿ ಯುರೇನಿಯಂದಿಂದ ಪ್ರತಿ ವರ್ಷ ಅದರ ತೂಕದ ೭೬೦ ಕೋಟಿಯಲ್ಲೊಂದು ಅಂಶದಷ್ಟು ಸೀಸ ಹುಟ್ಟುತ್ತದೆ. ಭೂಗರ್ಭದಲ್ಲಿ ಸಿಕ್ಕುವ ಯುರೇನಿಯಂ ಅದಿರಿನಲ್ಲಿ ಎಷ್ಟಂಶ ಸೀಸವಿದೆಯೆಂದು ತೂಗಿ ನೋಡಲು ಸಾಧ್ಯವಿದೆ. ತೂಗಿ ನೋಡಿ ಲೆಕ್ಕ ಹಾಕಿದರೆ ಆ ಯುರೇನಿಯಂ ಅದಿರು ಎಷ್ಟು ವರ್ಷ ಹಿಂದೆ ಭೂಗರ್ಭದಲ್ಲಿ ಉಂಟಾಯಿತೆಂದು ತಿಳಿಯಬಹುದು. ಭೂಮಿಯ ಬೇರೆ ಬೇರೆ ಭಾಗಗಳಲ್ಲಿರುವ ವಿಕಿರಣ ಶೀಲ ಧಾತುಗಳನ್ನು ಈ ರೀತಿಯಾಗಿ ಪರೀಕ್ಷಿಸಿದಾಗ ಅತಿ ಹೆಚ್ಚೆಂದರೆ ೨೫೦ ಕೋಟಿ ವರ್ಷ ಹಳೆಯ ಯುರೇನಿಯಂ ಇದೆಯೆಂದು ಸಿದ್ಧವಾಯಿತು. ಭವಿಯುೂ ಹೊರಮೈ ಅದೇ ಹೊತ್ತಿಗ ಘನರೂಪಕ್ಕೆ ಬಂತೆಂದು ಕೊಂಡರೆ ಈ ಭೂಮಿಯ ಜನ್ಮ ಸುಮಾರು ೩೦೦ ಕೋಟಿ ವರ್ಷಗಳ ಹಿಂದೆ ಉಂಟಾಯಿತೆಂದು ಅಂದಾಜು ಕಟ್ಟಬಹುದು. ಸಾಗರದಲ್ಲಿರುವ ಉಪ್ಪಿನ ಪ್ರಮಾಣ, ನಕ್ಷತ್ರಗಳ ಚಲನೆ ಮೊದಲಾದ ಬೇರೆ ಬೇರೆ ವಿಧಾನಗಳಿಂದ ಪರೀ-ಕ್ಷಿಸಿದಾಗ್ಯೂ ಈ ವಿಶ್ವಸೃಷ್ಟಿ ೨೦೦ ಕೋಟಿ ವರ್ಷಗಳಿಗಿಂತ ಈಚಿನದಲ್ಲ, ೫೦೦ ಕೋಟಿ ವರ್ಷಗಳಿಗಿಂತ ಆಚಿನದಲ್ಲ ಎಂದು ಖಂಡಿತವಾಗಿದೆ. ಹೀಗೆ ಹಿಂದೂ ಪುರಾಣಿಕರು ಹೇಳುವ ಯುಗ ಮತ್ತು ಕಲ್ಪಮಾನಗಳ ಲೆಕ್ಕಾಚಾರವು ಸತ್ಯಕ್ಕೆ ಹೆಚ್ಚು ಹತ್ತಿರವಾಗಿದೆ. ಅವರ ಲೆಕ್ಕದಂತೆ ಸೃಷ್ಟಿಯಾಗಿ ಇಂದಿಗೆ ೧೯೦ ಕೋಟಿ ವರ್ಷಗಳಾದವು. ಆದರೆ ಅವರು ಇದಕ್ಕೆ ಯಾವ ಕಾರಣವನ್ನೂ ಕೊಟ್ಟಿಲ್ಲವೆಂಬುದನ್ನು ಮರೆಯುವಂತಿಲ್ಲ. ಅವರ ಊಹೆ ಕೇವಲ ಕಾಕತಾಲ ನ್ಯಾಯದಿಂದ ಸರಿಹೊಂದಿರಲೂ ಬಹುದು.

ಭೂಮಿಯ ವಯಸ್ಸಿನ ಪ್ರಶ್ನೆಯನ್ನು ಬಗೆಹರಿಸಿದ ಮೇಲೆ ಅದು ಹೇಗೆ ಹುಟ್ಟಿತು ಎಂಬ ಪ್ರಶ್ನೆ ಏಳುತ್ತದೆ. ಇದು ವಿಜ್ಞಾನಿಗಳಲ್ಲಿ ಅತಿ ಚರ್ಚಾಸ್ಪದವಾದ ಕೂಟ ಪ್ರಶ್ನೆಯಾಗಿ ಉಳಿದಿದೆ. ಅವರು ಪ್ರಮೇಯಗಳನ್ನು ಮಂಡಿಸಿದ್ದಾರೆ, ಖಂಡಿಸಿದ್ದಾರೆ, ತಿದ್ದಿದ್ದಾರೆ, ತಿರಸ್ಕರಿಸಿದ್ದಾರೆ. ಅದು ಇಂದಿಗೆ ಎರಡು ಶತಮಾನಗಳಿಂದ ಹಾಗೆಯೆ ಸಾಗಿದೆ.

ಭೂಮಿ ಹೇಗೆ ಹುಟ್ಟಿತು ಎಂಬ ಪ್ರಶ್ನೆಯನ್ನು ತೆಗೆದು ಕೊಂಡಾಗ ಕೆಲ ನಿಶ್ಚಿತ ತಥ್ಯಗಳನ್ನು ನಾವು ಎದುರಿಸಬೇಕಾಗುತ್ತದೆ.

ಕೊಪರ್ನಿಕಸ್‌ನಿಂದೀಚೆಗೆ ಸೂರ್ಯನ ಸುತ್ತ ಪರಿಭ್ರಮಿಸುವ ಪೃಥ್ವಿ ಮೊದಲಾದ ಗ್ರಹಗಳ ಮತ್ತು ಅವುಗಳ ಸುತ್ತ ಪ್ರದಕ್ಷಿಣೆ ಮಾಡುವ ಉಪಗ್ರಹಗಳ ವರ್ತನೆಯನ್ನು ಪರಿಶೀಲಿಸಿದರೆ ಅನೇಕ ಸಾಮ್ಯಗಳು ಕಾಣಬರುತ್ತವೆ.

▭ ಅವೆಲ್ಲವೂ ಸೂರ್ಯನ ಸುತ್ತ ಒಂದೇ ದಿಶೆಯಲ್ಲಿ (ಪಶ್ಚಿಮದಿಂದ ಪೂರ್ವಕ್ಕೆ) ಪ್ರದಕ್ಷಿಣೆ ಹಾಕುತ್ತವೆ.

▭ ಯಾವ ದಿಶೆಯಲ್ಲಿ ಪ್ರದಕ್ಷಿಣೆ ಹಾಕುತ್ತವೊ ಅದೇ ದಿಶೆಯಲ್ಲಿ ತಮ್ಮ ಸುತ್ತ ಭ್ರಮಣ ಮಾಡುತ್ತವೆ.

▭ ಅವು ಯಾವ ದಿಶೆಯಲ್ಲಿ ಪ್ರದಕ್ಷಿಣೆ ಮಾಡುತ್ತವೆಯೋ ಅದೇ ದಿಶೆಯಲ್ಲಿ ಸೂರ್ಯನು ತನ್ನ ಅಕ್ಷದ ಸುತ್ತ ತಿರುಗುತ್ತಾನೆ.

▭ ಅವು ಯಾವ ದಿಶೆಯಲ್ಲಿ ತಮ್ಮ ಸುತ್ತ ತಿರುಗುತ್ತವೋ ಅದೇ ದಿಶೆಯಲ್ಲಿ ಅವುಗಳ (ಹೆಚ್ಚಿನ) ಉಪಗ್ರಹಗಳು ಆಯಾ ಗ್ರಹಗಳ ಸುತ್ತ ಪ್ರದಕ್ಷಿಣೆ ಹಾಕುತ್ತವೆ.

▭ ಅವೆಲ್ಲ ಗ್ರಹಗಳೂ ಸೂರ್ಯನ ಸುತ್ತ ಹೆಚ್ಚು ಕಡಿಮೆ ಒಂದೇ ಮಟ್ಟ(ಪಾತಳಿ)ದಲ್ಲಿ ಸುತ್ತುತ್ತವೆ.

▭ ಅವೆಲ್ಲವುಗಳ ಪ್ರದಕ್ಷಿಣೆಯ ಪಥಗಳೂ ಸುಮಾರಾಗಿ ವರ್ತುಲಾಕಾರವಾಗಿವೆ.



▭ ಸೂರ್ಯನಿಂದ ಆ ಗ್ರಹಗಳ ದೂರಗಳು ಒಂದು ವಿಶಿಷ್ಟ ನಿಯಮಕ್ಕೆ ಒಳಪಟ್ಟಂತೆ ಕಾಣುತ್ತದೆ.

ಇದನ್ನೆಲ್ಲ ನೋಡುವಾಗ ಪೃಥ್ವಿ ಮತ್ತು ಇತರ ಗ್ರಹಗಳು ಏಕ ಕಾಲದಲ್ಲಿ, ಒಂದೇ ಘಟನೆಯ ಪರಿಣಾಮವಾಗಿ ಉಂಟಾಗಿರಬೇಕೆಂದು ತರ್ಕಿಸುವುದು ತಪ್ಪಾಗಲಾರದು.

ಪೃಥ್ವಿ ಮತ್ತು ಸೂರ್ಯಮಾಲೆಯ ಇತರ ಗ್ರಹಗಳ ಉತ್ಪತ್ತಿ ಹೇಗಾಯಿತೆಂಬ ಬಗ್ಗೆ ಪ್ರಥಮತಃ ವ್ಯವಸ್ಥಿತ ತರ್ಕವನ್ನು ಮುಂದಿಟ್ಟವನೆಂದರೆ ಫ್ರೆಂಚ್ ನಿಸರ್ಗ ಶಾಸ್ತ್ರಿ ಬಫನ್. ೧೭೪೫ ರಲ್ಲಿ ಆತ ಮಂಡಿಸಿದ ಪ್ರಮೇಯ ಪ್ರಕಾರ ಕೋಟ್ಯಂತರ ವರ್ಷಗಳ ಹಿಂದೆ ಸೂರ್ಯನಿಗೂ ಮತ್ತಾವುದೋ ಅಷ್ಟೇ ಪ್ರಚಂಡವಾದ ಆಕಾಶ ಕಾಯಕ್ಕೂ ಆದ ತಾಕಲಾಟವೇ ಗ್ರಹಗಳ ಉದಯಕ್ಕೆ ಕಾರಣವಾಯಿತು. ಒಂದು ಮಹಾ "ಧೂಮಕೇತು" ದಾರಿ ತಪ್ಪಿ ಸೂರ್ಯನ ಮೇಲೆ ಎರಗಿದ್ದರಿಂದ ಸೂರ್ಯನಲ್ಲಿರುವ ಅನಿಲರೂಪಿ ಪದಾರ್ಥವು ಸಿಡಿದು ಹಾರಿತು. ಈ ಪದಾರ್ಥವೇ ಕಾಲಾಂತರದಲ್ಲಿ ತಣ್ಣಗಾಗಿ ಗ್ರಹಗಳಾದವು

ಎಂದಾತ ಹೇಳಿದ. "ಧೂಮಕೇತು"ಗಳು ತೀರ ಹಗುರಾದ ಆಕಾಶ ಕಾಯಗಳೆಂದೂ ಅವುಗಳ ತಾಕಲಾಟದಿಂದ ಗ್ರಹಗಳು ಹುಟ್ಟಿರಲಾರ ವೆಂದೂ ನಮಗಿಂದು ತಿಳಿದಿದೆ. ಅದರಿಂದ ಅನಂತರದ ವಿದ್ವಾಂಸರು ಧೂಮಕೇತುವಿನ ಬದಲು ಮತ್ತಾವುದೋ ಒಂದು ದಾರಿ ತಪ್ಪಿದ ನಕ್ಷತ್ರ ಸೂರ್ಯನಿಗೆ ತಾಕಲಾಡಿದ್ದರಿಂದ ಅಥವಾ ತೀರ ಹತ್ತಿರ ಹಾಯ್ದು ಹೋದದ್ದರಿಂದ ಸೂರ್ಯನ ಕುದಿಯುವ ಮೈಯಲ್ಲಿ ದೈತ್ಯಾಕಾರದ ಉಬ್ಬರವುಂಟಾಗಿ ಆ ನಕ್ಷತ್ರ ಅತಿ ಸಮೀಪ ಬಂದ ಸ್ಥಳದಿಂದ ಪ್ರಚಂಡ ಪ್ರಮಾಣದಲ್ಲಿ ಸೌರ ಪದಾರ್ಥವು ಸೆಳೆದು ಆಕಾಶದಲ್ಲಿ ತೂರಲ್ಪಟ್ಟಿ ತೆಂದೂ ಅದೇ ಆರಿ ಗ್ರಹಗಳಾಯಿತೆಂದೂ ಬಫನ್‌ಸಿದ್ಧಾಂತದಲ್ಲಿ ಸುಧಾರಣೆ ಮಾಡಿದರು.

ತದ್ವಿರುದ್ಧವಾಗಿ ೧೭೫೫ ರಲ್ಲಿ ಪ್ರಸಿದ್ಧ ಜರ್ಮನ್ ತತ್ವಜ್ಞಾನಿ ಇಮ್ಯಾನ್ಯುವೆಲ್ ಕ್ಯಾಂಟನು ಮಂಡಿಸಿದ ಇನ್ನೊಂದು ಸಿದ್ಧಾಂತ ವನ್ನು ಸುಧಾರಿಸಿ ೧೭೯೬ ಲ್ಲಿ ಫ್ರೆಂಚ್ ಗಣಿತ ಶಾಸ್ತ್ರಿ ಲ್ಯಾಪ್ಲೇಸನು ಬೇರೊಂದು ವಾದ ವನ್ನು ಮಂಡಿಸಿದನು. ಅದರಲ್ಲಿ ಆಗಂತುಕ ನಕ್ಷತ್ರಕ್ಕೆ ಸ್ಥಾನವಿಲ್ಲ. ಯುಗ ಯುಗಾಂತರಗಳ ಹಿಂದೆ ಸೂರ್ಯನಲ್ಲಿ ಭಯಂಕರ ಸ್ಫೋಟವೊಂದು ಸಂಭವಿಸಿತು. ಆವಾಗ ಹೊರ ತೂರಲ್ಪಟ್ಟ ಸೌರ ಪದಾರ್ಥದಲ್ಲಿ ಕೆಲವಂಶವು ಸೂರ್ಯನ ಸುತ್ತ ಬಹುದೂರದ ವರೆಗೆ ತೆಳ್ಳನ್ನ ಮುಸುಕಿ ನಂತೆ ಹಬ್ಬಿ ಸೂರ್ಯನೊಡನೆ ಸುತ್ತುತ್ತಿತ್ತು. ಕಾಲಾಂತರದಲ್ಲಿ ಈ ಮುಸುಕು ಚಪ್ಪಟೆ ಯಾಗುತ್ತ ಬಂದು ಸೂರ್ಯನ ಸುತ್ತ ಅನೇಕ ಬಳೆ ಗಳಂತೆ ರೂಪುಗೊಂಡಿತು. ಈ ಜ್ವಲಂತ ಬಳೆ ಗಳೇ ಆ ಮೇಲೆ ತಣಿದು ಗ್ರಹಗಳಾದವು.

ಅಂದಿನಿಂದ ಇಂದಿನ ವರೆಗೆ ಈ ಎರಡು ವಿಚಾರಧಾರೆಗಳ ವಿವಿಧ ರೂಪಾಂತರಗಳು ವಿಜ್ಞಾನಿಗಳ ಮನಸನ್ನು ಹಿಡಿದಿವೆ. ಪ್ರತಿ ಯೊಂದು ಪಕ್ಷದವರೂ ಇನ್ನೊಂದು ಪಕ್ಷದ ವಾದದ ಮೇಲೆ ಆಕ್ಷೇಪಗಳನ್ನು ಎತ್ತಿದ್ದಾರೆ— ಅವು ಗಂಭೀರವಾದವುಗಳೂ ಹೌದು. ಬಫನ್‌ನ "ಘರ್ಷಣ" ಸಿದ್ಧಾಂತ ನಿಜವಾಗಿದ್ದರೆ ಭೌತ ಶಾಸ್ತ್ರದ ಚಲನ ನಿಯಮ ಪ್ರಕಾರ ಗ್ರಹಗಳು ಸೂರ್ಯನ ಸುತ್ತ ದೀರ್ಘವರ್ತುಲ ಪಥದಲ್ಲಿ ತಿರುಗಬೇಕಾಗಿತ್ತು. ಆದರೆ ಅವು ಹೆಚ್ಚು ಕಡಿಮೆ ವರ್ತುಲ ಪಥಗಳಲ್ಲಿ ತಿರುಗುತ್ತವೆ ಯಲ್ಲ? ತದ್ವಿರುದ್ಧವಾಗಿ ಲ್ಯಾಪ್ಲೇಸನ "ನೀಹಾ ರಿಕಾ" (ಬಳೆ) ಸಿದ್ಧಾಂತಕ್ಕೂ ಆಕ್ಷೇಪಗಳಿವೆ. ಸ್ಫೋಟವಾಗಿ ಉಂಟಾದ ಅನಿಲಮಯ ಬಳೆ ಯಲ್ಲಿನ ಪದಾರ್ಥವು ಕೂಡಿಕೊಂಡು ಗ್ರಹ ಗಳಾಗುವ ಸಂಭವವೇ ಇಲ್ಲ. ಮೇಲಾಗಿ ಅವನ ಸಿದ್ಧಾಂತ ನಿಜವಾಗಿದ್ದರೆ ಸೂರ್ಯನು ಗ್ರಹಗಳಿ ಗಿಂತ ಹೆಚ್ಚು ವೇಗವಾಗಿ ತನ್ನ ಅಚ್ಚಿನ ಸುತ್ತ ತಿರುಗಬೇಕಾಗಿತ್ತು. ಬದಲಿಗೆ ಸೂರ್ಯ ಗ್ರಹಗಳಿ ಗಿಂತ ಮೆಲ್ಲಗೆ ತಿರುಗುತ್ತಾನೆ.

೧೯೫೧ ರಲ್ಲಿ ಮಂಡಿಸಲ್ಪಟ್ಟ ಅಮೇರಿಕದ ಕೂಪರರ ಸಿದ್ಧಾಂತ ಪ್ರಕಾರ ಗ್ರಹಗಳ ಉತ್ಪ ತ್ತಿಗೆ ಸ್ಫೋಟವಾಗಲಿ ಘರ್ಷಣೆಯಾಗಲಿ ಕಾರಣವಲ್ಲ. ಸೃಷ್ಟಿಯ ಆದಿಯಲ್ಲಿ ಸಾಮಾನ್ಯ ವಾಗಿ ಈಗ ಎಲ್ಲರೂ ಒಪ್ಪುವಂತೆ— ವಿಶ್ವವೆಲ್ಲ ತೆಳ್ಳಗೆ ಹಬ್ಬಿದ ಅನಿಲ ಮತ್ತು ಧೂಳಿಕಣಗಳಿಂ ದಾದ ಮೋಡಗಳಿಂದ ತುಂಬಿತ್ತು. ಗುರುತ್ವಾ ಕರ್ಷಣೆಗೊಳಪಟ್ಟು ಅವು ಅಲ್ಲಲ್ಲಿ ಸಂದಣಿಸಿ ಕುಗ್ಗಿ, ತಿತ್ತರಿ ತಿರುಗುತ್ತ, ಒತ್ತಡದಿಂದುಂಟಾದ ಉಷ್ಣತೆಯಿಂದ ಕೆಂಡದಂತೆ ಹೊಳೆಯ ತೊಡ ಗಿದವು. ಇವೇ ಮೂಲ ನಕ್ಷತ್ರಗಳು. ಇವುಗಳಲ್ಲಿ ಅರ್ಧದಷ್ಟು ಇಬ್ಭಾಗಗೊಂಡು ಜೋಡು ನಕ್ಷತ್ರ ಗಳಾಗಿವೆ; (ವಿಶ್ವದಲ್ಲಿ ಜೋಡು ನಕ್ಷತ್ರಗಳೇ ಹೆಚ್ಚು) ಕೆಲವಂತೂ ಮೂರು, ನಾಲ್ಕು ಐದು ತಾರೆಗಳ ಗುಂಪುಗಳಾಗಿವೆ. ಆದರೆ ನಮ್ಮ ಸೂರ್ಯ ಮತ್ತು ವಿಶ್ವದ ಬೇರೆ ಕೆಲ (ಬಹುಶಃ ೧೦೦ ಕೋಟಿ) ನಕ್ಷತ್ರಗಳು ಮಾತ್ರ ಒಂಟಿ ತಾರೆಗಳಾಗಿ ಉಳಿದವು. ಬದಲಿಗೆ ಅವುಗಳ

ಸುತ್ತ ಹಗುರು ಅನಿಲಗಳ, ವಲಯಗಳು ರೂಪು ಗೊಂಡವು. ಕಾಲಾಂತರದಲ್ಲಿ ಗುರುತ್ವಾಕರ್ಷಣೆಯ ದೆಸೆಯಿಂದ ಈ ವಲಯದಲ್ಲಿ ಅಲ್ಲಲ್ಲಿ ಭಾರ ಪದಾರ್ಥಗಳ ರಾಶಿಗಳು ಸಿದ್ಧವಾಗಿ ಅವು ತಿರುಗುತ್ತ ತಾಕಲಾಡುತ್ತ ಒಂದರೊಡನೊಂದು ಸೇರುತ್ತ ಸುಮಾರು ೧೦ ಕೋಟಿ ವರ್ಷಗಳ ಅವಧಿಯಲ್ಲಿ ಗ್ರಹಗಳು, (ಚಂದ್ರನಂಥ) ಉಪಗ್ರಹಗಳಾಗಿ ರೂಪುಗೊಂಡವು. ಇದು ಸದ್ಯ ಜನಪ್ರಿಯವಾಗಿರುವ ಸಿದ್ಧಾಂತ.

ಅಂತೂ ಅನಾದಿ ಕಾಲದಲ್ಲಿ ನಮ್ಮ ಭೂಮಿ ಏರು ತಗ್ಗುಗಳಿಲ್ಲದ ಚೆಂಡಾಗಿ ಸೂರ್ಯನ ಸುತ್ತ ಧೂಳಿಮೋಡಗಳನ್ನು ಹೊಕ್ಕು ಹೊರಡುತ್ತ ಧಾವಿಸುತ್ತಿತ್ತೆಂಬುದು ಎಲ್ಲ ಸಿದ್ಧಾಂತಗಳಿಗೆ ಒಪ್ಪಿತವಾದ ಮಾತು. ಗುರುತ್ವಾಕರ್ಷಣೆಯ ಒತ್ತಡ ಮತ್ತು ಧೂಳಿ ಮೋಡದ ಮೂಲಕ ಸಾಗುವಾಗಿನ ಘರ್ಷಣೆಯಿಂದ ಅದು ಬಿಸಿಯೇರಿ ಕುದಿಯ ತೊಡಗಿತು. ಈ ಕೊಳ್ಳುದಿಯಲ್ಲಿ ಭಾರವಾದ ಧಾತುಗಳು ಕೆಳಗೆ— ನಡುವಿಗೆ— ಇಳಿದು ಹಗುರವಾದವುಗಳು ಮೇಲಕ್ಕೆ ಉಕ್ಕಿ ಬಂದವು. ಒಳಗಿಂದ ನೀರಿನ ಉಗಿ ಮತ್ತು ಅಂಗಾರಾಮ್ಲ ವಾಯುವಿನ ಝುರಿಗಳು ಮೇಲಕ್ಕೆ ಚಿಮ್ಮಿ ಹೊರ ನುಗ್ಗಿ ಆದಿಮ ವಾತಾವರಣವನ್ನು ನಿರ್ಮಿಸಿದವು. ಮೆಲ್ಲಮೆಲ್ಲಗೆ ಬಹುಶಃ - ಕೆಲ ಲಕ್ಷ ವರ್ಷಗಳಲ್ಲಿ - ಭೂಮಿಯ ಹೊರಮೈಗೆ ನೂಕಲ್ಪಟ್ಟ ಹಗುರ ಪದಾರ್ಥ ಆರಿ ಗಟ್ಟಿಯಾಯಿತು.

ಶತಮಾನ ಶತಮಾನ ಕಾಲ ಪೃಥ್ವಿಯಲ್ಲಿ ಅಕಲ್ಪನೀಯ ಕೋಲಾಹಲದದೃಶ್ಯ ಮಸಗಿತ್ತು. ತೆಳ್ಳನ್ನ ಮೇಲ್ಪದರು ತಣಿದು ಗಟ್ಟಿಯಾದಂತೆ ಹೊಸ ಕುದಿಯುವ ಪದಾರ್ಥ ಭೂಗರ್ಭದಿಂದ ಉಕ್ಕಿ ಹರಿಯುತ್ತಿತ್ತು. ಭೂಗರ್ಭ ಇಂದಿಗೂ ಅದೇ ರೌದ್ರದಿಂದ ಕುದಿಯುತ್ತದೆ. ಭೂಮಿಯ ಕೇಂದ್ರದಲ್ಲಿ ೪,೦೦೦ ಮೈಲು ವ್ಯಾಸದ ಮಹಾಗೋಲವೊಂದು ಕಬ್ಬಿಣದ ಮತ್ತು ಬಹುಶಃ ಕೆಲ ವಂಶ ನಿಕ್ಕಲಿನ ಕಾದ ರಸದಿಂದ ತುಂಬಿದೆಯೆಂದೂಹಿಸಲಾಗಿದೆ. ಇದನ್ನು ಮುಚ್ಚಿ ಮೂರು ಒಂದಕ್ಕಿಂತ ಒಂದು ಹಗುರವಾದ ಮತ್ತು ತಣ್ಣಗಾದ ಆವರಣಗಳು— ಬಿಲಿವೈನ್, ಬಸಾಲ್ಟ್ ಮತ್ತು ಗ್ರೆನೈಟ್— ಒಳಗಿನ ಉಗ್ರ ಉಷ್ಣತೆಯನ್ನು ಹೊರಗೆ ಬಾರದಂತೆ ತಡೆದಿವೆ.

ಈ ತಣಿಯುವ ಯುಗದಲ್ಲೇ ಪೃಥ್ವಿಯ ಮೇಲಿನ ಪ್ರಥಮ ಭೂಖಂಡಗಳ ರಚನೆಯಾದದ್ದು. ಹೊಗೆ, ಉರಿಗಳ ನಡುವೆ ಒಳಗಿನಿಂದ ಉಕ್ಕಿ ಹರಿದ ಶಿಲಾರಸವು ಪೃಥ್ವಿಯ ನರಕ ಸದೃಶ ಹೊರ ಮೈಯಲ್ಲಿ ಹಬ್ಬಿ ಹೊಸ ಹೊಸ ಪದರುಗಳಾದವು. ಹೀಗೆ ಅಲ್ಲಲ್ಲಿ ಮೇಲುಕ್ಕಿದ ಶಿಲಾರಸ ಶತಮಾನಗಳ ಅವಧಿಯಲ್ಲಿ ತಣಿದು ಕೆಲಭಾಗ ತಿರುಗಿ ಭೂಗರ್ಭಕ್ಕಿಳಿದುಹೋಯಿತು. ಕೆಲಭಾಗ ಹಾಗೇ ಶೇಖರಗೊಂಡು ತೇಲುತ್ತ ಬಸಾಲ್ಟಿನ ಕೆಳ ಆವರಣದ ಆಧಾರದಿಂದ ಮೇಲೆದ್ದು ನಿಂತಿತು. ಹೀಗೆ ಆದ ಏರು ತಗ್ಗುಗಳೇ ಆದಿಮ ಭೂಖಂಡಗಳು ಮತ್ತು ಸಾಗರಗಳು.

ಆಗ ನಮ್ಮ ಪೃಥ್ವಿ ನಡುಹಗಲಲ್ಲೂ ಕಗ್ಗತ್ತಲಿಂದ ಮುಚ್ಚಿತ್ತು. ಭೂಗರ್ಭದಿಂದ ಚಿಮ್ಮಿದ ಅಂಗಾರಾಮ್ಲ ಮತ್ತು ನೀರ ಹಬೆಯ ಮೋಡಗಳು ದಟ್ಟವಾಗಿ ಹಬ್ಬಿದ್ದವು. ಇದು ಎಷ್ಟು ಸಾವಿರ ವರ್ಷ ಕಾಲ ಸಾಗಿತೋ ಲೆಕ್ಕವಿಲ್ಲ. ಆದರೆ ಕೊನೆಗೊಮ್ಮೆ ಆ ಅಂಧಕಾರಮಯ ವಾತಾವರಣದ ಮೇಲ್ಭಾಗವು ಸಾಕಷ್ಟು ತಂಪಾಗಿ ನೀರ ಹಬೆ ಮಳೆಯಾಗಿ ಸುರಿಯಲಾರಂಭಿಸಿತು. ಆದರೆ ಅದು ನೆಲದ ವರೆಗೆ ಬರುತ್ತಿರಲಿಲ್ಲ. ವಾತಾವರಣದ ಕೆಳಗೆ ಇನ್ನೂ ರೌರವ ಉಷ್ಣತೆಯಲ್ಲಿದ್ದ ಲಾವಾ ರಸದ ಕಾರಣದಿಂದ ಮಳೆ ನೆಲ ಸೇರುವ ಮೊದಲೇ ತಿರುಗಿ ಉಗಿಯಾಗಿ ಮೇಲೆ ತಳ್ಳಲ್ಪಡುತ್ತಿತ್ತು. ನೆಲವು ಸಾಕಷ್ಟು ತಣಿದ ಮೇಲೆಯೆ ಮಳೆ ನೆಲ ಸೇರಿದ್ದು.

ಮತ್ತೆ ಎಂಥ ಮಳೆ ಅದು! ಆ ಮಳೆಗಾಲ

ಬಹುಶಃ ಒಂದು ಸಾವಿರ ವರ್ಷ ಸಾಗಿರಬೇಕು. ಹಗಲಿರುಳೂ ನಿರಂತರವಾಗಿ ಜಲಧಾರೆ ಸುರಿಯಿತು. ಮಳೆ ಬಿದ್ದಂತೆ ಪೃಥ್ವಿಯ ಹೊರಪದರು ಬೇಗಬೇಗನೆ ತಣಿಯಲಾರಂಭಿಸಿತು. ತಗ್ಗಿನ ಪ್ರದೇಶಗಳು ನೀರಿನಿಂದ ತುಂಬಿದವು. ಪ್ರಥಮ ಮಹಾ ಸಾಗರಗಳು ಹೀಗೆ ಜನಿಸಿದವು. ಮೇಲೆ ಮುಸುಕಿದ್ದ ಮೋಡವೆಲ್ಲ ನೀರಾಗಿ ಬಿದ್ದ ಮೇಲೆ ವಾತಾವರಣ ತಿಳಿಗೊಂಡಿತು. ಸೂರ್ಯನ ಪ್ರಥಮ ಕಿರಣಗಳು ಅದರ ಮಗುವಿನ ಮುಖದ ಮೇಲೆ ಬೀರಿದವು. ಸಮುದ್ರಗಳ ವಿಸ್ತಾರವಾದ ಕನ್ನಡಿಯಲ್ಲಿ ಸೂರ್ಯ ತನ್ನ ಮೋರೆ ಕಾಣಬಲ್ಲವನಾದ.

ಪೃಥ್ವಿಯ ಸ್ವರೂಪ ಇಂದಿನದಕ್ಕೆ ಬರಲು, ಅದರ ಸಾಗರಗಳಲ್ಲಿ ಪ್ರಥಮ ಜೀವದ ಉತ್ಪತ್ತಿಯಾಗಲು ಮತ್ತೂ ಕೋಟಿ ಕೋಟಿ ವರ್ಷಗಳು ಹಿಡಿದವು. ಭೂಮಿಯ ಒಳಮೈಯ ಉಷ್ಣತೆ ಕಡಿಮೆಯಾದಂತೆ ಅದರ ಗಾತ್ರ ಕುಗ್ಗಿ ಹೊರಗೆ ಆಗಲೇ ತಣಿದು ಗಟ್ಟಿಯಾಗಿದ್ದ ಚಿಪ್ಪು ಒಣಗಿದ ಹಣ್ಣಿನ ತೊಗಲಿನಂತೆ ನಿರಿಗಟ್ಟಲಿತ್ತು. (ಆ ನಿರಿಗಳೇ ಪ್ರಥಮ ಪರ್ವತ ಶ್ರೇಣಿಗಳು); ಅಸಂಖ್ಯ ಮಳೆಗಾಲಗಳು ಸುರಿದ ನೀರಿನ ಧಾರೆಗಳು ನದಿಗಳಾಗಿ ಪರ್ವತಗಳನ್ನು ಸವೆಸಿ, ನೆಲವನ್ನು ತೇದು ಕಲ್ಲಿನ ಪದರನ್ನು ಮಣ್ಣಾಗಿ ಪರಿವರ್ತಿಸಲಿಕ್ಕಿತ್ತು; ಈ ಮಣ್ಣಿನ ಸ್ಥಾನಾಂತರದಿಂದಾದ ಭಾರ ವ್ಯತ್ಯಾಸದಿಂದಲೂ ಒಳಗಿನ ತಿರುಳು ಹೆಚ್ಚು ಹೆಚ್ಚು ತಣಿದುದರಿಂದ ಹೊರಮೈಯಲ್ಲಾದ ನಿರಿಗಳಿಂದಲೂ ಪೃಥ್ವಿಯ ಬಾಹ್ಯ ರೂಪಕ್ಕೆ ಬದಲಾವಣೆಗಳು ಬರಲಿದ್ದವು; ಆ ಮೇಲೆ ಪೃಥ್ವಿಯ ವಾತಾವರಣದಲ್ಲಿ ತುಂಬಿದ ಮೂರು ಮುಖ್ಯ ಅನಿಲಗಳ (ಅಮೋನಿಯ, ಹೈಡ್ರೊಜನ್, ಮಿಥೇನ್) ಮೇಲೆ ಮೋಡಗಳಿಂದ ನಿರಂತರವಾಗಿ ಚಿಮ್ಮುತ್ತಿದ್ದ ಮಿಂಚಿನ ಆಘಾತದಿಂದ ಸಾಗರದಲ್ಲಿ ಪ್ರಪ್ರಥಮ ಜೀವ ರಸಾಯನಗಳಾದ ಅಮಿನೋ ಆಮ್ಲಗಳ ಸೃಷ್ಟಿಯಾಗಲಿತ್ತು; ಅನಂತರ ಅದರಲ್ಲಿ ಪ್ರಥಮ ಜೀವ ಕಣಗಳು ಉಂಟಾಗಲಿಕ್ಕಿತ್ತು; ಅಲ್ಲಿಂದ ಜೀವ ಜಾತಗಳು ಕವಲೊಡೆದು ಅಸಂಖ್ಯ ಜಾತಿಗಳಾಗಿ ನೆಲ ನೀರುಗಳನ್ನು ಆಳಲಿಕ್ಕಿತ್ತು. *

## ಜಾಣರ ಮಾತು

ಸುದ್ದಿ ಮತ್ತು ವದಂತಿಯ ನಡುವಿನ ಭೇದ ನೀವು ಹೇಳುತ್ತೀರೊ ಕೇಳುತ್ತೀರೊ ಎಂಬುದನ್ನು ಅವಲಂಬಿಸಿರುತ್ತದೆ. ಅಂದರೆ ತಾನು ಹೇಳಿದರೆ ಸುದ್ದಿ ಇನ್ನೊಬ್ಬರು ಹೇಳಿದರೆ ವದಂತಿ.

*

ನಿಮಗೆ ದೊಡ್ಡ ಸಂಗತಿ ಮಾಡಲಿಕ್ಕೆ ಬರದಿದ್ದರೆ ಸಣ್ಣ ಸಂಗತಿಯನ್ನು ದೊಡ್ಡ ಪ್ರಮಾಣದಲ್ಲಿ ಮಾಡಿರಿ.

*

ಜನರು ಓದದೇ ಓದಿದ್ದೇವೆ ಎಂದು ಯಾವ ಪುಸ್ತಕದ ಬಗ್ಗೆ ಹೇಳುತ್ತಾರೊ ಅದು ಯಶಸ್ವೀ ಪುಸ್ತಕವೆನ್ನಲಡ್ಡಿಯಿಲ್ಲ.

*

ಬೇಸರವನ್ನು ಕಳೆಯಲು ಮನುಷ್ಯನು ಕಂಡುಹಿಡಿದ ಸುಲಭ ಉಪಾಯವೆಂದರೆ ಕೆಲಸಮಾಡುವುದು.

# ಒಂಭತ್ತರ ವೈಚಿತ್ರ್ಯ

ಎಂ. ಎಸ್. ಮುನೋಳಿ

ಅಂಕಿಸಂಖ್ಯೆಗಳು ಹೊರನೋಟಕ್ಕೆ ನೀರಸವಾದವುಗಳಾಗಿ ಕಂಡರೂ ಅವುಗಳ ನಿರೀಕ್ಷಣೆಯಿಂದ ಮತ್ತು ಸತತಾಭ್ಯಾಸದಿಂದ ಅವುಗಳಲ್ಲಿ ಅಚ್ಚರಿಗೊಳಿಸುವಂತಹ ಮತ್ತು ವಿನೋದಕರವಾದ ರಹಸ್ಯಗಳನ್ನು ಕಂಡುಕೊಳ್ಳಬಹುದು. ಎಲ್ಲ ಅಂಕಿಸಂಖ್ಯೆಗಳಲ್ಲಿ ಒಂಭತ್ತು ಅತ್ಯಂತ ಕುತೂಹಲ ಮತ್ತು ವಿಸ್ಮಯಕಾರಕವಾಗಿದೆ. ಮುಕ್ತಾಫಲ, ಹಿರಣ್ಯ, ವೈಡೂರ್ಯ, ಪದ್ಮರಾಗ, ಪುಷ್ಪರಾಗ, ಗೋಮೇದ, ನೀಲ, ಗುರಾತ್ಮತ ಮತ್ತು ಪ್ರವಾಲ ಹೀಗೆ 'ನವರತ್ನ'ಗಳಿವೆ. ಪ್ರಸೂತಿಗೆ 'ನವಮಾಸ'ಗಳು ತುಂಬಬೇಕು. ವಿಕ್ರಮಾದಿತ್ಯ ಚಕ್ರವರ್ತಿಯ ಆಸ್ಥಾನದಲ್ಲಿ ಆಯಾ ಶಾಸ್ತ್ರ ಮತ್ತು ಕಲೆಗಳಲ್ಲಿ ಭರತಖಂಡದಲ್ಲಿಯೇ ವಿದ್ವಾಂಸರೆನಿಸಿದ ಧನ್ವಂತರಿ, ಕ್ಷಪಣಕ, ಅಮರಸಿಂಹ, ಶಂಕು, ವೇತಾಲಭಟ್ಟ, ಘಟಕರ್ಪರ, ಕಾಲಿದಾಸ, ವರಾಹಮಿಹಿರ ಮತ್ತು ವರರುಚಿ ಎಂಬ 'ನವರತ್ನ'ರಿದ್ದರು. ಶ್ರವಣ, ಕೀರ್ತನ ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಮತ್ತು ಆತ್ಮನಿವೇದನ ಮೊದಲಾದ 'ನವವಿಧ'ಗಳಿಂದಲೇ ಭಕ್ತಿಯು ಪೂರ್ಣವೆನಿಸುವುದು. ನಕ್ಷತ್ರ ಚಕ್ರದಲ್ಲಿ 'ಒಂಭತ್ತು' ರಾಶಿಗಳಿದ್ದು, ಒಂದೊಂದು ರಾಶಿಯಲ್ಲಿ 'ಒಂಭತ್ತು' ಚರಣಗಳಿವೆ. ದಿನ ನಿತ್ಯವೂ ಪ್ರಕಾಶ ಕೊಡುವ ಪ್ರಾಣಿ ಮತ್ತು ಸಸ್ಯ ಕೋಟಿಗಳ ಜೀವನಾಧಾರನಾಗಿರುವ ಸೂರ್ಯನ ಸುತ್ತಲೂ ಬುಧ, ಶುಕ್ರ, ಪೃಥ್ವಿ, ಮಂಗಳ, ಗುರು, ಶನಿ, ಯುರೇನಸ್, ನೆಪ್ಚ್ಯೂನ್ ಮತ್ತು ಪ್ಲೂಟೋ ಎಂಬ 'ನವಗ್ರಹ'ಗಳು ಸದಾ ತಿರುಗುತ್ತಿರುತ್ತವೆ. ಕಾವ್ಯ ಸೃಷ್ಟಿಗೆ ಅವಶ್ಯಕವಾಗಿರುವ ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ ಮತ್ತು ಶಾಂತ ಇವು 'ನವರಸ'ಗಳಾಗಿವೆ.

ಗಣಿತ ಶಾಸ್ತ್ರದಲ್ಲಿ ಇದರ ವೈಚಿತ್ರ್ಯ ಕಡಿಮೆಯೇನಲ್ಲ. ಎಲ್ಲ ಅಂಕಿಸಂಖ್ಯೆಗಳಲ್ಲಿ ಒಂಭತ್ತಕ್ಕೆ ಒಂದು ವಿಶಿಷ್ಟವಾದ ಸ್ಥಾನವಿದೆ. ಅದರ ಗುಣಾಕಾರ ಮೊದಲಾದವುಗಳಲ್ಲಿ ಒಂದು ಆಶ್ಚರ್ಯಕರವಾದ ಮತ್ತು ಸುಂದರವಾದ ಕ್ರಮ-ವಿದೆ.

ಮುಂದಿನ ಪುಟದಲ್ಲಿ ಕೊಟ್ಟಿರುವ ಪಟ್ಟಿಯನ್ನು ನೋಡಿ. ಅದರ ಒಂದನೇ ಕಾಲಮ್ಮಿನಲ್ಲಿರುವ ಸಂಖ್ಯೆಗಳ ದಶಂ ಸ್ಥಾನದ ಅಂಕಿಗಳು ಏರಿಕೆಯ ಕ್ರಮದಲ್ಲಿದ್ದರೆ ಏಕ್ಕಂ ಸ್ಥಾನದ ಅಂಕಿಗಳು ಇಳಿಕೆಯ ಕ್ರಮದಲ್ಲಿವೆ. ೨ ನೇ ಕಾಲಮ್ಮಿನಲ್ಲಿ ಒಂದನೇ ಕಾಲಮ್ಮಿನಲ್ಲಿರುವ ಸಂಖ್ಯೆಗಳಿಗಿರುವ ಅಂಕಿಗಳಬೇರಿಜು ಇದ್ದು, ಪ್ರತಿಯೊಂದರಲ್ಲಿಯೂ ೯ ಇದ್ದುದು ಗಮನಾರ್ಹವಾಗಿದೆ. ಈ ಅಂಕಿಗಳ ವಜಾಬಾಕಿ ತೋರಿಸುವ ಕಾಲಮ್ಮಿನಲ್ಲಿಯ ಅಂಕಿಗಳಲ್ಲಿಯೂ ಒಂದು ನಿರ್ದಿಷ್ಟವಾದ ಕ್ರಮವಿದೆ. ಕೊನೆಯ ಕಾಲಮ್ಮನ್ನು ಗಮನಿಸಿದಲ್ಲಿ ಒಂಭತ್ತರ ಮಗ್ಗಿಗಳು ಕೆಳಗಿನಿಂದ ಮೇಲ್ಗಡೆ ಬರೆಯಲ್ಪ-ಟ್ಟಂತಿವೆ:

| ಒಂಭತ್ತರ ಮಗ್ಗಿಗಳು ೧ | ಒಂದನೇ ಕಾಲಮ್ಮಿನಲ್ಲಿರುವ ಅಂಕೆಗಳ | | |
|---|---|---|---|
| | ಬೇರೀಜು ೨ | ವಜಾ ಬಾಕಿ ೩ | ಅದಲು ಬದಲು ೪ |
| ೦೯ | ೯ | — ೯ | ೯೦ |
| ೧೮ | ೯ | — ೭ | ೮೧ |
| ೨೭ | ೯ | — ೫ | ೭೨ |
| ೩೬ | ೯ | — ೩ | ೬೩ |
| ೪೫ | ೯ | — ೧ | ೫೪ |
| ೫೪ | ೯ | ೧ | ೪೫ |
| ೬೩ | ೯ | ೩ | ೩೬ |
| ೭೨ | ೯ | ೫ | ೨೭ |
| ೮೧ | ೯ | ೭ | ೧೮ |
| ೯೦ | ೯ | ೯ | ೦೯ |

೨. ಒಂಭತ್ತರಿಂದ ಕೆಲವು ವಿಶಿಷ್ಟ ಸಂಖ್ಯೆಗಳಿಗೆ ಗುಣಿಸಿದ ಪಕ್ಷದಲ್ಲಿ ಅತ್ಯಂತ ಕುತೂಹಲ ಕಾರಕವಾದ ಮತ್ತು ಕ್ರಮಬದ್ಧವಾದ ಸಂಖ್ಯೆಗಳು ಬರುತ್ತಿದ್ದು ಅಚ್ಚರಿಯನ್ನುಂಟುಮಾಡುತ್ತವೆ. ಕೆಳಗಿನ ಉದಾಹರಣೆಗಳನ್ನು ಗಮನಿಸಬೇಕು.

(ಅ) (i) ೧ × ೯ + ೧ = ೧೦

೧೧ × ೯ + ೧ = ೧೦೦

೧೧,೧೧೧ × ೯ + ೧ = ೧೦೦,೦೦೦

(ii) ೨ × ೯ + ೨ = ೨೦

೨೨೨ × ೯ + ೨ = ೨,೦೦೦

೨,೨೨೨,೨೨೨ × ೯ + ೨ = ೨೦,೦೦೦,೦೦೦

.. .. .. .. .. ..

.. .. .. .. .. ..

(iii) ೯ × ೯ + ೯ = ೯೦

೯೯೯ × ೯ + ೯ = ೯,೦೦೦

೯೯,೯೯೯ × ೯ + ೯ = ೯೦೦,೦೦೦

(ಬ) ೧ × ೯ + ೨ = ೧೧

೧೨ × ೯ + ೩ = ೧೧೧

೧೨೩ × ೯ + ೪ = ೧,೧೧೧

೧,೨೩೪ × ೯ + ೫ = ೧೧,೧೧೧

.. .. .. .. .. ..

.. .. .. .. .. ..

೧೨,೩೪೫,೬೭೮ × ೯ + ೯ = ೧೧೧,೧೧೧,೧೧೧

(ಕ)

೦×೯+೮=೮
೯×೯+೭=೮೮
೯೮×೯+೬=೮೮೮
೯೮೭×೯+೫=೮,೮೮೮
೯೮೭೬×೯+೪=೮೮,೮೮೮
೯೮೭೬೫×೯+೩=೮೮೮,೮೮೮
೯೮೭೬೫೪×೯+೨=೮,೮೮೮,೮೮೮
೯೮೭೬೫೪೩×೯+೧=೮೮,೮೮೮,೮೮೮
೯೮೭೬೫೪೩೨×೯+೦=೮೮೮,೮೮೮,೮೮೮
೯೮೭೬೫೪೩೨೧×೯−೧=೮,೮೮೮,೮೮೮,೮೮೮

೩. ಒಂಭತ್ತರಿಂದ ಯಾವದೇ ಬೇಕಾದ ಸಂಖ್ಯೆಗೆ ಗುಣಿಸಲಾಗಿ ಬರುವ ಹೊಸ ಸಂಖ್ಯೆಯ ಅಂಕಿಗಳ ಬೇರೀಜಿಗೆ ಒಂಭತ್ತರಿಂದ ಭಾಗಹತ್ತುವದು. ಉದಾಹರಣೆಗಾಗಿ, ಒಂಭತ್ತರಿಂದ ೧೫೨ ಕ್ಕೆ ಗುಣಿಸಲಾಗಿ ೧೩೬೮ ಬರುವದು. ಇದರ ಎಲ್ಲ ಅಂಕಿಗಳ ಬೇರೀಜು ೧೮ ಆಗುತ್ತಿದ್ದು ಇದಕ್ಕೆ ಒಂಭತ್ತರಿಂದ ಭಾಗ ಹತ್ತುವದೆಂಬುದನ್ನು ಗಮನಿಸಬೇಕು. ಒಂಭತ್ತರ ಈ ಗುಣ ಲಕ್ಷಣದಿಂದಾಗಿ ಯಾವದೇ ಒಂದು ಕೊಟ್ಟ ಸಂಖ್ಯೆಗೆ ೯ ರಿಂದ ಭಾಗ ಹತ್ತುವದೋ ಹೇಗೆಂಬುದನ್ನು ಕಂಡುಕೊಳ್ಳಬಹುದು. ಕೊಟ್ಟ ಸಂಖ್ಯೆಯ ಅಂಕಿಗಳ ಬೇರೀಜಿಗೆ ೯ ರಿಂದ ಭಾಗ ಹತ್ತುವಂತಿದ್ದರೆ ಆ ಸಂಖ್ಯೆಗೆ ಭಾಗ ಹತ್ತುತ್ತದೆ. ಇಂತಹ ಇನ್ನೊಂದು ಅಂಕಿಯೆಂದರೆ ಮೂರು.

೪. ಒಂಭತ್ತಕ್ಕೆ ಯಾವದೇ ಅಂಕಿಯಿಂದ ಗುಣಿಸಲಾಗಿ ಬರುವ ಸಂಖ್ಯೆಯ ದಶಂ ಸ್ಥಾನದ ಅಂಕಿಯು ಗುಣಿಸಿದ ಅಂಕಿಗಿಂತ ಒಂದರಿಂದ ಕಡಿಮೆ ಇರುವದು. ಮತ್ತು ಏಕ್ಕಂ ಸ್ಥಾನದ ಅಂಕಿಯು ೧೦ ರಲ್ಲಿ ಆ ಅಂಕಿಯನ್ನು ಕಳೆಯಲು ಬರುವ ಅಂಕಿಯಷ್ಟಿರುವದು.

ಉದಾ: ೯×೭=೬೩

(೬=೭−೧, ೩=೧೦−೭)

೫. ಏಕ್ಕಂ ಸ್ಥಾನದಲ್ಲಿ ಶೂನ್ಯವಿರದ ಯಾವದೇ ಒಂದು ಸಂಖ್ಯೆಗೆ ೯ ರಿಂದ ಗುಣಿಸಲಾಗಿ ಬರುವ ಸಂಖ್ಯೆಯ ಏಕ್ಕಂ ಸ್ಥಾನದ ಅಂಕಿಯು ಗುಣಿಸಿದ ಸಂಖ್ಯೆಯ ಏಕ್ಕಂ ಸ್ಥಾನದ ಅಂಕಿಯನ್ನು ೧೦ ರಲ್ಲಿ ಕಳೆಯಲಾಗಿ ಬರುವ ಅಂಕಿಯಷ್ಟಿರುವದು. ಮತ್ತು ಈ ಅಂಕಿಯ ಹಿಂದಿನ ಅಂಕಿ ಅಥವಾ ಸಂಖ್ಯೆಯು ಗುಣಿಸಿದ ಸಂಖ್ಯೆಯಲ್ಲಿ ಅದರ (ಗುಣಿಸಿದ ಸಂಖ್ಯೆಯ) ಏಕ್ಕಂ ಸ್ಥಾನದ ಹಿಂದಿನ ಅಂಕಿ ಅಥವಾ ಸಂಖ್ಯೆಯಲ್ಲಿ ಒಂದನ್ನು ಕೂಡಿಸಿ ಬರುವ ಅಂಕಿ ಅಥವಾ ಸಂಖ್ಯೆಯನ್ನು ಕಳೆಯಲಾಗಿ ಬರುವಷ್ಟು ಇರುವದು.

ಉದಾ:

(i) ೯×೭೫=೬೭೫
[ ೫=೧೦−೫
೬೭=೭೫−೮ ]

(ii) ೯×೯೪೬=೮೫೧೪
[ ೪= ೧೦− ೬
೮೫೧=೯೪೬−೯೫ ]

(iii) ೯×೨೫೬೨೩=೨೩೦೬೦೭
[ ೭= ೧೦− ೩
೨೩೦೬೦=೨೫೬೨೩−೨೫೬೩ ]

*



**ಸ್ತ್ರೀಯಂತೆ ಕೋಮಲನಿದ್ದು ಶಕ್ತಿವಂತನಾಗಿರುವುದು ಮತ್ತು ಎಲ್ಲ ಬಗೆಯಲ್ಲಿ ಸ್ವಾವಲಂಬಿಯಾಗಿದ್ದರೂ ವಿನಮ್ರನೂ ಆಜ್ಞಾಧಾರಕನೂ ಆಗಿರುವುದೇ ಮನುಷ್ಯನ ನಿಜವಾದ ಲಕ್ಷಣ.**

—ವಿವೇಕಾನಂದ

ವಿಪ್ಲವದಲ್ಲಿ ಮುಳುಗಿರುವ ಆಫ್ರಿಕದಲ್ಲಿ ಇದೊಂದೇ
ಶಾಂತಿಸಮಾಧಾನಗಳುಳ್ಳ ರಾಜ್ಯವಾಗಿದೆ

# ಪ್ರಾಯಪ್ರಬುದ್ಧವಾಗುತ್ತಿರುವ ಲೈಬೀರಿಯ

ಆರ್. ಕೆ. ನಾಯಕ

ಇಡೀ ಆಫ್ರಿಕವೇ ವಿಪ್ಲವದಲ್ಲಿ ಮುಳುಗಿರುವ ಇಂದಿನ ದೃಶ್ಯದಲ್ಲಿ ಅದರ ಪಶ್ಚಿಮ ದಂಡೆಯಲ್ಲೊಂದು ರಾಜ್ಯ ಸುಖ ಶಾಂತಿ ಸಮಾಧಾನಗಳಿಂದ ಬಾಳುತ್ತಿರುವ ಸಂಗತಿ ಯಾರ ಗಮನಕ್ಕೂ ಬಾರದೆ ಹೋಗಬಹುದು. ಆ ದೇಶದ ಹೆಸರು ಲೈಬೀರಿಯ. ಆಫ್ರಿಕನ್ ತಲೆಬುರುಡೆಯ ಹಿಮ್ಮಗ್ಗಲ ಬುಡದಲ್ಲಿರುವ ಈ ಚಿಕ್ಕ ದೇಶ ಕೇವಲ ೨೦ ವರ್ಷಗಳ ಹಿಂದೆ ಬೇರಾವ ಆಫ್ರಿಕನ್ ದೇಶಕ್ಕಿಂತ ಬೇರೆ ಸ್ಥಿತಿಯಲ್ಲಿರಲಿಲ್ಲ. ಅದರ ಬಹುಭಾಗಕ್ಕೆ ಗಾಲಿಯುಳ್ಳ ವಾಹನವಾಗಲಿ, ಎತ್ತು ಕುದುರೆಗಳಾಗಲಿ,— ಕಡೆಗೆ ನೇಗಿಲಿನ ಪರಿಚಯವಾಗಲಿ ಇರಲಿಲ್ಲ. ಅದರಲ್ಲಿದ್ದ ನೂರಾರು ಮೂಲ ನಿವಾಸಿ ತಂಡಗಳು ಒಂದರೊಡನೊಂದು ಹೋರಾಡುತ್ತಿದ್ದವು; ಸೋತು ಸೆರೆಸಿಕ್ಕವರು ಹೆಚ್ಚಾಗಿ ಗೆದ್ದವರ ಹೊಟ್ಟೆಯೊಳಗೆ ವಿಶ್ರಾಂತಿ ಪಡೆಯುತ್ತಿದ್ದರು.

ಕೆಲವೇ ವರ್ಷಗಳ ಹಿಂದೆ ಒಳ ನಾಡಿನಲ್ಲಿ ಕ್ರೂರ ಪ್ರಾಣಿಗಳ ಭಯಭರಿತವಾದ ಕಾಲ್ದಾರಿಗಳಲ್ಲದೆ ರಸ್ತೆಗಳ ಹೆಸರನ್ನೇ ಅರಿಯದಿದ್ದ ಲೈಬೀರಿಯದಲ್ಲಿಂದು ಸಾವಿರಗಟ್ಟಳೆ ತಳತಳಿಸುವ ಮೋಟಾರ್ ಕಾರುಗಳು ಚಲಿಸುತ್ತಿವೆ. ಶಾಲೆಗಳು ತಲೆಯೆತ್ತಿವೆ, ಆಸ್ಪತ್ರೆಗಳು ಮಂತ್ರವಾದವನ್ನು ಮೂಲೆಗೊತ್ತುತ್ತಿವೆ. ಇಪ್ಪತ್ತು ವರ್ಷಗಳಲ್ಲಿ ನಿರ್ಯಾತವು ೧೮ ಪಟ್ಟು ಏರಿದೆ; ದೇಶ ಆಧುನಿಕತೆಯ ದಾರಿಯಲ್ಲಿ ದೃಢವಾಗಿ ನಡೆಯುತ್ತಿದೆ.

ಇದೆಲ್ಲವೂ ಸಾಧ್ಯವಾಗಿರುವುದು ದೇಶೀಯರಲ್ಲಿ



ಒಮ್ಮಿಂದೊಮ್ಮೆ ಉದ್ಭವಿಸಿದ ಚೈತನ್ಯದಿಂದಲ್ಲ. ಪಂಚವಾರ್ಷಿಕ ಯೋಜನೆಗಳಿಂದಲ್ಲ, ಕಮ್ಯುನಿಸ್ಟ್ ಅಥವಾ ಇತರ ಸರ್ವಾಧಿಕಾರದ ಒತ್ತಾಯದಿಂದಲ್ಲ; "ವಿದೇಶಿ ಬಂಡವಾಳ"—ಅದು ಲೈಬೀರಿಯದ ಭಾಗ್ಯವನ್ನು ತಿದ್ದಿ ಬರೆದ ಕೈ. ಆಫ್ರಿಕದ ಸ್ವಾತಂತ್ರ್ಯಸನ್ನ ದೇಶಗಳಿಂದ ವಿದೇಶಿ ಬಂಡವಾಳ ಹೊರಗೆ ಧಾವಿಸಲು ಅವಸರ ಪಡುತ್ತಿದ್ದರೆ ಲೈಬೀರಿಯದಲ್ಲದು ಒಳಗೆ ಬರಲು ಚಡಪಡಿಸುತ್ತಿದೆ.

ಲೈಬೀರಿಯಕ್ಕೆ ಇತಿಹಾಸವು ಆಫ್ರಿಕದ ಇತರ ಪ್ರದೇಶಗಳಿಗಿಂತ ಬೇರೆಯಾದ ಸೇರಿನಲ್ಲಿ ಭಾಗ್ಯವನ್ನು ಅಳೆದು ಕೊಟ್ಟಿದೆ. ಅದು ಆಧುನಿಕ ಇತಿಹಾಸದ ಪ್ರಥಮ ಸ್ವತಂತ್ರ ಪ್ರಜಾರಾಜ್ಯವಾಗಿದೆ. ಭಾರತವು ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಿದ್ದಾಗ್ಗೆ—೧೧೪ ವರ್ಷಗಳ ಹಿಂದೆ— ಲೈಬೀರಿಯವು ತನ್ನ ಸ್ವತಂತ್ರ ಅಸ್ತಿತ್ವವನ್ನು ಪ್ರಾರಂಭಿಸಿತು.

ವಾಸ್ತವಿಕವಾಗಿ ಲೈಬೀರಿಯವನ್ನು "ಗುಲಾಮ ಗಣರಾಜ್ಯ" ಎಂದು ಹೆಸರಿಸಬಹುದು. ೧೮೧೬ ರ ಸುಮಾರಿಗೆ ಅಮೇರಿಕದಲ್ಲಿ ಬಿಡುಗಡೆ ಹೊಂದಿದ ಗುಲಾಮರ ಸಮಸ್ಯೆಯೊಂದು ತಲೆ ತಿನ್ನುತ್ತಿತ್ತು. ಬಿಳಿಯರಿಗೆ ಅವರು ದೇಶದಲ್ಲಿ ಬೇಡವಾಗಿದ್ದರು.—ಏಕೆಂದರೆ ಅವರು ಇನ್ನೂ ಗುಲಾಮರಾಗುಳಿದವರ ತಲೆಯಲ್ಲಿ ಅಪಾಯಕರ ವಿಚಾರಗಳನ್ನುಉಂಟುಮಾಡುವ ಸಂಭವವಿತ್ತು. ಬೇರೆ ಕೆಲ ಉದಾರ ಬುದ್ಧಿಯ ಬಿಳಿಯರಿಗೆ ಗುಲಾಮಗಿರಿ ಹೋದರೂ ನಾಗರಿಕತ್ವ ಹಕ್ಕು ದೊರೆಯದ ಈ ಬಡಪಾಯಿಗಳಿಗಾಗಿ ಏನಾದರೊಂದು ವ್ಯವಸ್ಥೆ ಮಾಡಬೇಕೆಂದು ಅನಿಸುತ್ತಿತ್ತು. ಎರಡೂ ವರ್ಗದ ಜನರು ಧನ ಸಂಗ್ರಹ ಮಾಡಿ "ಅಮೇರಿಕನ್ ವಸಾಹತು ಸಂಸ್ಥೆ"ಯನ್ನು ಸ್ಥಾಪಿಸಿದರು. ಬಿಡುಗಡೆಯಾದ ಗುಲಾಮರಿಗೆ ಆಫ್ರಿಕದಲ್ಲೇ ಒಂದು ವಸತಿಯನ್ನು ಕಲ್ಪಿಸಿ ಕೊಡುವುದು ಅವರ ಉದ್ದೇಶವಾಗಿತ್ತು.

ಅವರು ಕೊನೆಗೆ, ಆಫ್ರಿಕದ ಈ ಮೂಲೆಯನ್ನು ಆರಿಸಿಕೊಂಡು ಸ್ಥಳಿಕ ಕರಿಯ "ಅರಸ"ರೊಡನೆ ಸಂಧಾನ ಮಾಡಿ ಕೆಲ ನೂರು ಡಾಲರು ಬೆಲೆಯ ಅಪರೂಪ ಪದಾರ್ಥಗಳನ್ನವರಿಗೆ ಕೊಟ್ಟು ಈ ಭೂಭಾಗವನ್ನೆಲ್ಲ. "ಕೊಂಡರು" ಬಿಡುಗಡೆ ಹೊಂದಿದ ಗುಲಾಮರ ಮತ್ತು ಅವರಿಗೆ ಮುಂದಾಳುಗಳಾದ ಬಿಳಿಯರ ತಂಡಗಳು ಒಂದೊಂದಾಗಿ ಬಂದಿಳಿಯುತೊಡಗಿದವು. ಕೆಲವರು ಜ್ವರದಿಂದ ಸತ್ತರು, ಕೆಲವರು ಹವೆ ತಡೆಯದೆ ಪ್ರಾಣ ನೀಗಿದರು; ಅವರ ಮನೆಗಳನ್ನು ಗಾಳಿ ಹಾರಿಸಿಕೊಂಡು ಹೋಯಿತು; ಅವರಿಗೆ ಪ್ರದೇಶವನ್ನು "ಮಾರಿದ್ದ" ಅರಸರು ಅನಂತರ ಗಾಬರಿಯಾಗಿ ತಮ್ಮ ಸವರ್ಣ ಬಾಂಧವರಾದರೂ ಪರಕೀಯರಾಗಿದ್ದ ನವಾಗತರನ್ನು ಕೊಲ್ಲಲು ಯೋಧರನ್ನು ಕಳಿಸಿದರು. ಆಗಂತುಕರು ಜೀವ ಕೈಲಿ ಹಿಡಿದುಕೊಂಡು ಹೋರಾಡಿದರು. ಕೊನೆಗೆ ಒಬ್ಬ ಮುದುಕಿ ಧೈರ್ಯದಿಂದ ಒಂದು ತುಪಾಕಿಯೊಳಗೆ ಸಿಗರೇಟಿನ ಬೆಂಕಿಯನ್ನು ಹಾಕಿ ಹಾರಿಸಿದ್ದರಿಂದ ಈ ಯುದ್ಧದಲ್ಲಿ ವಿಜಯ ಆಗಂತುಕರಿಗಾಯಿತಂತೆ.

ಹೀಗೆ ಇಂದಿನ ರಾಜಧಾನಿಯಾದ ಮುನ್ರೋವಿಯದ ಸ್ಥಳದಲ್ಲಿ ಬಿಡುಗಡೆ ಹೊಂದಿದ ಗುಲಾಮರ ಪ್ರಪ್ರಥಮ ವಸತಿಗಳು ಸ್ಥಾಪಿತವಾದವು. ೧೮೩೦ ರಷ್ಟು ಹೊತ್ತಿಗೆ ಪಾದ್ರಿಗಳಿಂದ ಸಹಾಯ ಹೊಂದಿದ ಈ ಕರಿಯರು ಭದ್ರವಾಗಿ ನೆಲೆಯೂರಿದ್ದರು. ಅವರು ಸುತ್ತಲೂ ವಿಸ್ತರಿಸಿದರು. ೧೮೪೭ ರಲ್ಲಿ ಅದೊಂದು ಚಿಕ್ಕ ಸ್ವತಂತ್ರ ಕರಿಯ ಪ್ರಜಾರಾಜ್ಯವಾಗಿ ತನ್ನ ಜೀವನ ಪ್ರಾರಂಭಿಸಿತು.

ಅವರು ಕಠಿನ ಪರಿಶ್ರಮಿಗಳಾಗಿದ್ದರು. ಬೇಗನೆ ಉತ್ಕರ್ಷ ಹೊಂದಿದರು. ಆದರೆ ಅವರ ನಂತರದವರು ಆಲಸಿಗಳಾಗಿ ಐಶ್ ಆರಾಮದ ಜೀವನಕ್ಕೆ ಮಾರು ಹೋದರು. ತಾವು ಗುಲಾಮರಾಗಿದ್ದಾಗ ತಮ್ಮ ಒಡೆಯರ ಮಕ್ಕಳು ಜೀವಿಸುತ್ತಿದ್ದಂತೆ ತಮ್ಮ ಮಕ್ಕಳನ್ನು ತಾವು ಬೆಳಸಬೇ

ಕೆಂಬ ಅವರ ಹಂಬಲದಿಂದ ಮುಂದಿನ ತಲೆಮಾರು ಕೆಲಸ ಮಾಡುವ ಅಭ್ಯಾಸವನ್ನೇ ಮರೆಯುವಂತಾಯಿತು. ಎಲ್ಲರೂ ಜಂಟಲ್ಮನ್ನರಾದರು. ನಾಡಿನ ಮೂಲ ನಿವಾಸಿಗಳ ದುಡಿಮೆಯಿಂದ ಬದುಕುವವರಾದರು. ಕಳೆದ ಶತಮಾನದ ಅಂತ್ಯದೊಳಗೆ ಲೈಬೀರಿಯದ ಆರ್ಥಿಕ ಬಲ ಕುಗ್ಗಿ ಹೋಗಿ ವಿದೇಶಿ ಬ್ಯಾಂಕುಗಳಲ್ಲಿ ಸಾಲ ಹೆಚ್ಚಿತು. ಫ್ರೆಂಚರೂ ಬ್ರಿಟಿಶರೂ ಲೈಬೀರಿಯದ ಗಡಿ ಪ್ರದೇಶಗಳನ್ನು ತಮ್ಮ ರಾಜ್ಯಗಳಿಗೆ ಸೇರಿಸಿಕೊಂಡರು. ೧೯೨೫ ರಷ್ಟು ಹೊತ್ತಿಗೆ ಫ್ರೆಂಚ್, ಜರ್ಮನ್, ಬ್ರಿಟಿಶ್, ಸ್ವಿಸ್ ಬ್ಯಾಂಕರರಿಗೆ ಅವರು ಕೊಡಬೇಕಾಗಿದ್ದ ಸಾಲ ರೂ. ೭೦ ಲಕ್ಷದಷ್ಟಿತ್ತು. ಲೈಬೀರಿಯವನ್ನು "ದಿವಾಳಿ ದೇಶ" ಎಂದು ಸಾರಿ ತಮಗೆ ಹಂಚಿಕೊಟ್ಟುಬಿಡಿರೆಂದು ಬ್ರಿಟಿಶರೂ ಫ್ರೆಂಚರೂ ರಾಷ್ಟ್ರಸಂಘವನ್ನು ಒತ್ತಾಯಿಸಹತ್ತಿದರು.

ಆದರೆ ಒಮ್ಮೆಲೇ ಭಾಗ್ಯ ಕಣ್ತೆರೆಯಿತು—ನೆನೆಯದ ರೀತಿಯಲ್ಲಿ. ಅಮೇರಿಕದ ಅತಿ ದೊಡ್ಡ ರಬ್ಬರ್ ಕಂಪೆನಿಯ ಸ್ಥಾಪಕನಾದ ಹಾರ್ವೆ ಫಯರಸ್ಟೋನನಿಗೆ ಬ್ರಿಟಿಶರ ರಬ್ಬರ್ ಗುತ್ತಿಗೆಯನ್ನು ಮುರಿಯಬೇಕೆಂಬ ಹಟ ಹುಟ್ಟಿತು. ಬ್ರೆಜಿಲ್‌ನಲ್ಲಿ ಇದಕ್ಕಾಗಿ ಯತ್ನಮಾಡಿ ವಿಫಲನಾದ ಆತ ೧೯೨೬ ರಲ್ಲಿ ಲೈಬೀರಿಯದತ್ತ ಕಣ್ಣು ಹೊರಳಿಸಿದ. ರಬ್ಬರ್ ಬೆಳೆಸಲು ಅದು ಆದರ್ಶ ಹವೆ-ನೆಲ ಎಂದಾತನಿಗೆ ಬೇಗನೆ ಮನವರಿಕೆಯಾಯಿತು. ಲೈಬೀರಿಯದ ಅಧ್ಯಕ್ಷ ಚಾರ್ಲಸ್ ಕಿಂಗರು ಈ ಅಮೇರಿಕನ್ ಕೋಟ್ಯಧೀಶನ ಆಸ್ಥೆಯನ್ನು ಪ್ರೋತ್ಸಾಹಿಸಿದರು. ಫಯರ್‌ಸ್ಟೋನ್ ಒಂದು ಬೇರೆಯೆ ಕಂಪನಿ ಸ್ಥಾಪಿಸಿ ಅದರ ಮೂಲಕ ಲೈಬೀರಿಯಕ್ಕೆ ಎರಡು ಕೋಟಿ ರೂಪಾಯಿ ಸಾಲ ಕೊಡಿಸಿದನು. ಪ್ರತಿಯಾಗಿ ೧೦ ಲಕ್ಷ ಎಕರೆ ಭೂಮಿಯನ್ನು ರಬ್ಬರು ನೆಡುವದಕ್ಕಾಗಿ ೯೯ ವರ್ಷದ ಗುತ್ತಿಗೆಗೆ ಪಡೆದನು.

ಅಂದಿನಿಂದ ಲೈಬೀರಿಯಕ್ಕೆ ಸಂಪತ್ತು ಹರಿಯತೊಡಗಿತು. ಫಯರ್‌ಸ್ಟೋನನು ಕೊಡುತ್ತಿದ್ದ ಆಕರ್ಷಕ ಕೂಲಿಯಿಂದ ಆಕರ್ಷಣೆಗೊಂಡು ಆಳವಾದ ಒಳನಾಡಿನಿಂದ ಮೂಲನಿವಾಸಿಗಳು ಸಾವಿರಗಟ್ಟಳೆಯಲ್ಲಿ ಬರತೊಡಗಿದರು. ಫಯರ್‌ಸ್ಟೋನ್ ಅವರನ್ನು ಕೆಲಸಕ್ಕೆ ತೆಗೆದುಕೊಂಡ. ೨೫೦ ಚದರ ಮೈಲು ಅಡವಿಗಳು ಉರುಳಿದವು. ರಬ್ಬರು ಸಸಿಗಳು ನೆಡಲ್ಪಟ್ಟವು. ಅವು ಬೆಳೆದಂತೆ ಫಯರ್‌ಸ್ಟೋನ್ ತನ್ನ ಸಾಮ್ರಾಜ್ಯ ಕಟ್ಟತೊಡಗಿದನು. ಅವನು ಜಗತ್ತಿನಲ್ಲೇ ಅತಿ ದೊಡ್ಡ ರಬ್ಬರ್ ಕಾರಖಾನೆಯನ್ನು ಕಟ್ಟಿದನು. ತನ್ನ ರಬ್ಬರು ಗಿಡಗಳ ರಸ ಇಳಿಸುವವರಿಗಾಗಿ ಕಾರಖಾನೆಯ ಕೆಲಸಗಾರರಿಗಾಗಿ ಅವನು ಆಧುನಿಕ ಸೌಕರ್ಯಗಳುಳ್ಳ ೧೦,೦೦೦ ಮನೆಗಳನ್ನು ಕಟ್ಟಿದನು. ಅವರಿಗೆ ಕೆಲಸದ ತರಬೇತಿ ಕೊಡಿಸಿದನು. ಅವರ ಮಕ್ಕಳಿಗೆ ಶಾಲಾ ಸೌಕರ್ಯಗಳನ್ನೊದಗಿಸಿದನು. ಅವರಿಗಾಗಿ ಆಸ್ಪತ್ರೆಗಳನ್ನು ನಿರ್ಮಿಸಿದನು.

ಎರಡನೇ ಮಹಾಯುದ್ಧದ ಕಾಲದಲ್ಲಿ ಲೈಬಿರಿಯವು ಅಮೇರಿಕನ್ನರ ಯುದ್ಧ ನೆಲೆಯಾಯಿತು. ಇದು ಅಮೇರಿಕನ್ ಪ್ರಭಾವವನ್ನು ಇನ್ನಷ್ಟು ಹೆಚ್ಚಿಸಿತು. ಅಮೇರಿಕನ್ ಬಂಡವಳ ರಭಸದಿಂದ ದೇಶವನ್ನು ಪ್ರವೇಶಿಸಿತು. ಅವರು ಮುಟ್ಟಿದ್ದೆಲ್ಲ ಚಿನ್ನವಾಗಿದೆ.

ಇಂದು ಲೈಬೀರಿಯದಲ್ಲಿ ಫಯರ್‌ಸ್ಟೋನನ ಒಂದು ಕೋಟಿ ರಬ್ಬರು ಗಿಡಗಳಿವೆ. ಅವುಗಳ ರಸ ಸಂಗ್ರಹಿಸುವ ಮತ್ತು ಕಾರಖಾನೆಯಲ್ಲಿ ದುಡಿಯುವ ಜನರ ಸಂಖ್ಯೆ ೫೫,೦೦೦ ವಾಗಿದೆ. ಪ್ರತಿ "ಈಳಿಗ"ನಿಗೆ ದಿನಕ್ಕೆ ಆರು ತಾಸಿನ ಕೆಲಸಕ್ಕೆ ರೂ. ೨ ಕೂಲಿ ಸಿಗುತ್ತದೆ. ಫಯರ್‌ಸ್ಟೋನನೇ ಸ್ಥಾಪಿಸಿದ ಆಯಾತ-ನಿರ್ಯಾತ ಕಂಪೆನಿಯವರು ಅಗ್ಗದರದಲ್ಲಿ ಅವನಿಗೆ ಆಹಾರ, ವಸ್ತ್ರ, ಕಂಬಳಿಗಳನ್ನು ಒದಗಿಸುತ್ತಾರೆ. ಅತ್ಯಾಧುನಿಕ ಔಷಧಿಗಳು ಅವನಿಗೆ ಪುಕ್ಕಟೆ ಲಭ್ಯವಾಗುತ್ತವೆ. ಅವನ ಮಕ್ಕಳಿಗೆ ಧರ್ಮಾರ್ಥ

ಶಿಕ್ಷಣ ದೊರೆಯುತ ದೆ.

ದೇಶಕ್ಕೆ ಫಯರ್‌ಸ್ಟೋನ್ ಕಂಪೆನಿಯ ಸೇವೆ ಗಮನಾರ್ಹವಾದದ್ದು. ೭೦೦ ಮೈಲು ಉತ್ತಮ ರಸ್ತೆ ಅತ್ಯಂತ ಅನಾಗರಿಕ ಒಳನಾಡುಗಳನ್ನು ನಾಗರಿಕತೆಗೆ ತೆರೆಯುತ್ತಿದೆ. ಅದು ಸ್ಥಾಪಿಸಿದ ಹೆರಿಗೆ ಆಸ್ಪತ್ರೆಗಳಲ್ಲಿ ವರ್ಷಕ್ಕೆ ೧,೫೦೦ ಮಕ್ಕಳು ಹುಟ್ಟುತ್ತಿವೆ. ಅಮೇರಿಕದ ಮಟ್ಟದಲ್ಲೇ ಇರುವ ಎರಡು ಉತ್ತಮ ಆಸ್ಪತ್ರೆಗಳಿಗಾಗಿ ಅದು ವರ್ಷಕ್ಕೆ ರೂ. ೩೨,೦೦,೦೦೦ ವೆಚ್ಚ ಮಾಡುತ್ತಿದೆ. ಕುಷ್ಠ, ಕುರುಡುರೋಗ ಮೊದಲಾದ ಉಷ್ಣವಲಯ ರೋಗಗಳ ಬಗ್ಗೆ ಆಫ್ರಿಕದಲ್ಲೇ ಉತ್ತಮವಾದ ಸಂಶೋಧನಾಲಯಗಳನ್ನು ಸ್ಥಾಪಿಸಲಾಗಿದೆ.

ಲೈಬೀರಿಯನ್ ಸರಕಾರದ ಉತ್ಪನ್ನದಲ್ಲಿ ನೂರಕ್ಕೆ ೩೩ ಕ್ಕೂ ಮಿಕ್ಕಿ— ಸುಮಾರು ರೂ. ೩೫ ಕೋಟಿ— ಫಯರ್‌ಸ್ಟೋನ್ ಕಂಪೆನಿಯಿಂದ ಬಂದ ಕರ ಕಂದಾಯಗಳೇ ಎಂದರೆ ಫಯರ್‌ಸ್ಟೋನ್ ಕಂಪೆನಿಯ ಮಹತ್ವ ತಿಳಿದೀತು. ಆದರೆ ಸ್ಥಳೀಯ ಜನರನ್ನು ತಮ್ಮ ಕಾಲ ಮೇಲೆ ನಿಲ್ಲಿಸಲಿಕ್ಕೆ ಕಂಪೆನಿಯು ಕೊಡುತ್ತಿರುವ ಅವಕಾಶವು ಲೈಬೀರಿಯದ ಈ ವರೆಗಿನ ಆರ್ಥಿಕ ಪರಾಧೀನತೆಯಿಂದ ಹೊರಗೆ ತರಲು ದಾರಿ ಮಾಡುತ್ತಿದೆ. ರಬ್ಬರು ತೋಟ ಮತ್ತು ಕಾರಖಾನೆಯಲ್ಲಿ ಅಗತ್ಯ ಬೀಳುವ ಕುಶಲ ಕೆಲಸಗಾರಿಕೆಗೆ ಹೆಚ್ಚುಹೆಚ್ಚು ಜನ ಸ್ಥಳೀಯ ಕರಿಯರನ್ನು ತರಬೇತಿ ಮಾಡಲಾಗುತ್ತಿದೆ. ೨೭೦೦ ಕಾರಕೂನರು, ಶಿಕ್ಷಕರೇ ಮೊದಲಾದವರು ಕರಿಯರೇ ಆಗಿದ್ದಾರೆ. ಇಲ್ಲಿ ತರಬೇತಾದ ಅನೇಕರು ಕೆಲಸ ಬಿಟ್ಟು ರಾಜಕೀಯದಲ್ಲಿ ಪ್ರವೇಶಿಸುವಷ್ಟು ಮುಂದುವರಿದಿದ್ದಾರೆ. ರಬ್ಬರು ತೋಟದ ಶಾಲೆಗಳಲ್ಲಿ ಉತ್ತಮ ರೀತಿಯಲ್ಲಿ ಪಾಸಾದವರಿಗೆ ರಾಜಧಾನಿಯ ಸರಕಾರಿ ಹೈಸ್ಕೂಲುಗಳಿಗೆ ಮತ್ತು ಅಲ್ಲಿಂದಲೂ ಮುಂದೆ ವಿದೇಶಿ ಶಿಕ್ಷಣಕ್ಕೆ ಹೋಗಲು ಧನಸಹಾಯ



ಅಧ್ಯಕ್ಷ ಟಬ್ಮನ್

ನೀಡಲಾಗುತ್ತಿದೆ. ಈ ವರೆಗೆ ೧೪೦ ಮುಖ್ಯ ಮೇಲ್ವಿಚಾರಕರ ಸ್ಥಾನಗಳು ಬಿಳಿಯರಿಗೆ ಮೀಸಲಾಗಿದ್ದವು. ಈಗ ಅವುಗಳಿಗೂ ಸಾವಕಾಶವಾಗಿ ಲೈಬೀರಿಯನ್ನರಿಗೆ ಪ್ರವೇಶ ಸಿಗುತ್ತಿದೆ.

ಮೊನ್ನೆಮೊನ್ನೆಯ ವರೆಗೆ ನೇಗಿಲನ್ನು ಕೂಡ ಕಂಡಿರದ ಮೂಲ ನಿವಾಸಿ ಲೈಬೀರಿಯನ್ನರಿಗೆ ಈಗ ಸ್ವಂತ ರಬ್ಬರು ತೋಟಗಳನ್ನು ಬೆಳೆಸಲು ಫಯರ್‌ಸ್ಟೋನ್ ಕಂಪೆನಿ ಪ್ರೋತ್ಸಾಹ ನೀಡುತ್ತಿದೆ. ಲೈಬೀರಿಯನ್ನರು ಈಗ ಒಟ್ಟು ೭೫ ಲಕ್ಷ ಮರಗಳ ಒಡೆಯರಾಗಿದ್ದಾರೆ.

ಲೈಬೀರಿಯದ ಈ ತೀವ್ರ ಮುನ್ನಡೆ ಯೋಜನೆ ವೈಪರೀತ್ಯಗಳಿಲ್ಲದೆ ಸಾಗುತ್ತಿದೆಯೆಂದಲ್ಲ. ಲೈಬೀರಿಯ ಹೆಸರಿಗೇನೋ ಪ್ರಜಾಸತ್ತಾತ್ಮಕ ದೇಶ. ಆದರೆ ಈ ಪ್ರಜಾಸತ್ತೆ ಅಮೇರಿಕದಿಂದ ಬಂದ ಬಿಡುಗಡೆ ಹೊಂದಿದ ನಿಗ್ರೋ ಗುಲಾಮರ ಸಂತತಿಯವರಿಗಷ್ಟೇ ಮೊನ್ನೆಯ ವರೆಗೂ ಸೀಮಿತವಾಗಿತ್ತು. ಅವರೇ ಮತದಾರರು, ಅವರೇ ಆಳುವ ವರ್ಗ; ಒಳನಾಡಿನಲ್ಲಿದ್ದ ಅನಾಗರಿಕರಿಗಂತಿರಲಿ, ಅಲ್ಲಿಂದ ಬಂದು ಶಹರುಗಳಲ್ಲಿ

ನೆಲಸಿದ ಅದೇ ಕರೀಬಣ್ಣದ ಸ್ಥಳೀಯ ನಿಗ್ರೋ ಗಳಿಗೂ ಮತಾಧಿಕಾರವಿದ್ದಿಲ್ಲ. ಅಮೇರಿಕೆ ನಿಗ್ರೋಗಳು ತಮ್ಮ ಈ ಸವರ್ಣೀಯರನ್ನು ತುಚ್ಛೀಕಾರದಿಂದಲೇ ನೋಡುವ ಪರಿಸ್ಥಿತಿ ಅಲ್ಲಿದೆ. ೧೯೪೪ ರಿಂದ ಲೈಬೀರಿಯದ ಅಧ್ಯಕ್ಷ ರಾಗಿರುವ ವಿಲಿಯಂ ಟಬ್‌ಮನ್ನರು ಈ ಅಸಂ ಬದ್ಧತೆಯನ್ನು ಮನಗಂಡು ಮತಾಧಿಕಾರವನ್ನು ವಿಸ್ತರಿಸಿದ್ದಾರೆ. "ಅಮೆರೊಲೈಬೀರಿಯನ್" ಎಂಬ ಪದವನ್ನೇ ನಿರಾಕರಿಸಿ ಅವರು ಎಲ್ಲ ಲೈಬೀರಿಯನ್ನರೂ ಪೂರ್ಣ ಲೈಬೀರಿಯನ್ನರೇ ಎಂದು ಸಾರಿದ್ದಾರೆ.

ನಾಗರಿಕತೆಯ ಸೆಳವಿನಲ್ಲಿ ಸಿಕ್ಕಿದ ಮೂಲ ನಿವಾಸಿ ಒಂದು ಬಗೆಯ ಇತ್ತಂಡ ಮಾನಸಿಕ ಜೀವನವನ್ನು ಬಾಳುತ್ತಿದ್ದಾನೆ. ಶತಮಾನ ಗಳಿಂದ ರಕ್ತಗತವಾದ ಅಂಧಶ್ರದ್ಧೆಯನ್ನು ತಳ್ಳಿ ಹಾಕುವುದು ಅವನಿಗೆ ಸುಲಭವಾಗಿಲ್ಲ. ತೋಟದ ಕೆಲಸಕ್ಕೆ ಬರುವ ನಿಗ್ರೋಗಳಲ್ಲಿ ಒಳನಾಡಿನ ಮೂಲನಿವಾಸಿಗಳೇ ಹೆಚ್ಚು. ಇಲ್ಲಿ ರುವಾಗ ಅವರು ಕ್ರೈಸ್ತ ಧರ್ಮದ ಪ್ರಭಾವ ಕ್ಕೊಳಗಾಗಿ ಚರ್ಚುಗಳಿಗೆ ಹೋಗುತ್ತಾರೆ. ಆದರೆ ರಜೆಯ ಮೇಲೆ ತಮ್ಮ ಊರಿಗೆ ಹೋದಾಗ ತಮ್ಮ ಕುಲದ ದೈವ ದೇವತೆಗಳಿಗೇ ಅವರ ಭಯ ಭಕ್ತಿ ಮೀಸಲು. ಅಷ್ಟೇಕೆ, ತೋಟ ಗಳಲ್ಲಿರುವಾಗಲೂ ಅವರು ಭೂತ ಪ್ರೇತಗಳ ಭಯದಿಂದ ಕಿಟಕಿಗಳನ್ನು ಭದ್ರವಾಗಿ ರಾತ್ರಿ ಯೆಲ್ಲ ಮುಚ್ಚಿಡುತ್ತಾರೆ. ಒಮ್ಮೆ ಕಂಪನಿಯ ವರು ಅವರ ವಸತಿಗಳ ಸನ್ನಿವೇಶ ಸುಂದರವಾಗ ಬೇಕೆಂದು ಹುಲ್ಲಿನ ಬೀಜಗಳನ್ನು ಬಿತ್ತಿಸಿದರು. ಆದರೆ ಹುಲ್ಲು ಮೊಳಕೆಯೊಡೆಯುವ ಮೊದಲೇ ಕೆಲಸಗಾರರ ಹೆಂಡಂದಿರು ಅವುಗಳನ್ನೆಲ್ಲ ಕೆದರಿ ಕಿತ್ತು ನಿರ್ನಾಮ ಮಾಡಿದ್ದರು. ಹುಲ್ಲು, ಭೂತ ಪಿಶಾಚಿಗಳಿಗೆ ಆಶ್ರಯ ಸ್ಥಾನವಾಗಿದೆಯಲ್ಲ!

ಹಳೆಯ ಕುಲದ ಕಾಯದೆಗಳು ಸುಲಭ ವಾಗಿ ಮಾಯವಾಗುತ್ತಿಲ್ಲ. ರಬ್ಬರ ಕಂಪೆನಿಯ "ಈಳಿಗ"ರನ್ನು ೩೭ ವಿಭಾಗಗಳಾಗಿ ಮಾಡಲಾ ಗಿದೆ. ಅನಾದಿಯಿಂದ ಬೇರೆ ಬೇರೆಯಾಗಿದ್ದ ಈ ೩೭ ಲೈಬೀರಿಯನ್ ಕುಲಗಳು ಒಟ್ಟಾಗಿ ದುಡಿ ಯಲು ಕೂಡ ಹಿಂಜರಿಯುತ್ತಿರುವುದು ಇದಕ್ಕೆ ಕಾರಣ. ಅನೇಕ ಆಫ್ರಿಕನ್ ದೇಶಗಳಲ್ಲಿರುವಂತೆ ಕುಲ ನಿಯಮಗಳು ಲೈಬೀರಿಯದಲ್ಲೂ ಬಿಗಿ ಯಾಗಿವೆ. ವ್ಯಕ್ತಿಗೆ ಅಲ್ಲಿ ಆರ್ಥಿಕ ಸ್ವಾತಂತ್ರ್ಯ ವಿಲ್ಲ, ಕುಲವೇ ಎಲ್ಲರ ಗಳಿಕೆಗೂ ಅಧಿಕಾರಿ, ಎಲ್ಲರ ಹೊಟ್ಟೆಗೂ ಜವಾಬ್ದಾರಿ. ಆದ್ದರಿಂದ ಯಾವ ಲೈಬೀರಿಯನ್ ಮೂಲ ನಿವಾಸಿಯೂ ಸ್ವತಂತ್ರವಾಗಿ ಕಂಪೆನಿಯ ನೌಕರನಾಗಿ ತನ್ನ ಸಂಪಾದನೆಯ ಹಕ್ಕನ್ನು ಬಜಾಯಿಸಲಾರ. ಪರಿಣಾಮವಿಷ್ಟೇ: ತೋಟಗಳಲ್ಲಿ ಕೆಲಸಕ್ಕೆ ಹೋದವರ ಸೇವೆ ಕುಲಕ್ಕೆ ತಪ್ಪುವುದರಿಂದ ಆತ ಗೌಡನಿಗೆ ದಂಡ ತೆತ್ತೇ ನೌಕರಿ ಹಿಡಿಯ ಬೇಕಾಗುತ್ತದೆ. ಪರಿಣಾಮವಾಗಿ ಕಂಪೆನಿಯು ತಾನು ಭರ್ತಿ ಮಾಡಿಕೊಂಡ ಮೂಲ ನಿವಾಸಿ ಗಳಿಗಾಗಿ ವರ್ಷಕ್ಕೆ ರೂ. ೨,೦೦,೦೦೦ ದಷ್ಟು ಪರಿಹಾರವನ್ನು ವಿವಿಧ ಕುಲಗಳ ಗೌಡರಿಗೆ ತೆರ ಬೇಕಾಗುತ್ತದೆ! ಇದೊಂದು ಬಗೆಯ ಗುಲಾಮ ಗಿರಿಯೆ ತಾನೆ.

ಲೈಬೀರಿಯದ ರಾಜಕೀಯ ಸ್ವಾತಂತ್ರ್ಯವೂ ಅಮೇರಿಕದ ಆರ್ಥಿಕ ಅವಲಂಬನದಿಂದ ಪರಿ ಮಿತವಾಗಿಯೆ ಇದೆಯೆನ್ನದೆ ವಿಧಿಯಿಲ್ಲ. ಇಡೀ ದೇಶದ ಸರಕಾರಿ ಆದಾಯದಲ್ಲಿ ಮೂರರ ಲ್ಲೊಂದು ಭಾಗ ಒಂದೇ ಕಂಪೆನಿಯಿಂದ ಬರು ತ್ತಿರುವಾಗ ಯಾವ ದೇಶ ಸ್ವತಂತ್ರವೆನಿಸೀತು? ಫಯರ್‌ಸ್ಟೋನ್ ಒಂದೇ ಅಮೇರಿಕನ್ ಕಂಪೆನಿ ಲೈಬೀರಿಯದಲ್ಲಿ ಬೇರು ಹಬ್ಬಿಸಿದೆ ಯೆಂದಲ್ಲ. ಗುಡ್ರಿಚ್ ರಬ್ಬರ ಕಂಪನಿ ಈಗ ೫೮,೦೦೦ ಎಕರೆಯಲ್ಲಿ ರಬ್ಬರು ನೆಡುತ್ತಿದೆ. ಸ್ಟೆಟಿನಸ್ ಕಂಪೆನಿ ಕಾಫಿ, ಕೊಕೋ, ತಾಳೀ ಎಣ್ಣೆಗಳನ್ನು ಉತ್ಪಾದಿಸುತ್ತಿದೆ.

ಆದರೆ ಅಧ್ಯಕ್ಷ ಟಬ್‌ಮನ್ನರು ಆಶಾವಾದಿ

ಮತ್ತು ಸಂಶಯ ರಹಿತ ವ್ಯಕ್ತಿ. ವಿದೇಶಿ ಬಂಡವಾಳ ತಮ್ಮ ದೇಶಕ್ಕೆ ತಾರಕವೆಂದವರು ನಂಬಿದ್ದಾರೆ. ಅವರ "ಮುಕ್ತದ್ವಾರ" ಧೋರಣೆಯಿಂದ ಈಗ ಡಚ್ಚರು—ಇಂಡೋನೇಶಿಯವನ್ನು ಕಳೆದುಕೊಂಡ ಮೇಲೆ ಅವರಿಗೆ ರಬ್ಬರು ಬೆಳೆಸಲು ಒಂದು ಸ್ಥಳ ಬೇಕಿತ್ತು—ಬಂಡವಳದೊಡನೆ ಪ್ರವೇಶಿಸಿದ್ದಾರೆ. ಜರ್ಮನ್ ಕಂಪೆನಿಯೊಂದು ಬಾಳೆ ತೋಟಗಳನ್ನು ಪ್ರಾರಂಭಿಸಿದೆ. ಸ್ಪಾನಿಶ್, ಸ್ವಿಸ್, ಜರ್ಮನ್ ಬಂಡವಳಗಾರರೂ ಬೇರೆ ಬೇರೆ ಉದ್ದಿಮೆಗಳಿಗಾಗಿ ಬಂಡವಳ ತರುತ್ತಿದ್ದಾರೆ. ಅಷ್ಟು ಮಟ್ಟಿಗೆ ಲೈಬೀರಿಯ ಒಂದೇ ದೇಶದ ಅವಲಂಬನದಿಂದ ತುಸು ತುಸು ಬಿಡುಗಡೆ ಹೊಂದುತ್ತಿದೆ. ಇದೀಗ ನಿಂಬ ಪರ್ವತ, ಬೋಯಿಗುಡ್ಡ ಮೊದಲಾದೆಡೆಗಳಲ್ಲಿ ಲಕ್ಷಾಂತರ ಟನ್ ಕಬ್ಬಿಣದ ಅದಿರು ನೆಲದ ಮೇಲೆಯೆ ಗಿರಿ ರೂಪದಲ್ಲಿರುವುದನ್ನು ಕಂಡು ಸರಕಾರವೇ ಯುರೋಪಿಯನ್ ಕಂಪೆನಿಗಳೊಡನೆ ಪಾಲುಗಾರಿಕೆಯಿಂದ ಕಡಿಯತೊಡಗಿದೆ. ಬಹುಶಃ ಇದು ಲೈಬೀರಿಯ ಪ್ರಾಯಪ್ರಬುದ್ಧವಾಗುತ್ತಿರುವುದರ ಸಂಕೇತವಾಗಿದೆ. *



## ಕಾಗೆಯ ಸತ್ಯಕಥೆ

ಕಾಗೆ ಬಲು ದಿಟ್ಟ ಹಕ್ಕಿ. ಕುಶಲ ಚೋರನೂ ಹೌದು. ಅದಕ್ಕೆ ತನ್ನ ಮರಿಗಳೆಂದರೆ ಪ್ರಾಣ. ತನಗಾದ ಅನ್ಯಾಯವನ್ನೊಮ್ಮೆ ಅದು ಮರೆತರೂ ಮರೆತೀತು, ಆದರೆ ತನ್ನ ಮರಿಗಳಿಗಾದ ಅನ್ಯಾಯವನ್ನೆಂದೂ ಅದು ಸಹಿಸುವುದಿಲ್ಲ.

ವಿರತದಲ್ಲಿ ಒಬ್ಬಾತನಿಗೆ ಇದರ ಕಟು ಅನುಭವ ಇತ್ತೀಚೆಗೆ ಬಂತು. ಆತ ತನ್ನ ಮನೆಯ ಜಗುಲಿಯಲ್ಲಿ ಕಾಗೆ ಕಟ್ಟಿಕೊಂಡಿದ್ದ ಗೂಡನ್ನು ನಾಶಮಾಡಿ ಅದರಲ್ಲಿದ್ದ ಮರಿಗಳನ್ನು ತುಳಿದು ಕೊಂದ: ಈತನ ಈ ಕೃತಿಯನ್ನು ತಂದೆ-ತಾಯಿ ಕಾಗೆಗಳು ಕಣ್ಣಾರೆ ಕಂಡಿದ್ದವು. ಮರಿಗಳ ಕೊಲೆಯಿಂದ ಕ್ರುದ್ಧವಾದ ಅವು ಆ ಮನುಷ್ಯನ ಮೇಲೆರಗಿ ತಲೆ ಮುಖಗಳನ್ನು ಕುಕ್ಕತೊಡಗಿದವು. ಆ ಮನುಷ್ಯ ಒಳಗೋಡಿ ಬಾಗಿಲು-ಕಿಟಕಿಗಳನ್ನು ಮುಚ್ಚಿಕೊಳ್ಳಬೇಕಾಯಿತು.

ಆದರೆ ಕಾಗೆಗಳು ಬಿಡಲಿಲ್ಲ. ಅವು ಕಾವಲು ಕುಳಿತವು. ಆ ಮನುಷ್ಯ ಹೊರಗೆ ಬಂದೊಡನೆ ಅವು ದಾಳಿ ಮಾಡುತ್ತಿದ್ದವು. ಅವುಗಳ ಜೊತೆಯಲ್ಲಿ ಅವುಗಳ ಬಳಗವೂ ದಾಳಿಯಲ್ಲಿ ಭಾಗವಹಿಸತೊಡಗಿದ್ದವು. ಆ ಮನುಷ್ಯ ಮನೆಯ ಹೊರಗೆ ಬರಲಾರದೆ ತನ್ನ ಸ್ನೇಹಿತರಿಗೆ ಹೇಳಿ ಕಳಿಸಿದ. ಅವರು ಬಂದು ಕೆಲ ಕಾಗೆಗಳನ್ನು ಗುಂಡಿಕ್ಕಿ ಕೊಂದರು. ಆದರೆ ಪ್ರಯೋಜನವಾಗಲಿಲ್ಲ. ಆ ಮನುಷ್ಯನಿಗೆ ಕಾಗೆಗಳ ಕಾಟ ತಪ್ಪಲಿಲ್ಲ.

ಕೊನೆಗೆ ಆ ಮನುಷ್ಯ ರಾತ್ರಿ ಕಳ್ಳನಂತೆ ಮನೆಯಿಂದ ಹೊರಬಿದ್ದು ಕಾರಿನಲ್ಲಿ ಕುಳಿತು ಬೇರೆಡೆಗೆ ಹೋಗಬೇಕಾಯಿತು, ಆಗಲೂ ಕಾಗೆಗಳು ಕಾಕಾ ಎಂದು ಕರ್ಕಶವಾಗಿ ಕೂಗುತ್ತಲೇ ಅವನನ್ನು ಬೀಳ್ಕೊಟ್ಟವು. ಆ ಮನುಷ್ಯ ಈಗ ಅಲಿಗಡದಲ್ಲಿ ವಾಸವಾಗಿದ್ದಾನೆಂದು ತಿಳಿಯುತ್ತದೆ.

— ರಸ್ಕಿನ್ ಬಾಂಡ್

ಸಕಾಲದಲ್ಲಿ ಉಪಚಾರ ಮಾಡದಿದ್ದರೆ ಇದು ತುಂಬ
ಕೆಟ್ಟ ಪರಿಣಾಮವನ್ನು ಮಾಡುವ ರೋಗ

# ಮಕ್ಕಳ ಮುಟ್ಟುದೋಷ

ಡಾ. ಬಾ. ಶಂ. ಜಾವಡೇಕರ

ಕಾಲಿನ ಎಲುವುಗಳು ವಕ್ರವಾಗಿದ್ದು, ಬೆನ್ನೆಲುವು ಬಾಗಿದ್ದು, ಎದೆಯ ಗೂಡು ಮುಂದೆ ಬಂದು, ಕೈಕಾಲಿನ ಸಂದುಗಳು ಬಾತು, ಹೊಟ್ಟೆ ಉಬ್ಬಿ, ತಲೆ ದೊಡ್ಡದಾಗಿ, ಇಡೀ ದೇಹವೇ ವಿಕೃತವಾಗಿರುವ ಮಕ್ಕಳು ದಟ್ಟ ಜನವಸತಿ ಇರುವಲ್ಲಿ, ಯೋಗ್ಯ ಲಾಲನೆಪಾಲನೆ ಇಲ್ಲದ ಕಡೆಗಳಲ್ಲಿ, ಅಸ್ವಚ್ಛ ವಾತಾವರಣದಲ್ಲಿ, ಕೂಲಿಕಾರರಲ್ಲಿ, ಹಳ್ಳಿಯ ಅಶಿಕ್ಷಿತ ಜನರಲ್ಲಿ ಸಾಕಷ್ಟು, ಸಂಖ್ಯೆಯಲ್ಲಿ ಇರುವುದು ಕಾಣುತ್ತದೆ.

ಇಂಥ ಹುಡುಗರಿಗೆ ಮುಟ್ಟುದೋಷವಾಗಿದೆ ಎಂದು ಹೇಳುವುದುಂಟು. ಇದಕ್ಕೆ ಡಾಕ್ಟರರು ರಿಕೆಟ್ಸ್ (Rickets) ಎಂದು ಹೇಳುತ್ತಾರೆ. ಸರ್ಕಸ್ಸಿನಲ್ಲಿ ಉದ್ದ ವಿದೂಷಕನೊಂದಿಗಿರುವ ಕುಳ್ಳ ವಿದೂಷಕನೂ ಇದೇ ತರಹ ನಿಸರ್ಗದ ಅವಕೃಪೆಗೊಳಗಾಗಿ ಶಾರೀರಿಕ ಬೆಳವಣಿಗೆ ಸರಿಯಾಗಿ ಆಗದೆ ವಿಕೃತರೂಪ ತಾಳಿದ ದುರ್ದೈವೀ ಮನುಷ್ಯ! ನಾಲ್ಕೈದು ವರ್ಷದ ಹುಡುಗನಷ್ಟು ಕೈಕಾಲಿನ ಎಲುವು ಬೆಳೆದು ಮುಂದೆ ಈ ಬೆಳವಣಿಗೆ ಅಲ್ಲಿಗೇ ನಿಂತು ಬಿಟ್ಟು ವಯಸ್ಸಾದಂತೆ ಮುಖಚರ್ಯೆ ಮಾತ್ರ ಪ್ರೌಢವಾಗಿ ದೇಹ ನಾಲ್ಕು ವರ್ಷದಷ್ಟೇ ಉಳಿದು ಈ ವಿಕೃತ ವಿದೂಷಕರ ಸೃಷ್ಟಿಯಾಗಿರುತ್ತದೆ. ವಿದೂಷಕನು ಎಷ್ಟೋ ಪ್ರೇಕ್ಷಕರನ್ನು ನಗಿಸುವನಾದರೂ ಸ್ವತ: ದುರ್ದೈವಿಯೇ ಸರಿ. ಬಾಲ್ಯದಲ್ಲಿ ಈ ರೀತಿ ಮುಟ್ಟುದೋಷದಿಂದ ಮಕ್ಕಳು ಸೊರಗ ತೊಡಗಿದಾಗ ಕೂಡಲೆ ಯೋಗ್ಯ ಉಪಾಯ ಮಾಡದೇ ಹೋದರೆ ಈ ದೋಷ ಕೊನೆಯ ವರೆಗೆ ಉಳಿದು ಬಿಡುತ್ತದೆ.

ಮನುಷ್ಯನ ಎಲುವಿನಲ್ಲಿ ಇರುವ ಮುಖ್ಯ ಘಟಕವೆಂದರೆ ಕ್ಯಾಲ್ಸಿಯಂ (Calcium) ಕಲ್ಕ. ಆಹಾರದಿಂದಲೇ ಮನುಷ್ಯನಿಗೆ ಈ ಕ್ಯಾಲ್ಸಿಯಂ ಸಿಗುತ್ತದೆ. ಹಾಲು, ತತ್ತಿ, ಹಣ್ಣುಹಂಪಲು, ತರಕಾರಿ ಇತ್ಯಾದಿ ಪದಾರ್ಥಗಳು ಇದನ್ನು ನೀಡುತ್ತವೆ. ಪ್ರಾರಂಭದ ವಯಸ್ಸೇ ಶರೀರವನ್ನು ಭರದಿಂದ ಬೆಳೆಸುವ ವಯಸ್ಸಾದುದರಿಂದ ಈ ಕಾಲಕ್ಕೇ ಕ್ಯಾಲ್ಸಿಯಂ ಪೂರೈಕೆ ಸಾಕಷ್ಟು ಆಗಬೇಕಾದುದು ಅಗತ್ಯವಿರುತ್ತದೆ.

ಎಲುವು ನಿರೋಗಿಯಾಗಿ ಯೋಗ್ಯ ಪ್ರಮಾಣದಲ್ಲಿ ಬೆಳೆಯಬೇಕಾದರೆ ಕ್ಯಾಲ್ಸಿಯಂನಂತೆ ವಿಟಾಮಿನ್ 'ಡಿ'ಯ ಅವಶ್ಯಕತೆಯೂ ಇದೆ. ವಿಟಾಮಿನ್ 'ಡಿ' ಇಲ್ಲದಿದ್ದರೆ ಗ್ರಹಿಸಿದ ಆಹಾರದಲ್ಲಿ ಕ್ಯಾಲ್ಸಿಯಂ ಎಷ್ಟೇ ಇದ್ದರೂ ಅದನ್ನು ಅರಗಿಸಿಕೊಂಡು ವಿನಿಯೋಗಿಸಲಾಗುವುದಿಲ್ಲ. ಮತ್ತು ಯಥಾಪ್ರಕಾರ ಮಕ್ಕಳು ಮುಟ್ಟುದೋಷಕ್ಕೆ

"ಅಮೃತ" ದಿಂದ

ಗುರಿಯಾಗುತ್ತಾರೆ. ಆದ್ದರಿಂದ ಈ ರೋಗವನ್ನು ತಡೆಯಲು ವಿಟಾಮಿನ್ 'ಡಿ' ಮತ್ತು ಕ್ಯಾಲ್ಸಿಯಂ ಈ ಎರಡೂ ಪದಾರ್ಥಗಳು ಬೇಕಾಗುತ್ತವೆ. ಸೂರ್ಯಪ್ರಕಾಶದಲ್ಲಿ ನೀಲಲೋಹಿತ (Ultra Violet) ಎಂಬ ಅದೃಶ್ಯ ಕಿರಣಗಳಿರುತ್ತವೆ. ಇವು ಮಕ್ಕಳ ಮೈಮೇಲೆ ಬಿದ್ದರೆ ಚರ್ಮದೊಳಗೆ ವಿಟಾಮಿನ್ 'ಡಿ' ತಯಾರಾಗುತ್ತದೆ. ಆದ್ದರಿಂದಲೇ ಮುಟ್ಟುದೋಷವಾಗಬಾರದೆಂದು ನೀಲಲೋಹಿತ ಕಿರಣಗಳ ಉಪಚಾರ ಮಾಡುತ್ತಾರೆ. ಬೆಳಗಿನ ಹೂಬಿಸಿಲಲ್ಲಿ ಮಗು ಒಂದೆರಡು ತಾಸು ಆಡಿದರೂ ಸಾಕು. ಜನವಸತಿ ದಟ್ಟವಾಗುತ್ತಿದ್ದು ಇತ್ತೀಚೆಗೆ ಶಹರಗಳಲ್ಲಿ ಈ ಸೂರ್ಯಪ್ರಕಾಶದ ಪೂರೈಕೆ ಮಕ್ಕಳಿಗೆ ಚೆನ್ನಾಗಿ ಆಗದಂತಾಗಿದೆ. ಪ್ರತಿಯೊಂದು ಚಾಳಿನವರೂ ತಮ್ಮ ಮನೆಗಳ ಅಟ್ಟಗಳ ಮೇಲೆ ತಮ್ಮ ತಮ್ಮ ಚಾಳಿನ ಚಿಕ್ಕ ಮಕ್ಕಳನ್ನು ದಿನಕ್ಕೊಬ್ಬ ಪಾಲಕನಂತೆ ಆಡಿಸಿ ಈ ಕೊರತೆಯನ್ನು ತುಂಬ ಬಯಸಿದರೆ ಆಗಬಹುದು.

ಎಂಟು-ಹತ್ತು ತಿಂಗಳ ವರೆಗೆ ಕೂಸಿಗೆ ತಾಯಿಯ ಮೊಲೆ ಹಾಲೇ ಹೆಚ್ಚು ಅವಶ್ಯಕವಿರುತ್ತದೆ. ಇದರಲ್ಲಿ ವಿಟಾಮಿನ್ 'ಡಿ' ಮತ್ತು ಕ್ಯಾಲ್ಸಿಯಂ ನೈಸರ್ಗಿಕವಾಗಿ ಯೋಗ್ಯ ಬೆರಕೆಯೊಂದಿಗೆ ದೊರೆಯುತ್ತದೆ. ಎಂಟು - ಹತ್ತು ತಿಂಗಳ ವರೆಗೆ ತಾಯಿಯ ಹಾಲು ಕುಡಿಯುವ ಮಕ್ಕಳಿಗೆ ಸಹಸಾ ಈ ರೋಗವಾಗುವುದಿಲ್ಲ. ಡಬ್ಬಿಗಳಲ್ಲಿ ಸಿಗುವ ಪೌಡರ್ ಹಾಲು ಎಷ್ಟೇ ಶಾಸ್ತ್ರ ಶುದ್ಧವಾಗಿ ತಯಾರಿಸಿದ್ದಾಗಿದ್ದರೂ ಅದು ತಾಯಿಯ ಹಾಲನ್ನು ಸರಿಗಟ್ಟಲಾರದು. ಆದರೆ ತಾಯಿಯ ಹಾಲೂ ಒಂದು ವರ್ಷದ ವರೆಗೆ ಮಾತ್ರ ಕೂಸಿಗೆ ಯೋಗ್ಯ. ಆ ಮೇಲೆ ಆ ಹಾಲಿನಲ್ಲಿ ಮೇಲಿನ ಗುಣಗಳು ಕಡಿಮೆಯಾಗುವವು. ಆದ್ದರಿಂದ ಆ ಮೇಲೂ ಈ ಹಾಲನ್ನು ಕುಡಿಸಿದರೂ ಮುಟ್ಟುದೋಷವಾಗಬಹುದು. ಒಂದು ವರ್ಷದ ಮೇಲೆ ಮಕ್ಕಳಿಗೆ ಹೊರಗಿನ ಅನ್ನಪದಾರ್ಥಗಳನ್ನು ತಿನ್ನುವ ಅಭ್ಯಾಸ ಮಾಡಿಸಬೇಕು. ಇಲ್ಲದಿದ್ದರೆ ಹೊರಗಿನಿಂದೂ ಅವಶ್ಯಕ ಜೀವನಸತ್ವ ಹಾಗೂ ಕ್ಯಾಲ್ಸಿಯಂ ಸಿಗದೆ ತಾಯಿಯ ಹಾಲೂ ಅದನ್ನು ಪೂರೈಸಲು ಅಸಮರ್ಥವಾಗಿ ಎರಡೂ ಬಗೆಯಲ್ಲಿ ಆ ಅಂಶದ ಕೊರತೆ ಹೆಚ್ಚಿ ಮಗು ಸೊರಗತೊಡಗುತ್ತದೆ!

ಎಲುವಿನಲ್ಲಿ ಕ್ಯಾಲ್ಸಿಯಂ ೬೩% ಇರುತ್ತದೆ. ಪ್ರಮಾಣ ೬೦% ರ ಕೆಳಗೆ ಇಳಿಯಬಾರದು. ಇದೇ ೨೧% ರಷ್ಟು ಕಡಿಮೆಯಾದರೆ ಮುಟ್ಟುದೋಷವಾಗುತ್ತದೆ. ಆಗ ಎಲುವುಗಳು ಮಿದುವಾಗಿ ಬಾಗಿ ಎಲುವಿನ ಎರಡು ತುದಿಗಳು ಬಾಯುತ್ತವೆ. ನಡುವಿನ ನಲಿಕೆಯಂಥ ಭಾಗ ಜರ್ಜರಿತವಾಗುತ್ತದೆ.

ಹೀಗಾದಾಗ ಮಕ್ಕಳು ಹಟಮಾರಿಗಳಾಗುತ್ತಾರೆ. ಅವರಿಗೆ ಸರಿಯಾಗಿ ನಿದ್ದೆ ಬರುವುದಿಲ್ಲ. ಹಣೆಯ ಮೇಲೆ ಹೆಚ್ಚು ಬೆವರು ಸುರಿಯಲಾರಂಭಿಸುತ್ತದೆ. ಮೇಲಿಂದ ಮೇಲೆ ನೆಗಡಿಯಾಗುತ್ತದೆ. ಹೊಟ್ಟೆಕೆಟ್ಟು ಜುಲಾಬು ಆಗುತ್ತದೆ. ಬಾಲಗ್ರಹದಂತೆ ಕೈಕಾಲುಗಳನ್ನು ಸೆಟೆಸುತ್ತಾರೆ. ಹಲ್ಲು ಬರುವುದೂ ತಡವಾಗುವುದು. ಮೊಳಕಾಲುಗಳು ಬಿಲ್ಲಿನಂತೆ ಬಾಗುತ್ತವೆ.

ಮುಟ್ಟುದೋಷದ ಪ್ರಾರಂಭಿಕ ಲಕ್ಷಣಗಳೆಂದರೆ ಒಂದರಿಂದ ಮೂರು ತಿಂಗಳೊಳಗಿನ ಮಕ್ಕಳ ನೆತ್ತಿಯಂತೆಯೆ ಕಿವಿಯ ಹಿಂದಿನ (ತಲೆಯ) ಎಲುವೂ ಮಿದುವಾಗ ತೊಡಗುತ್ತದೆ. ಎದೆ ಮತ್ತು ಹೊಟ್ಟೆಯ ನಡುವೆ ವರ್ತುಲಾಕಾರದ ತಗ್ಗಾದ ಪಟ್ಟಿ ಕಾಣತೊಡಗುತ್ತದೆ. ಇವಕ್ಕೆ ಡಾಕ್ಟರರು 'ಹ್ಯಾರಿಸನ್ ಸಲಕಸ್' ಎನ್ನುತ್ತಾರೆ. ಈ ಕಾಲಕ್ಕೆ ಉಪಚಾರಗಳನ್ನು ಪ್ರಾರಂಭಿಸದಿದ್ದರೆ ಬೆಳವಣಿಗೆ ಸ್ಥಗಿತವಾಗಿ ಶ್ವಾಸನಲಿಕಾ ರೋಗ(Bronchitis), ಫುಪ್ಪುಸ ಜ್ವರ ( Pneumonia ) ಮುಂತಾದ ರೋಗಗಳು ಸಂಭವಿಸುವವು. ಹೆಣ್ಣು ಕೂಸಿನ ಕಟಿ

ಬಂಧದ ಎಲವು ಈ ರೀತಿ ವಿಕೃತವಾದರೆ ಮುಂದೆ ಹೆರಿಗೆಯ ಕಾಲಕ್ಕೆ ತೊಂದರೆಯಾಗಿ ಕೃತ್ರಿಮ ಸಾಧನಗಳನ್ನು ಉಪಯೋಗಿಸಿ ಅಥವಾ ಶಸ್ತ್ರಕ್ರಿಯೆ ಮಾಡಿ ( ಸಿಝೇರಿಯನ್ ಸೆಕ್ಶನ್ ) ಕೂಸನ್ನು ಹೊರಗೆ ತೆಗೆಯಬೇಕಾಗುತ್ತದೆ. ಆದ್ದರಿಂದ ಹೆಣ್ಣು ಮಕ್ಕಳಿಗೆ ಮುಟ್ಟು ದೋಷವಾದರೆ ಬೇಗನೆ ಯೋಗ್ಯ ಉಪಚಾರ ಮಾಡಬೇಕಾದ್ದು ಅತ್ಯವಶ್ಯ.

ಬಸಿರಾಗಿರುವಾಗಲೆ ಜಾಗ್ರತೆ ವಹಿಸಿದರೆ ಹುಟ್ಟಿದ ಮಕ್ಕಳಲ್ಲಿ ಮುಟ್ಟುದೋಷಕ್ಕೆ ಆಸ್ಪದ ಕಡಿಮೆಯಾಗುತ್ತದೆ. ಗರ್ಭದಲ್ಲಿಯೆ ವಿಟಾ-ಮಿನ್ ಡಿ ಮತ್ತು ಕ್ಯಾಲ್ಸಿಯಂಗಳ ಪೂರೈಕೆ ಯೋಗ್ಯ ಪ್ರಮಾಣದಲ್ಲಿ ಆಗುತ್ತ ಹೋದರೆ ಮುಂದಿನ ಅನಾಹುತ ತಡೆಯಲು ಎಷ್ಟೋ ಮಟ್ಟಿಗೆ ಸಾಧ್ಯ. ಗರ್ಭವತಿಯರು ತಮ್ಮ ನಿತ್ಯದ ಆಹಾರದಲ್ಲಿ ಕನಿಷ್ಠ ೭೦೦ ಇಂಟರ್ ನ್ಯಾಶನಲ್ ಯುನಿಟ್ಸ್ ವಿಟಾಮಿನ್ ' ಡಿ ' ಸೇವಿಸಬೇಕು. ಕಾಡ್‌ಲಿವ್ಹರ ಆಯಿಲ್‌ನ್ನು ದಿನಕ್ಕೆ ಎರಡು ಚಮಚೆ ತೆಗೆದುಕೊಂಡರೆ ಈ ಪೂರೈಕೆಯಾಗುತ್ತದೆ. ತತ್ತಿಯೊಳಗಿನ ಹಳದಿ ಪದಾರ್ಥವೂ ಹಿತಕರವಾಗಿರುತ್ತದೆ. ಉತ್ತಮ ಹಾಲನ್ನು ಅರ್ಧಸೇರಿನಂತೆ ಸೇವಿಸಿದರೂ ವಿಟಾಮಿನ್ ' ಡಿ ' ಮತ್ತು ಕ್ಯಾಲ್ಸಿಯಂ ಪೂರೈಕೆ ಯೋಗ್ಯವಾಗಿ ಆಗುವದು. ಶುದ್ಧ ಹವೆಯಲ್ಲಿ ತಿರುಗಾಡಿ ಸೂರ್ಯ ಪ್ರಕಾಶದಿಂದೂ ವಿಟ್ಯಾಮಿನ್ ' ಡಿ ' ಸಂಪಾದಿಸುವುದು ಅಗತ್ಯ.

ಮುಟ್ಟುದೋಷದ ಬಗ್ಗೆ ಎಷ್ಟು ಬೇಗ ನಾವು ಉಪಚಾರ ಕೈಕೊಳ್ಳಬಹುದೊ ಅಷ್ಟು ಒಳಿತು. ಯಾಕಂದರೆ ರೋಗ ಬಲಿತ ಮೇಲೆ ಉಪಚಾರಗಳು ವ್ಯರ್ಥವಾಗುವ ಸಂಭವವಿರುತ್ತದೆ.

' ವಿಟಾಮಿನ್ ಡಿ— ೨ ಮ್ಯಾಸಿವ್ಹಥೆರಪಿ ' ಎಂಬುದು ಮುಟ್ಟುದೋಷದ ಮೇಲಿನ ಉಪಚಾರ ಪದ್ಧತಿಯ ಮರ್ಮವಾಗಿದೆ. ಇದನ್ನು ಶಬ್ದಶಃ ವಿವರಿಸುವುದಾದರೆ ' ಮುಟ್ಟುದೋಷವಾದ ಹುಡುಗರಿಗೆ ವಿಟಾಮಿನ್ ಡಿ— ೨ ನ್ನು ವಿಪುಲ ಪ್ರಮಾಣದಲ್ಲಿ ಕೊಡುವುದು ' ಎಂದು ಹೇಳಬಹುದು. ವಿಟಾಮಿನ್ ' ಡಿ ' ಯಲ್ಲಿ ಡಿ-೧ ಮತ್ತು ಡಿ-೨. ಎಂದು ಎರಡು ಬಗೆಗಳಿವೆ. ಈ ಬಗೆಯ ರೋಗಿಯಲ್ಲಿ ವಿಟಾಮಿನ್ ಡಿ. ೨ ರ ಕೊರತೆಯೇ ಇರುವುದರಿಂದ ಅದನ್ನೇ ಪೂರೈಸಬೇಕಾಗುತ್ತದೆ. ಚಿಕ್ಕಮಕ್ಕಳಿಗೆ ೭೦೦ ರಿಂದ ೧೦೦೦ ಯುನಿಟು ವಿಟಾಮಿನ್ ಡಿ. ಬೇಕಾಗುವುದು. ಮತ್ತು ಮುಟ್ಟುದೋಷವಾದಾಗ ಮಗುವಿಗೆ ವಾರಕ್ಕೆ ಕನಿಷ್ಠ ಆರು ಲಕ್ಷ ಯುನಿಟ್ ವಿಟಾಮಿನ್ ಡಿ. ೨ ಕೊಡಬೇಕಾಗುತ್ತದೆ. ಈ ಕ್ರಮವನ್ನು ಎಳೆಂಟು ತಿಂಗಳವರೆಗೆ ಇಡಬೇಕಾತ್ತದೆ.

'ಇರೇಡಿಯೇಟೆಡ್ ಮಿಲ್ಕ್' (Irradiated milk) ಕೊಟ್ಟು ಮುಟ್ಟು ದೋಷವನ್ನು ಕಡಿಮೆ ಮಾಡಬಹುದು. ಹಾಲಿನ ಮೇಲೆ ಕೃತ್ರಿಮ ಕಿರಣಗಳನ್ನು ಕೆಲಕಾಲದವರೆಗೆ ನಿರಂತರವಾಗಿ ಬಿಟ್ಟು (Irradiation) ಅದರೊಳಗಿನ ವಿಟಾಮಿನ್ ಡಿ. ೨ ನ್ನು ಹೆಚ್ಚು ಮಾಡಬಹುದು. ಈ ರೀತಿ ತುಂಬಿಸಿದ ಹಾಲಿನಿಂದಲೂ ಮಕ್ಕಳಿಗೆ ಸಾಕಷ್ಟು ಕ್ಯಾಲ್ಸಿಯಂ ಮತ್ತು ವಿಟಾಮಿನ್ ಡಿ.೨ ನಿತ್ಯದ ಆಹಾರದಿಂದಲೇ ದೊರೆತಂತಾಗುವುದು.

ಎಣ್ಣೆಯಿಂದ ತಿಕ್ಕಿಯೂ ಬಾಗಿದ ಎಲವುಗಳನ್ನು ಸರಿಯಾಗುವಂತೆ ಮಾಡುತ್ತಾರೆ. ಕಾಡ್ ಲಿವ್ಹರ್ ಆಯಿಲ್‌ದಿಂದ ತಿಕ್ಕುವ ರೂಢಿ ಇತ್ತು. ಆದರೆ ಅದು ಚರ್ಮದೊಳಗಿಂದ ಒಳಗೆ ಹೋಗಲಾರದು. ಅದಕ್ಕಿಂತ ' ಲಿನ್ಯಾಮೆಂಟ್ ಕ್ಯಾಂಫರಃ' ಎಂಬ ಎಣ್ಣೆಯನ್ನು ಉಪಯೋಗಿಸುವುದು ಒಳಿತು. ಕಾಲು ಬಹಳ ವಕ್ರವಾಗಿದ್ದರೆ ಬಂಧಫಲಕ (Splints) ಕಟ್ಟಿ ಇಡಬೇಕು. ಈ ವಕ್ರತೆ ಬೆಳೆಯಬಾರದೆಂದು ಮಕ್ಕಳು ಹೆಚ್ಚು ನಡೆದಾಡದಂತೆ ನೋಡಿಕೊಳ್ಳಬೇಕು.





ಮೊಡೆಲ ೦೩೬೪: ೬ವಾಲ್ವ, ಅಲ್ ವೇವ್ವ ೪ ಬ್ಯಾಂಡ ಪಿಯಾನೋ ಕೀ ಸ್ವಿಚ್ ಏಸಿ ಅಥವಾ ಎಸಿ/ಡಿಸಿ (ಎರಡು ಮಾಡಲ್)

# ನೀವು ಯಾರೇ ಇದ್ದರೂ.....










# ನೀವು ಮರ್ಫಿ ರೇಡಿಯೋದಿಂದ

## ಉಲ್ಲಸಿತರಾಗುವಿರಿ



ಮಾಡೆಲ್ ೦೩೨೨: ೬ ವಾಲ್ವ ಆಲ್ ವೇವ್ವ ೩ ಬ್ಯಾಂಡ ಏಸಿ ಇಲ್ಲವೆ ಏಸಿ/ಡಿಸಿ (೨ ಮಾಡಲ್)

MR.8-130.



ಮೊಡೆಲ್ ೨೬೬
೭ವಾಲ್ವ, ಆಲ್ ವೇವ್ಸ ೫ ಬ್ಯಾಂಡ,
ಪಿಯಾನೋ ಕೀ ಸ್ವಿಚ್ ಏಸಿ.



ಮೊಡೆಲ್ ೦೭೨೪
೬ ವಾಲ್ವ
ಆಲ್ ವೇವ್ಸ
೮ ಬ್ಯಾಂಡ, ಪೂರ
ಬ್ಯಾಂಡ ಸ್ಪ್ರೆಡ್
ಏಸಿ ಇಲ್ಲವೆ ಎಸಿ
ಡಿಸಿ (೨ಮಾಡಲ್)
ಮೊಡೆಲ್ ೦೭೩೭ :
(ಡ್ರಾಯ ಬ್ಯಾಟರಿ)
೭ ವಾಲ್ವ್



ಮೊಡೆಲ್ ೦೩೫೨ :
■ ವಾಲ್ವ ಆಲ್ ವೇವ್ಸ ೩ ಬ್ಯಾಂಡ ಏಸಿ
ಇಲ್ಲವೆ ಏಸಿ/ಡಿಸಿ (ಎರಡು ಮಾಡಲ್)



ಮೊಡೆಲ್ ೦೭೨೬ :
೭ ವಾಲ್ವ, ಆಲ್
ವೇವ್ಸ ೮ ಬ್ಯಾಂಡ,
ಪೂರ್ಣ ಬ್ಯಾಂಡ
ಸ್ಪ್ರೆಡ್ ಎಸಿ ಇಲ್ಲವೆ
ಏಸಿ ಡಿಸಿ (ಎರಡು
ಮೊಡೆಲ್ಲು)



ಮೊಡೆಲ್ ೦೨೯೮
೫ ವಾಲ್ವ, ಆಲ್ ವೇವ್ಸ ೩ ಬ್ಯಾಂಡ
ಏಸಿ/ಡಿಸಿ ಹಾಗೂ ಮೊಡೆಲ್ ೦೨೯೯ :
(ಡ್ರಾಯ ಬ್ಯಾಟರಿ) ೪ ವಾಲ್ವ



ಮೊಡೆಲ್ ೦೭೫೨
■ ವಾಲ್ವ, ಆಲ್
ವೇವ್ಸ ೩ ಬ್ಯಾಂಡ
ಏಸಿ ಇಲ್ಲವೆ
ಏಸಿ/ಡಿಸಿ
(ಎರಡು ಮಾಡಲ್)
ಹಾಗೂ
ಮೊಡೆಲ್ ೦೭೫೧
(ಡ್ರಾಯ ಬ್ಯಾಟರಿ)
೫ ವಾಲ್ವ್

**murphy radio**
delights
the home!

ಉಪಚಾರ ಆಹಾರಗಳನ್ನು ಯಥಾಯೋಗ್ಯವಾಗಿ ಒಂದು ವರ್ಷದ ವರೆಗೆ ನೋಡಿಕೊಂಡರೆ ಈ ರೋಗವನ್ನು ಹೋಗಲಾಡಿಸಬಹುದು. ಈ ರೀತಿ ಜಾಗ್ರತೆಯಿಂದ ಯತ್ನಿಸಿದರೆ ಮುಂದೆ ಉಂಟಾಗಬಹುದಾದ ವಿಕೃತಿಗಳನ್ನು ತಡೆಯುವುದು ಸಾಧ್ಯವಾಗಿರುವುದಾದರೂ ಪಾಲಕರಿಗೆ ಒಂದು ಮಹತ್ವದ ಸೂಚನೆ ಕೊಡುವುದು ಅಗತ್ಯದ್ದಿದೆ. ಅದೆಂದರೆ, ವಿಟಾಮಿನ್ 'ಡಿ' ಕೊಡಬೇಕಾಗುತ್ತದೆ ಎಂದು ಗೊತ್ತಾದ ಮಾತ್ರಕ್ಕೆ ಯಾರಾದರೂ ಡಾಕ್ಟರರ ಸಲಹೆ ಇಲ್ಲದೆ ವಿಟಾಮಿನ್ 'ಡಿ' ಕೊಡುತ್ತಾಹೋದರೆ ಪ್ರಮಾಣಕ್ಕಿಂತ ಹೆಚ್ಚು ವಿಟಾಮಿನ್ ವಿನಿಯೋಗವಾಗಿ ಎಲುವು ಬಾಲ್ಯದಲ್ಲೇ ಬಿರುಸಾಗಿ ಮೂತ್ರಾಶಯದಲ್ಲಿ ಕ್ಯಾಲ್ಸಿಯಂನ ಹರಳುಗಳು ಹುಟ್ಟಿಕೊಳ್ಳಬಹುದು. ಈ ಬಗೆಯ ಹೊಸ ವಿಕೃತಿಗೆ 'ಹೈಪರವ್ಹಿಟಾಮಿನೋಸಿಸ್' ಎನ್ನುತ್ತಾರೆ. ಇದಾದರೂ ಮುಟ್ಟುದೋಷದಷ್ಟೇ ಅಪಾಯಕರವಾದ ಇನ್ನೊಂದು ಬಗೆಯಾಗಿದೆ. ಆದ್ದರಿಂದ ವೈದ್ಯಕೀಯ ಸಲಹೆ ಪಡೆದೇ ಈ ಉಪಚಾರವನ್ನು ಮುಂದುವರೆಸಬೇಕು. ★



"ಎಷ್ಟು ನೋಡಿದರೂ ಕಣ್ಣನ್ನು ನಂಬಲಾಗುವುದಿಲ್ಲ. ಗುರುತ್ವಾಕರ್ಷಣ ತತ್ತ್ವವೇ ಇಲ್ಲಿ ತಲೆ ಕೆಳಗಾದಂತಿದೆ" ಎಂದು ಕಾನಡಾದಲ್ಲಿಯ ನ್ಯೂಬ್ರನ್ಸ್‌ವಿಕ್‌ನ "ಮ್ಯಾಗ್ನೆಟಿಕ್ ಹಿಲ್" ನ್ನೇರಿದಾಗ ಹೇಳಬೇಕಾಗುತ್ತದೆ.

ಈ ಗುಡ್ಡದ ತಲೆಯ ಮೇಲೆ "ಮೋಟರನ್ನು ಆ ಬಿಳಿಯ ಗುರುತಿನ ಬಳಿ ಒಯ್ಯಿರಿ. ಎಂಜಿನ್ ಬಂದುಮಾಡಿ ಬ್ರೇಕನ್ನು ತೆಗೆಯಿರಿ." ಎಂದು ಬರೆದ ಹಲಗೆಯೊಂದಿದೆ.

ಹಾಗೆ ಮಾಡಿದೊಡನೆ ಅದ್ಭುತ ಸಂಗತಿ ನಡೆಯುತ್ತದೆ. ಕಾರು ಹಿಮ್ಮುಖವಾಗಿ ಓಡತೊಡಗಿ ಗುಡ್ಡವನ್ನೇರುತ್ತ ಹೋದಂತೆ ಹೆಚ್ಚೆಚ್ಚು ವೇಗ ಪಡೆಯುತ್ತದೆ. ಈ ಆಶ್ಚರ್ಯಾಘಾತ ಸಾಲದೆಂಬಂತೆ ರಸ್ತೆಯ ಮಗ್ಗಲಲ್ಲಿರುವ ಹೊಂಡದ ನೀರು ಕೂಡ ಗುಡ್ಡದ ಮೇಲ್ಗಡೆಯ ದಿಕ್ಕಿನಲ್ಲೆ ಹರಿಯುತ್ತದೆ.

ಇದೇನೊ ಮೃಗಜಲದಂತಿದೆ ಎಂದುಕೊಂಡು ಕೆಲವರು ಕಾರಿನಿಂದಿಳಿದು ನೆಲದ ಮೇಲೆ ಅಂಗಾತಾಗಿ ಮಲಗಿ ನೋಡುತ್ತಾರೆ. ಆದರೆ ಆಗ ಕೂಡ ನೀರು ಮೇಲಕ್ಕೆ ಹರಿಯುವುದು ಕಾಣಿಸುತ್ತದೆ.

ಕೆಲವರು ಗುಡ್ಡದ ಅಡಿಯತ್ತ ನಡೆದು ನೋಡಿದ್ದಾರೆ. ಕೆಳಕೆಳಗೆ ಹೋದಂತೆಲ್ಲ ಕಾಲು ಒಜ್ಜೆಯಾಗುತ್ತದೆ. ತೇಕು ಹತ್ತುತ್ತದೆ. ಆದೇ ಮೇಲಕ್ಕೇರಿದಂತೆ ಕಾಲು ಹಗುರಾಗಿ ಶ್ವಾಸೋಚ್ಛ್ವಾಸ ಸುಲಭವಾಗುತ್ತದೆ.

ಅವರ ಕಾಲುಗಳಿಗೆ, ಕಾರುಗಳಿಗೆ ಅನುಭವಕ್ಕೆ ಬಂದರೂ ಅವರ ಕಣ್ಣುಗಳಿಗೆ ಮಾತ್ರ ಏರು ಇಳಿಜಾರೆಂದೂ ಇಳಿಜಾರು ಏರು ಎಂಬುದೂ ಕಾಣಿಸುವುದಿಲ್ಲ. ಜಗತ್ತಿನಲ್ಲಿಯೆ ಅತ್ಯಾಶ್ಚರ್ಯಕರವಾದ ಮೃಗಜಲನೋಟವನ್ನು ಒದಗಿಸುವ "ಮ್ಯಾಗ್ನೆಟಿಕ್ ಹಿಲ್" ಎಲ್ಲ ತರ್ಕವನ್ನೂ ಮೀರಿನಿಂತಿದೆ.



ಪುಸ್ತಕ ವಿಭಾಗ

# ರೋಸೆನ್‌ಬರ್ಗರ ವಿಚಾರಣೆ





ವಿವಿಧ ಮೂಲಗಳಿಂದ

ಸಂಗ್ರಾಹಕ:

'ದುಷ್ಯಂತ'

# ರೋಸೆನ್‌ಬರ್ಗರ ವಿಚಾರಣೆ

ಅಮೇರಿಕದ ರೋಸೆನ್‌ಬರ್ಗ್ ದಂಪತಿಗಳನ್ನು ಬೇಹುಗಾರಿಕೆಗಾಗಿ ವಿಚಾರಣೆ ನಡೆಸಿದ್ದು ಈ ಶತಮಾನದ ಅತಿ ಉದ್ವೇಗಜನಕ ಘಟನೆಗಳಲ್ಲೊಂದಾಗಿದೆ. ಅದರಲ್ಲಿ ಪಣವಾಗಿದ್ದದ್ದು ಅಸ್ತ್ರಗಳಲ್ಲಿ ಬ್ರಹ್ಮಾಸ್ತ್ರವೆನಿಸಿದ ಪರಮಾಣು ಬಾಂಬಿನ ರಹಸ್ಯ. ಅಮೇರಿಕ ಬ್ರಿಟನ್‌ಗಳಿಗೆ ರಶಿಯವು ಆ ಕಾಲದಲ್ಲಿ ಮಿತ್ರರಾಷ್ಟ್ರವಾಗಿದ್ದರೂ ಅದಕ್ಕೆ ಈ ಅಸ್ತ್ರದ ರಹಸ್ಯವನ್ನು ಆಂಗ್ಲ-ಅಮೇರಿಕನ್ನರು ತಿಳಿಸಿರಲಿಲ್ಲ. ರಶಿಯನ್ನರು ಈ ರಹಸ್ಯ ಭೇದಿಸುವುದರಲ್ಲಿ ಹೇಗೆ ಯಶಸ್ವಿಯಾದರು? ಅವರು ಅಮೇರಿಕದಲ್ಲಿದ್ದ ಕಮ್ಯುನಿಸ್ಟರನ್ನು ಈ ಬೇಹುಗಾರಿಕೆಯಲ್ಲಿ ಹೇಗೆ ಉಪಯೋಗಿಸಿಕೊಂಡರು? ಎಂಬುದು ಈ ರೋಮಾಂಚಕ ಪುಸ್ತಕ ಸಂಗ್ರಹದ ವಿಷಯ.

ರೋಸೆನ್‌ಬರ್ಗ್ ದಂಪತಿಗಳು ನಡೆಸಿದ ಬೇಹುಗಾರಿಕೆಯಿಂದ ಎಷ್ಟು ಮಟ್ಟಿಗೆ ರಶಿಯನ್ನರಿಗೆ ಪ್ರಯೋಜನವಾಯಿತು? ಆದರಿಂದ ತಿಳಿದ ಸಂಗತಿಗಳಿಂದಲೇ ಅವರು ಪರಮಾಣು ಬಾಂಬುಗಳನ್ನು ತಯಾರಿಸಲು ಕಲಿತರೆ? ಈ ಪ್ರಶ್ನೆಗೆ ಯಾರೂ ಸರಿಯಾಗಿ ಉತ್ತರ ಕೊಟ್ಟಿಲ್ಲ. ಇದರಿಂದ ರಶಿಯನ್ನರಿಗೆ ನಿಜವಾಗಿ ಹೆಚ್ಚು ಲಾಭವಾಗಲಿಲ್ಲ; ಅವರು ತಮ್ಮ ಯತ್ನದಿಂದಲೇ ಪರಮಾಣು ಬಾಂಬುಗಳನ್ನು ನಿರ್ಮಿಸಿಕೊಂಡರು ಎನ್ನುವವರೂ ಇದ್ದಾರೆ. ಅನಂತರ ಹೈಡ್ರೋಜನ್ ಬಾಂಬನ್ನು ರಶಿಯನ್ನರು ಸ್ವತಂತ್ರವಾಗಿ ಅಮೇರಿಕನ್ನರಿಗಿಂತ ಮೊದಲೇ ಸಿದ್ಧಪಡಿಸಿದರಲ್ಲವೆ?

ವಸ್ತುಸ್ಥಿತಿ ಹೇಗಿದ್ದರೂ ಪರಮಾಣು ರಹಸ್ಯ ಸ್ಫೋಟದ ಈ ಪ್ರಕರಣವು ಬ್ರಿಟನ್ ಅಮೇರಿಕಗಳಲ್ಲಿ ಎಂದಿಲ್ಲದ ಕೋಲಾಹಲ ಎಬ್ಬಿಸಿತು. ಬೇಹುಗಾರರನ್ನು ಸದ್ದಿಲ್ಲದೆ ಸೈನಿಕ ನ್ಯಾಯಾಲಯದಲ್ಲಿ ವಿಚಾರಿಸಿ ಸದ್ದಿಲ್ಲದೆ ಗಲ್ಲಿಗೇರಿಸುವುದು ಸಂಪ್ರದಾಯವಾದರೆ ಈ ವಿಚಾರಣೆಗಳಿಗೆ ಮಾತ್ರ ಅದ್ಭುತ ಪ್ರಚಾರ ಸಿಕ್ಕಿತು. ಕಮ್ಯುನಿಸ್ಟ್ ಪಕ್ಷದ ಜನ ತಮ್ಮ ದೇಶಕ್ಕೆ ದ್ರೋಹ ಬಗೆದು ರಶಿಯಕ್ಕೆ ನೆರವಾದುದು ಇದಕ್ಕೆ ಕಾರಣವಾಗಿರಬೇಕು. ರೋಸೆನ್‌ಬರ್ಗ್ ದಂಪತಿಗಳ ಕೆಲಸದಿಂದ ರಶಿಯಕ್ಕೆ ಪ್ರಯೋಜನವಾಯಿತೋ ಇಲ್ಲವೊ, ಒಬ್ಬ ಪ್ರಮುಖ ವಿಜ್ಞಾನಿಗೆ ೧೪ ವರ್ಷ, ಅನೇಕರಿಗೆ ೩೦ ವರ್ಷಗಳ ವರೆಗೆ ಶಿಕ್ಷೆ ಮತ್ತು ರೋಸೆನ್‌ಬರ್ಗ್ ದಂಪತಿಗಳಿಗೆ ಮರಣವನ್ನು ಅದು ತಂದಿತು.

ಇಂದು ಭಾರತದಲ್ಲಿಯೂ ರಶಿಯನ್ ಮತ್ತು ಚೀನಿಯರ ಪರವಾಗಿ ಬೇಹುಗಾರಿಕೆ ನಡೆಸಿದ್ದಕ್ಕೆ ಅನೇಕ ಅಧಿಕಾರಿಗಳ ಬಂಧನವಾಗಿರುವ ಮತ್ತು ನಮ್ಮ ಕಮ್ಯುನಿಸ್ಟರು ಚೀನದ ಪಕ್ಷ ವಹಿಸಿರುವ ಕಾಲದಲ್ಲಿ ಈ ಆಖ್ಯಾಯಿಕೆ ವಿಶೇಷ ವಾಚನೀಯವಾಗಿದೆ.

ಸಂಗ್ರಹ: ದುಷ್ಯಂತ

೧೯೪೫ರ ಅಗಸ್ಟ್ ತಿಂಗಳ ೬ನೆಯ ತಾರೀಖು. ಜಪಾನದಲ್ಲಿ ಹಿರೋಶಿಮಾ ನಗರದ ಜನರು ಎದ್ದು ನಿಶ್ಚಿಂತೆಯಿಂದ ತಮ್ಮ ಪ್ರಾತಃಕಾಲದ ಕಾರ್ಯಗಳಲ್ಲಿ ನಿರತರಾಗಿದ್ದಾಗ ಪ್ರಚಂಡ ಸಪ್ಪಳವೊಂದು ಕೇಳಬಂತು; ಮಹಾ ಬೆಳಕೊಂದು ಸುತ್ತೆಲ್ಲ ಮಿಂಚಿ ಅವರ ಕಣ್ಣನ್ನು ಕತ್ತಲೆಗೂಡಿಸಿತು. ಹವೆಯಲ್ಲಿ ಒತ್ತಡ ಹೆಚ್ಚಾಗಿ ಅವರಿಗೆ ಉಸಿರಾಡಿಸುವುದೇ ಕಷ್ಟವಾಯಿತು. ದಟ್ಟವಾದ ಹೊಗೆ ಎಲ್ಲೆಡೆ ಹರಡಿತು. ಮನೆಗಳು ಉರುಳಿದುವು. ಎಲ್ಲೆಡೆಗೂ ಬೆಂಕಿ, ಧಗಧಗಿಸುವ ಉರಿ! ಸತ್ತವರ ಹೆಣಗಳು ಗಟಾರಗಳಲ್ಲಿ ಉರುಳಿ ಹರಿದಾಡಿದುವು. ನಗರದ ೩॥ ಲಕ್ಷ ಜನವಸತಿಯಲ್ಲಿ ೧॥ ಲಕ್ಷಕ್ಕೆ ಮೇಲ್ಪಟ್ಟು ಜನ ಸಾವು ನೋವಿಗೆ ತುತ್ತಾದರು. ೧೫ ಸಾವಿರ ಜನ ಎಲ್ಲಿ ಸಿಡಿದು ಹೋದರೆಂಬುದೇ ಪತ್ತೆಯಾಗಲಿಲ್ಲ. ಹಿರೋಶಿಮಾದಲ್ಲಿದ್ದ ೯೦ ಸಾವಿರ ಮನೆಗಳಲ್ಲಿ ೬೨ ಸಾವಿರ ನೆಲಸಮವಾಗಿದ್ದುವು.

ಸತ್ತವರ ಬದುಕೇ ಮೇಲೆನ್ನುವಂತೆ ಬದುಕಿದ್ದವರ ಗೋಳು ಹೇಳತೀರದಂತಾಗಿತ್ತು. ಪರಮಾಣು ವಿಕಿರಣದಿಂದಾಗಿ ಅವರು ನಾನಾ ತರಹದ ರೋಗಗಳಿಗೆ ತುತ್ತಾದರು. ಜಪಾನದ ಜನತೆಗೆ ಇದೇಕೆ, ಯಾತರಿಂದ ಹೀಗಾಯಿತೆಂಬುದೇ ತಿಳಿಯಲಿಲ್ಲ. ಮರುದಿನ ಅಮೇರಿಕದ ಶ್ವೇತ ಭವನವು ಪ್ರಕಟನೆಯೊಂದನ್ನು ಹೊರಡಿಸಿ, ಇತಿಹಾಸದಲ್ಲಿ ಇದುವರೆಗೆ ಬಳಸದೇ ಇದ್ದ ಮಹಾಸ್ತ್ರವೊಂದನ್ನು ತಾವು ಹಿರೋಶಿಮಾದ ಮೇಲೆ ಪ್ರಯೋಗಿಸಿದುದಾಗಿಯೂ ಈ ಅಸ್ತ್ರವು ಇದುವರೆಗೆ ಉಪಯೋಗಿಸಲಾದ ಬಾಂಬುಗಳಿಗಿಂತ ಎರಡು ಸಾವಿರ ಪಟ್ಟು ಭೀಕರವಾದುದೆಂದೂ ಸಾರಿತು. ಬಾಂಬು ಬಿದ್ದ ೩೦ ದಿನಗಳಲ್ಲಿ ಜಪಾನ್ ಶರಣು ಬಂದಿತು. ಜಗತ್ತಿಗೆ ಪರಮಾಣು ಬಾಂಬಿನ ಪರಿಚಯವಾದದ್ದು ಹೀಗೆ!

ಪರಮಾಣು ಬಾಂಬನ್ನು ತಯಾರಿಸಿ ಪ್ರಯೋಗದಲ್ಲಿ ಅದು ಯಶಸ್ವಿಯಾಗಿದೆಯೆಂದು ಖಂಡಿತ ಮಾಡಿಕೊಂಡ ನಂತರ, ಅದನ್ನು ಜಪಾನದ ಮೇಲೆ ಪ್ರಯೋಗಿಸುವ ಮುಂಚೆ ಸೇರಿದ ವರಿಷ್ಠ ಸಮ್ಮೇಳನದಲ್ಲಿ ಅಮೇರಿಕದ ಪ್ರತಿನಿಧಿ ಸ್ಟಾಲಿನ್ನರಿಗೆ ಸೂಚ್ಯವಾಗಿ "ಹಿಂದೆಂದೂ ಕಂಡು ಕೇಳಿರದಷ್ಟು ಭಯಂಕರವಾದ ಅಸ್ತ್ರವೊಂದನ್ನು ಅಮೇರಿಕವು ಸಿದ್ಧಪಡಿಸಿದೆ" ಎಂದು ಹೇಳಿದರಂತೆ.

ರಶಿಯವು ಮಿತ್ರರಾಷ್ಟ್ರವಾಗಿದ್ದರೂ ಅಮೇರಿಕ ಈ ನವೀನ ಅಸ್ತ್ರದ ವಿವರಗಳನ್ನೇಕೆ, ಸೂಚನೆಯನ್ನು ಕೂಡ ರಶಿಯಕ್ಕೆ ಕೊಟ್ಟಿರಲಿಲ್ಲ. ಆದರೂ "ಹೊಸ ಅಸ್ತ್ರ" ಎಂಬ ನಿಗೂಢ ಶಬ್ದವನ್ನು ಪಯೋಗಿಸಿ ಅಮೇರಿಕನ್ನರು ಮಾತಾಡಿದಾಗ ಸ್ಟಾಲಿನ್ನನು ಅದರ ಬಗ್ಗೆ ಹೆಚ್ಚೇನನ್ನೂ ತಿಳಿದುಕೊಳ್ಳುವ ಆಸ್ಥೆ ತೋರಿಸಲೇ ಇಲ್ಲ. "ತುಂಬ ಸಂತೋಷ. ಜಪಾನೀಯರ ಮೇಲೆ ಅದನ್ನು ಪ್ರಯೋಗಿಸಿ ವಿಜಯಿಗಳಾಗುವಿರೆಂದು ಹಾರ್ದಿಕವಾಗಿ ಹಾರೈಸುತ್ತೇನೆ" ಎಂದಷ್ಟೇ ಸ್ಟಾಲಿನ್ ಹೇಳಿದನಂತೆ.

ಅಮೇರಿಕನ್ನರಿಗೆ ಸ್ಟಾಲಿನ್ನರ ಈ ಅನಾಸಕ್ತಿ ಸ್ವಲ್ಪ ಸೋಜಿಗವನ್ನುಂಟುಮಾಡಿತಂತೆ. ಸೋಜಿಗಪಡಬೇಕಾದ್ದಿರಲಿಲ್ಲ, ಸ್ಟಾಲಿನ್ನನಿಗೆ ಇದರ ವಿವರಗಳೆಲ್ಲ ಮೊದಲೆ ಗೊತ್ತಿದ್ದವು ಎಂಬ ಅಂಶ ಅಮೇರಿಕನ್ನರಿಗೆ ಎಷ್ಟೋ ಕಾಲದ ನಂತರವೇ ಗೊತ್ತಾದದ್ದು; ಗೊತ್ತಾದಾಗ ಇಡಿ ಅಮೇರಿಕವೇ ಎದ್ದು ಕುಳಿತಿತು.

ಪರಮಾಣು ಬಾಂಬು ನಿರ್ಮಾಣವಾಗಿ ಐದು ವರ್ಷದ ನಂತರ—

ಈ ಪರಮಾಣು ಬಾಂಬಿನ ತಯಾರಿಕೆಯ ವಿಷಯ ಅತ್ಯಂತ ಗುಟ್ಟಿನದಿರುವಾಗ, ರೋಸೆನ್‌ಬರ್ಗ ದಂಪತಿಗಳು ಅದರ ವಿವರಗಳನ್ನೆಲ್ಲ ರಶಿಯಕ್ಕೆ ತಿಳಿಯ ಪಡಿಸಿದರೆಂದು ಅವರನ್ನು ವಿಚಾರಣೆಗೆ ಗುರಿಪಡಿಸಲಾಯಿತು. ಆ ವಿಚಾರಣೆಯ ಕ್ರಿಯೆ ಪ್ರತಿಕ್ರಿಯೆಗಳು ಜಗತ್ತಿನ ತುಂಬೆಲ್ಲ ಕೇಳಬಂದುವು. ೨೦ ನೆಯ ಶತಮಾನದ

ಯಾವ ವೈಯಕ್ತಿಕ ವಿಚಾರಣೆಯೂ ಇದರಷ್ಟು ಸಾರ್ವತ್ರಿಕ ಸ್ವರೂಪವನ್ನು ತಳೆದಿರಲಿಲ್ಲ ವೆನ್ನಬಹುದು.

ಅದರ ಸಂಕ್ಷೇಪ ಕಥನವು ಮುಂದಿನ ಪುಟ ಗಳಲ್ಲಿ ಮೂಡಿ ಬಂದಿದೆ.

*

ಜಾಗತಿಕ ಮಹಾಯುದ್ಧವು ಸುರುವಾಗಿ ಒಂದೆರಡು ವರ್ಷಗಳು ಸಂದಿದ್ದುವು. ಜರ್ಮನಿಯು ಪರಮಾಣುವನ್ನು ಭೇದಿಸಿದೆಯೆಂದೂ ಈ ಶೋಧದ ಉಪಯೋಗವನ್ನು ಒಂದು ಮಹಾನ್ ಅಸ್ತ್ರವನ್ನು ತಯಾರಿಸುವುದರಲ್ಲಿ ಮಾಡಿಕೊಳ್ಳಲಿದೆಯೆಂದೂ ಆ ಅಸ್ತ್ರವನ್ನು ಬಳಸಿದುವಾದರೆ, ಇಡೀ ಇಂಗ್ಲಂಡ್ ದೇಶವು ಒಂದು ವಾರದಲ್ಲಿ ನಿರ್ನಾಮವಾಗುವುದೆಂದೂ ಮಿತ್ರ ರಾಷ್ಟ್ರಗಳ ಖಚಿತ ನಂಬುಗೆಯಾಗಿತ್ತು. ವಿಜ್ಞಾನಿ ಶ್ರೇಷ್ಠರಾದ ಪ್ರೊ. ಐನ್‌ಸ್ಟೈನರೇ ಈ ವಿಚಾರದಲ್ಲಿ ಅಮೇರಿಕೆಯ ಅಧ್ಯಕ್ಷರಿಗೆ ಎಚ್ಚರಿಕೆ ಕೊಟ್ಟಿದ್ದರು. ಆಗ ಅಮೇರಿಕೆಯ ಅಧ್ಯಕ್ಷರಾಗಿದ್ದ ರೂಸ್‌ವೆಲ್ಟರು ಪರಮಾಣು ವಿಜ್ಞಾನಿಗಳ ಒಂದು ಸಮಿತಿಯನ್ನು ಗೌಪ್ಯವಾಗಿ ಸ್ಥಾಪಿಸಿ ಯುದ್ಧ ಕಾರ್ಯದಲ್ಲಿ ಪರಮಾಣು ಶಕ್ತಿಯ ಉಪಯೋಗವನ್ನು ಮಾಡಿಕೊಳ್ಳುವ ಬಗೆಯನ್ನು ಅವರಿಗೆ ಒಪ್ಪಿಸಿದರು. ೧೯೪೧ ರಲ್ಲಿ ಜಪಾನೀಯರು ಮಿಂಚಿನ ವೇಗದಿಂದ ಬಂದು ಪರ್ಲ್ ಹಾರ್ಬರನ್ನು ವಶಪಡಿಸಿಕೊಂಡ ಮೇಲಂತೂ ಈ ಕಾರ್ಯಕ್ಕೆ ತುಂಬ ಚಾಲನೆ ದೊರೆಯಿತು. ಇಂಗ್ಲಂಡಿನ ಕೆಲವು ವಿಜ್ಞಾನಿಗಳು ಅಮೇರಿಕಕ್ಕೆ ಬಂದರು. ಗೌಪ್ಯದ ಪರಮಾವಧಿಯಲ್ಲಿ ಈ ಕೆಲಸವು ಸಾಗಿದ್ದಿತು.

ರಶಿಯವು ಆ ಕಾಲಕ್ಕೆ ಮಿತ್ರ ರಾಷ್ಟ್ರಗಳ ಪರವಾಗಿ ಜರ್ಮನಿಯ ವಿರುದ್ಧ ಹೋರಾಡುತ್ತಲಿತ್ತು. ಸುರುವಿಗೆ ತಟಸ್ಥವಾಗಿದ್ದು, ನಂತರ ಯುದ್ಧದಲ್ಲಿ ಸೇರಿದ್ದ ರಶಿಯದ ಬಗ್ಗೆ ಇಂಗ್ಲಂಡ್ ಅಮೇರಿಕ, ಕಾನಡಾ ಮುಂತಾದ ಮಿತ್ರರಾಷ್ಟ್ರಗಳಲ್ಲಿ ಅಷ್ಟೊಂದು ವಿಶ್ವಾಸ ಮೂಡಿರಲಿಲ್ಲ. ಹೀಗಾಗಿ ಪರಮಾಣು ಬಾಂಬಿನ ತಯಾರಿಕೆಯ ವಿಚಾರದಲ್ಲಿ ರಶಿಯವನ್ನು ಸಂಪೂರ್ಣ ಅವರು ದೂರವಿಟ್ಟಿದ್ದರು.

ಇತ್ತ ರಶಿಯ ಜರ್ಮನಿಯ ಕೆಲ ವಿಜ್ಞಾನಿಗಳನ್ನು ಒಡೆದುಕೊಂಡು, ಪರಮಾಣು ಶಕ್ತಿಯುಳ್ಳ ಅಸ್ತ್ರವನ್ನು ಸಿದ್ಧಪಡಿಸಲು ಪ್ರಯೋಗವನ್ನು ನಡೆಸಿತು. ಆದರೆ ಇಂಗ್ಲಂಡ್-ಅಮೇರಿಕಗಳು ಈ ವಿಷಯದಲ್ಲಿ ಮುಂದೆ ಹೋಗಿವೆಯೆಂದು ಅದಕ್ಕೆ ತಿಳಿದುಬಂದಾಗ ಗೂಢಚಾರರ ಮುಖಾಂತರ ಅದನ್ನು ತಿಳಿಯುವುದಕ್ಕೆ ಸಾಹಸಪಟ್ಟಿತು. ಅಲ್ಪಾವಧಿಯಲ್ಲಿಯೆ ರಶಿಯದ ಗೂಢಚಾರತನದ ಕಾರ್ಯ ಮುಂದುವರಿದ ಪ್ರತಿಯೊಂದು ರಾಷ್ಟ್ರದಲ್ಲಿ ಆಳವಾಗಿ ಬೇರು ಬಿಟ್ಟಿತು. ಮತ್ತು ವ್ಯಾಪಕವಾಗಿ ಹಬ್ಬಿತು. ಅಂಥ ನೂರಾರು ಚಾರರಲ್ಲಿ ರೋಸೆನ್‌ಬರ್ಗ ದಂಪತಿಗಳೂ ಇದ್ದರು.

ರಶಿಯನ್ ಗೂಢಚಾರರ ಮೊದಲ ಸುಳುಹು ೧೯೪೫ ರಲ್ಲಿ ಕಾನಡಾದಲ್ಲಿ ಹತ್ತಿತು. ಡಾ. ಎಲೆನ್ ಮೇ ಎಂಬ ಬ್ರಿಟಿಶ್ ವಿಜ್ಞಾನಿಯನ್ನು ಬಂಧಿಸಿ ಹತ್ತು ವರ್ಷಗಳ ಸೆರೆಮನೆ ವಾಸಕ್ಕೆ ಗುರಿ ಮಾಡಲಾಯಿತು.

ಆದರೆ ಇಷ್ಟರಿಂದ ರಶಿಯನ್ ಬೇಹಿಗರ ಬಲೆಯ ಸೂತ್ರವನ್ನು ಕಂಡುಹಿಡಿಯುವಂತಿರಲಿಲ್ಲ. ಇಂಗ್ಲಂಡ್ ಅಮೇರಿಕೆಗಳ ಸರಕಾರಗಳು ಅವರನ್ನು ಹುಡುಕಿ, ಪುರಾವೆ ಸಹಿತವಾಗಿ ಹಿಡಿಯುವುದಕ್ಕೆ ಒಂದೇ ಸವನೆ ಧಡಪಡಿಸಿದರೂ ಮುಂದಿನ ಐದು ವರ್ಷಗಳ ಅವಧಿಯಲ್ಲಿ ಅವರಿಗೆ ಏನನ್ನೂ ಸಾಧಿಸಲಿಕ್ಕಾಗಲಿಲ್ಲ!

೧೯೫೦ ಫೆಬ್ರುವರಿಯಲ್ಲಿ ಒಮ್ಮೆಲೆ ಚಕ್ರಗಳು ಉರುಳಲಾರಂಭಿಸಿದವು. ಅಮೇರಿಕದ ಗುಪ್ತ ಪೋಲೀಸ್ ದಳವಾದ ಎಫ್. ಬಿ. ಆಯ್.ಗೆ ಕೆಲ ಮಾಹಿತಿಗಳು ದೊರೆತು ಹೊಸ ಜಾಡು ಹತ್ತಿದ್ದಿತು. ಈ ಮಾಹಿತಿಗಳ ಮೇಲಿಂದ ಇಂಗ್ಲಂಡಿನಲ್ಲಿ ಪರಮಾಣು ವಿಜ್ಞಾನಿ ಡಾ.

ಫುಕ್ಸ್‌ನನ್ನು ಬಂಧಿಸಲಾಯಿತು. ಡಾ. ಫುಕ್ಸ್ ಪ್ರಥಮ ಪರಮಾಣು ಬಾಂಬನ್ನು ತಯಾರಿಸುವಲ್ಲಿ, ಇಂಗ್ಲಡಿನ ಪ್ರತಿನಿಧಿ-ವಿಜ್ಞಾನಿಯಾಗಿ ಅಮೇರಿಕಕ್ಕೆ ಹೋಗಿದ್ದವ. ಮುಂದೆ ಹೈಡ್ರೋಜನ್ ಬಾಂಬಿನ ಸಿದ್ಧತೆಯಲ್ಲಿಯೂ ಅವನ ಅಂಗವಿದ್ದಿತು. ಇಂಥ ಉಚ್ಚ ಅಧಿಕಾರವುಳ್ಳ ವಿಜ್ಞಾನಿಯು ರಶಿಯಕ್ಕೆ ಅವುಗಳ ವಿವರಗಳನ್ನೆಲ್ಲ ತಿಳಿಸುತ್ತಿದ್ದಾನೆಂದು ತಿಳಿದುಬಂದಾಗ ಎರಡೂ ರಾಷ್ಟ್ರಗಳಲ್ಲಿ ಹಾಹಾಕಾರವೆದ್ದಿತು. ಯುದ್ಧಾನಂತರದಲ್ಲಿ ರಶಿಯಕ್ಕೂ ಇತರ ಮಿತ್ರ ರಾಷ್ಟ್ರಗಳಿಗೂ ಮನಸ್ತಾಪ ದಿನದಿನಕ್ಕೆ ಬೆಳೆದು ಕೋರಿಯದಲ್ಲಿ ಕಮ್ಯುನಿಸ್ಟ್ ಆಕ್ರಮಣವಾಗುತ್ತಿದ್ದ ಕಾಲದಲ್ಲಿ ಈ ಸುದ್ದಿ ಪ್ರಕಟವಾದುದು ವಾತಾವರಣವನ್ನು ಅಗತ್ಯಕ್ಕಿಂತ ಹೆಚ್ಚು ಕದಡಿಸಿತು. ಇಂಥ ಗುಟ್ಟಿನ ವಿಷಯಗಳಲ್ಲಿ ಇಂಗ್ಲಂಡಿನ ಸಹಕಾರವಿಟ್ಟುಕೊಳ್ಳಕೂಡದೆಂದು ಅಮೇರಿಕದಲ್ಲಿ ಚಳುವಳಿ ಆರಂಭವಾಯಿತು.

ಈ ವಿಷಯದಲ್ಲಿ ಇಂಗ್ಲಂಡಿನ ಗೌಪ್ಯ ರಕ್ಷಣಾ ಯೋಜನೆಗಳು ಬಿಗಿಯಾಗಿರಲಿಲ್ಲ ಎಂದು ಹೇಳುವುದರಲ್ಲಿ ವಿಶೇಷ ಅರ್ಥವಿರಲಿಲ್ಲ. ಏಕೆಂದರೆ ಫುಕ್ಸ್ ಹಿಟ್ಲರನ ರಾಜ್ಯದಲ್ಲಿ ಹೊರದೂಡಲ್ಪಟ್ಟು ೧೯೩೩ ರಲ್ಲಿ ಇಂಗ್ಲಂಡಿಗೆ ಬಂದವನಾಗಿದ್ದನು. ಈ ಹಿನ್ನೆಲೆಯೂ ಅವನ ಬುದ್ಧಿಮತ್ತೆಯೂ ಅವನನ್ನು ಪರಮಾಣು ವಿಜ್ಞಾನ ಕ್ಷೇತ್ರದಲ್ಲಿ ಮೇಲೆತ್ತಿದ್ದವು. ಯುದ್ಧ ಆರಂಭವಾದಾಗ ಎಡಿನ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ ಪರಮಾಣು ಪ್ರೊಫೆಸರನಾಗಿದ್ದ ಅವನನ್ನು ಮೊದಲು ಜರ್ಮನ್ ಮೂಲದವನೆಂದು ಬಂಧಿಸಿದ್ದರೂ ಅನಂತರ ಬಿಡುಗಡೆ ಮಾಡಿ ಬ್ರಿಟಿಶ್ ನಾಗರಿಕತ್ವವನ್ನು ನೀಡಿ ಪರಮಾಣು ಸಂಶೋಧನೆಗೆ ನೇಮಿಸಲಾಗಿತ್ತು.

ಆದರೆ ಮೂಲತಃ ಅವನೊಬ್ಬ ಮಾರ್ಕ್ಸ್‌ವಾದಿ ಎಂಬುದು ಯಾರಿಗೂ ಹೊಳೆದಿರಲಿಲ್ಲ. ೧೯೩೨ ರಲ್ಲಿಯೇ ಅವನು ಜರ್ಮನಿಯ ಕಮ್ಯುನಿಸ್ಟ್ ಪಕ್ಷದ ಸದಸ್ಯನಾಗಿದ್ದ. ಅವನನ್ನು ವಿಚಾರಣೆಗೆ ಗುರಿಪಡಿಸಿದಾಗ, "ಜಗತ್ತಿನ ಸಮಸ್ಯೆಗಳನ್ನು ರಶಿಯವೊಂದೇ ಬಗೆಹರಿಸಬಲ್ಲುದು. ಆ ಕೆಲಸದಲ್ಲಿ ನಾನೂ ಭಾಗಿಯಾಗಬೇಕೆಂಬುದೇ ನನ್ನ ಜೀವನದ ಧ್ಯೇಯವಾಗಿದೆ." ಎಂದು ಹೇಳುವಷ್ಟು ಅವನಲ್ಲಿ ಕಮ್ಯುನಿಸ್ಟ್ ಪ್ರಭಾವ ಬೇರೂರಿತ್ತು.

ವಾಸ್ತವವಾಗಿ ಪರಮಾಣು ಬಾಂಬ್ ಗುಪ್ತಚಾರತನದ ಇಡೀ ಸರಪಳಿಯಲ್ಲಿ ಈ ಒಂದು ಅಂಶ ಹೆಜ್ಜೆ ಹೆಜ್ಜೆಗೆ ಪುನರಾವರ್ತನೆ ಹೊಂದಲಿತ್ತು. ಅದರಲ್ಲಿ ಸೇರಿದ ಪ್ರತಿಯೊಬ್ಬ ವ್ಯಕ್ತಿಯೂ ಕಮ್ಯುನಿಸಂ ಮತ್ತು ರಶಿಯದ ಬಗ್ಗೆ ಸಹಾನುಭೂತಿ ತಾಳಿದವನಾಗಿದ್ದನು.

೧೯೪೨ ರಲ್ಲಿ ಫುಕ್ಸ್‌ನನ್ನು ಹಾರ್ವೆಲ್ ಪರಮಾಣು ಕೇಂದ್ರದ ಅಧಿಕಾರಿಯೆಂದು ನೇಮಿಸಿದಾಗಿನಿಂದಲೂ ಅವನು ರಶಿಯದ ಗೂಢಚಾರನಾಗಿಯೇ ಒಳಗೊಳಗೆ ಕಾರ್ಯಕ್ಕೆ ಉದ್ಯುಕ್ತನಾದನು. ೧೯೪೩ ರಲ್ಲಿ ಅವನನ್ನು ಬ್ರಿಟಿಶ ಪ್ರತಿನಿಧಿಯಾಗಿ, ಅಮೇರಿಕದ ಪರಮಾಣು ಅಸ್ತ್ರ ತಯಾರಿಕೆಯ ಕೇಂದ್ರಕ್ಕೆ ಕಳಿಸಲಾಯಿತು. ಎರಡು ಮೂರು ವರ್ಷಗಳ ಕಾಲ ಅಲ್ಲಿಯೇ ಇದ್ದು ತಿರುಗಿ ಇಂಗ್ಲಂಡಿಗೆ ಬಂದನು. ತಿರುಗಿ ಬಂದಾಗ ಹಾರ್ವೆಲ್ ಪರಮಾಣು ಕೇಂದ್ರದ ಕಾರ್ಯಕ್ಷೇತ್ರವು ಬಹಳಷ್ಟು ಬೆಳೆದಿತ್ತು. ವಿದೇಶದಲ್ಲಿ ಅನುಭವ ಪಡೆದು ಬಂದ ಅವನನ್ನು ಅಲ್ಲಿ ಹಿರಿಯ ವಿಜ್ಞಾನಿಯೆಂದು ಪರಿಗಣಿಸಲಾಯಿತು.

ಸ್ಕಾಟ್‌ಲಂಡ್ ಯಾರ್ಡಿನವರು ೧೯೫೦ ರಲ್ಲಿ ಅವನನ್ನು ಬಂಧಿಸಿ, ಪ್ರಶ್ನಿಸಿದಾಗ ಡಾ. ಫುಕ್ಸ್ ಬಲು ಬೇಗ ಎಲ್ಲವನ್ನು ಒಪ್ಪಿಕೊಂಡನು. ಯುದ್ಧಾನಂತರ ರಶಿಯವು ನಡೆಸುತ್ತಿದ್ದ ಚಟುವಟಿಕೆಗಳು ಆಗಲೆ ಅವನಲ್ಲಿ ರಶಿಯದ ಬಗ್ಗೆ ಸಂದೇಹವನ್ನು ಮೂಡಿಸಿದ್ದವು. ಫುಕ್ಸ್ ತಾನು ಯಾವ ಯಾವ ಮಾಹಿತಿಯನ್ನು ಪೂರೈಸಿದನೆಂಬುದನ್ನೂ ಹೇಳಿದನು. ಆದರೆ ಆ ಸುದ್ದಿ ರಶಿಯಕ್ಕೆ

ಹೋದ ಬಗೆ ಮಾತ್ರ ತನಗೆ ತಿಳಿಯದು ಎಂದನು! ಅಗತ್ಯ ಕಂಡಾಗ ಗುಪ್ತ ಸುದ್ದಿಯನ್ನು ತನ್ನಿಂದ ಪಡೆಯಲು, ಗುರುತು ಕೊಟ್ಟು ಯಾರು ಯಾರೊ ಬರುತ್ತಿದ್ದರೆಂದೂ ಅವರ ಪರಿಚಯ ತನಗೆ ಇದ್ದಿಲ್ಲವೆಂದೂ ಅವನ ಹೇಳಿಕೆಯಾಗಿತ್ತು.

ಅಂತೂ ಅವನ ಅಪರಾಧವು ಸಿದ್ಧವಾಗಿ, ಇಂಗ್ಲಂಡಿನ ಕಾನೂನಿನ ಪ್ರಕಾರ ವಿದೇಶೀ ಗುಪ್ತಚಾರರಿಗೆ ವಿಧಿಸಲಿಕ್ಕಿರುವ ಪರಮಾವಧಿ ಶಿಕ್ಷೆ ಎಂದರೆ ೧೪ ವರ್ಷಗಳ ಶಿಕ್ಷೆಯನ್ನು ಅವನಿಗೆ ವಿಧಿಸಲಾಯಿತು.

ಆದರೆ ಅಮೇರಿಕದಲ್ಲಿ ಅವನು ನಡೆಸಿದ ಗೂಢ ಚಾರತನದಲ್ಲಿ ಭಾಗವಹಿಸಿದವರಾರೆಂದು ತಿಳಿಯಲು ಅಮೇರಿಕ ಆತುರಪಟ್ಟಿತು. ಫುಕ್ಸನಿಂದ ಅಮೇರಿಕೆಗೂ ಸಾಕಷ್ಟು ಅನ್ಯಾಯವಾಗಿತ್ತು. ಫುಕ್ಸನು ಸೆರೆಮನೆಯಲ್ಲಿದ್ದಾಗ ಬ್ರಿಟಿಶ ಸರಕಾರದ ಅನುಮತಿ ಪಡೆದು ಅಮೇರಿಕದ ಎಫ್. ಬಿ. ಐ. ಯವರು ಅವನ ಸಹಾಯಕರಾರೆಂದು ಪ್ರಶ್ನಿಸಿದರು.

"೪೦ ವರ್ಷ ವಯಸ್ಸಿನ ಗಿಡ್ಡನೆಯ ವ್ಯಕ್ತಿ. ವೃತ್ತಿಯಲ್ಲಿ ಕೆಮಿಸ್ಟ್. ಅವನ ತಂದೆ-ತಾಯಿಗಳು ರಶ್ಯನ್ನರಾಗಿದ್ದಾರೆ. ಹೆಸರು ಮಾತ್ರ ಗೊತ್ತಿಲ್ಲ" ಎಂದ ಫುಕ್ಸ್.

ಫುಕ್ಸನಿಗೆ ನಿಜವಾಗಿಯೂ ಸಹಾಯಕನ ಹೆಸರು ಗೊತ್ತಿರಲಿಲ್ಲ. ೧೯೪೩-೪೭ ರ ಅವಧಿಯ ವರೆಗೆ ಇಂಥ ಕಾರ್ಯದಲ್ಲಿ ತೊಡಗಿದವರೆಂಬ ಬಗ್ಗೆ ಸಂಶಯಿತರಾದ ಒಂದು ಸಾವಿರದಷ್ಟಿರುವ ಜನರನ್ನು ಎಫ್. ಬಿ. ಐ. ಯವರು ಪರಿಶೀಲಿಸಿದರು. ಅವರೆಲ್ಲರ ಚಿತ್ರಗಳನ್ನು ಫುಕ್ಸನಿಗೆ ತೋರಿಸಿದರೂ ಅವನಿಗೆ ಥಟ್ಟನೆ ತನ್ನ ಸಹಾಯಕನ ಗುರುತು ಹಿಡಿಯಲಾಗಲಿಲ್ಲ.

ಆ ಚಿತ್ರಗಳಲ್ಲಿ ಹ್ಯಾರಿ ಗೋಲ್ಡ್ ಎಂಬವನದೂ ಇದ್ದಿತು. ಫುಕ್ಸ್ ಕೊಟ್ಟ ವಿವರಗಳೆಲ್ಲ ಅವನಿಗೆ ಹೊಂದಿಕೆಯಾಗುತ್ತಿದ್ದವು. ಅವನು ಸ್ವಿಜರ್ಲಂಡಿನಲ್ಲಿ ರಶಿಯನ್ ತಂದೆತಾಯಿಗಳಿಂದ ೧೯೧೦ ರಲ್ಲಿ ಹುಟ್ಟಿದ. ನಾಲ್ಕು ವರ್ಷಗಳಲ್ಲಿ ಅವನ ತಂದೆ ತಾಯಿಗಳು ಅಮೇರಿಕಕ್ಕೆ ವಲಸೆ ಬಂದಿದ್ದರು. ವೃತ್ತಿಯಿಂದ ಫಿಲಡಲ್ಫಿಯದಲ್ಲಿ ಕೆಮಿಸ್ಟನಾಗಿದ್ದನು. ಅಲ್ಲಿನ ಒಂದು ಆಸ್ಪತ್ರೆಯಲ್ಲಾತ ಹೃದಯ ರೋಗದ ಬಗ್ಗೆ ಸಂಶೋಧನೆ ನಡೆಸುವ ವಿಜ್ಞಾನಿಯಾಗಿದ್ದನು. ಮೂರು ವರ್ಷಗಳ ಹಿಂದೆಯೇ ಗೋಲ್ಡ್‌ನನ್ನು ರಶಿಯನ್ ಚಾರನೆಂಬ ಸಂಶಯದಿಂದ ಹಿಡಿದು ಪುರಾವೆ ಸಿಗದೇ ಬಿಟ್ಟುಕೊಡಲಾಗಿದ್ದಿತು. ಫುಕ್ಸನು ಗೋಲ್ಡನನ್ನು ಸಂದರ್ಶಿಸಿದ ಸ್ಥಳಗಳಲ್ಲಿ, ಗೋಲ್ಡ್‌ನನ್ನು ಓಡಾಡಿಸಿ ಎಫ್. ಬಿ. ಐ. ಯವರು ಅವನ ಫಿಲ್ಮ್ ತೆಗೆದರು! ಅದನ್ನು ಫುಕ್ಸನಿಗೆ ತೋರಿಸಿದಾಗ, ಅವನು ಕೂಡಲೇ ಗೋಲ್ಡನ ಗುರುತು ಹಿಡಿದನು.

ಗೋಲ್ಡನನ್ನು ಬಂಧಿಸಿದ್ದು ಮೇ ೧೯೫೦ ರಲ್ಲಿ. ಅವನು ೧೯೪೩ ರಿಂದ ೧೯೪೭ ರ ವರೆಗೆ ರಶಿಯನ್ ಎಜಂಟರಿಗೆ ಪರಮಾಣು ಬಾಂಬಿನ ಹಾಗು ಸೈನಿಕ ಖಾತೆಯ ಗುಟ್ಟಿನ ವಿಷಯಗಳನ್ನು ಮುಟ್ಟಿಸುವ ದೂತನಾಗಿದ್ದನೆಂಬ ಬಗ್ಗೆ ಸಾಕಷ್ಟು ಪುರಾವೆಗಳು ಹೊರಟವು. ೧೯೪೪ ರಿಂದ ೧೯೪೫ ರ ಸೆಪ್ಟೆಂಬರದ ವರೆಗೆ ಅವನು ಫುಕ್ಸನನ್ನು ಹಲಬಾರಿ ಕಂಡು ಲಿಖಿತ ಮತ್ತು ಮುಖತದಿಂದ ಗೌಪ್ಯಗಳನ್ನು ಪಡೆದಿದ್ದನು. "ರಶಿಯದ ಧ್ಯೇಯಗಳು ನನಗೆ ಸಮ್ಮತವಾಗಿದ್ದವು. ಅದಕ್ಕೆ ಸಹಾಯ ಮಾಡುವುದು ಯೋಗ್ಯವೆಂದೂ ಅಮೇರಿಕವು ಬಚ್ಚಿಡುತ್ತಿದ್ದ ಕೆಲ ಗುಪ್ತ ಸಂಗತಿಗಳು ನ್ಯಾಯವಾಗಿ ಅದಕ್ಕೆ ಸಿಗಬೇಕಾದುದು ಯೋಗ್ಯವೆಂದೂ ನಾನಾಗ ನೆನೆದಿದ್ದೆ" ಎಂದಾತ ಹೇಳಿದ. ಗೂಢಚಾರರ ವಿಷಯಕವಾದ ೧೯೧೭ ರ ಕಾಯದೆಯನ್ವಯ ಅವನಿಗೆ ೩೦ ವರ್ಷಗಳ ಪರಮಾವಧಿ ಶಿಕ್ಷೆಯನ್ನು ವಿಧಿಸಲಾಯಿತು.

ಫುಕ್ಸನ, ಅನಂತರ ಗೋಲ್ಡ್‌ನ ಸಂಗತಿ

# ಕುಟುಂಬದ ಅಚ್ಚುಮೆಚ್ಚಿನದು




# ಬ್ರೂಕ್ ಬಾಂಡ್
# ಚಹಾ

ತಾಜಾ ಮತ್ತು ಉತ್ತಮ

ಬ್ರೂಕ್ ಬಾಂಡ್ ಇಂಡಿಯಾ ಪ್ರೈವೇಟ್ ಲಿಮಿಟೆಡ್

JWTBB 363 K

ಸುಖಮಯ
ಸ್ತ್ರೀ ಜೀವನ
ವೆಂದರೇನೇ

**ಯುಟೋನ್**



ಸ್ತ್ರೀಯರಿಗಾಗಿ
ಆದರ್ಶ
ಆರೋಗ್ಯದಾಯಕ
ಟಾನಿಕ್




ಯುಟೋನದಲ್ಲಿ, ಸ್ತ್ರೀಯರ ಆರೋಗ್ಯ, ಸದೃಢತೆ, ಉತ್ಸಾಹ ಹಾಗೂ ಶಕ್ತಿ ಒದಗಿಸುವ ಅಶೋಕ, ಅಶ್ವಗಂಧಾ, ಶತಾವರಿ, ಸಾರಿವಾ ಮುಂತಾದ ಹೆಸರಾದ ಆಯುರ್ವೇದೀಯ ಔಷಧಗಳು ಸಮಾವೇಶವಾಗಿವೆ.

ಆಯುರ್ವೇದೀಯ ಅರ್ಕಶಾಲಾ ಲಿಮಿಟೆಡ್,
ಸಾತಾರೆ.

ಕರ್ನಾಟಕ ವಿತರಣ ಕೇಂದ್ರ : ಬೋರವಣಕರ-ಚಾಳ, ಸ್ಟೇಶನ್ ರೋಡ, ಹುಬ್ಬಳ್ಳಿ.

ಎಲ್ಲೆಲ್ಲಿಯೂ ಸಿಗುತ್ತದೆ. ಸ್ಥಳೀಯ ಔಷಧವ್ಯಾಪಾರಿಗಳಲ್ಲಿ ವಿಚಾರಿಸಿರಿ.

ಮುಗಿಯಿತು. ರೋಸೆನ್‌ಬರ್ಗ್‌ರ ವಿಷಯದತ್ತ ಬರಬೇಕೆಂದರೆ ಇನ್ನೂ ಅವಕಾಶವಿದೆ! ಎಂದರೆ ರಶಿಯನ್ ಗೂಢಚಾರತನದ ಸರಪಳಿಯಲ್ಲಿ ಮುಖ್ಯವಾದ ಕೊಂಡಿಗಳು ಸಿಗಲು ಇನ್ನೂ ದೂರವಿದ್ದಿತು.

ಪರಮಾಣು ರಹಸ್ಯದ ಗೂಢಚಾರತನದಲ್ಲಿ ಎಫ್. ಬಿ. ಐ. ಯವರಿಗೆ ಮೇಲಿಂದ ಮೇಲೆ ಕೇಳಿಬರುತ್ತಿದ್ದ ಎರಡು ಹೆಸರುಗಳೆಂದರೆ "ಜಾನ್ ಡೋ" ಉರುಫ್ "ಜಾನ್" ಮತ್ತು "ರಿಚಾರ್ಡ್ ರೋ" ಉರುಫ್ "ಸ್ಯಾಮ್". ಗೂಢಚಾರರಿಂದ ಕಸಿದುಕೊಂಡ ಅನೇಕ ದಾಖಲೆಗಳಲ್ಲಿ ಈ ಹೆಸರುಗಳ ಉಲ್ಲೇಖವಿತ್ತು. ಇದೇ ಬೇಹಿನ ಹಿಂದಿದ್ದ ಬುದ್ಧಿ ಕೌಶಲ ಇವರದೇ ಎಂದು ಪತ್ತೇದಾರರಿಗನಿಸಿತ್ತು. ಆದರೆ ಗೋಲ್ಡನು ಈ ಒಗಟವನ್ನೊಡೆಯಲು ಬೇಕಾದ ಒಂದು ಕೊಂಡಿಯ ಮರ್ಮವನ್ನು ಹೊರಗೆಡಹಿದನು.

ತನಗಿನ್ನು ಮರಣದಂಡನೆಯೇ ಗತಿ ಎಂಬ ಸ್ಥಿತಿ ಬಂದಾಗ, ಹ್ಯಾರಿ ಗೋಲ್ಡ್ ಸರಕಾರೀ ಪರ ಸಾಕ್ಷಿದಾರನಾಗಿ, ಇನ್ನೂ ಹಲವರ ಹೆಸರನ್ನು ಬಹಿರಂಗಪಡಿಸಿದನು. ಅವರಲ್ಲಿ ಮುಖ್ಯವಾದ ವ್ಯಕ್ತಿಗಳೆಂದರೆ ಗ್ರೀನ್‌ಗ್ಲಾಸ್ ದಂಪತಿಗಳು.

ಅವನು ಹೇಳಿದ ಇನ್ನೊಂದು ಮಹತ್ವದ ಹೆಸರೆಂದರೆ ಯೆಕೊವ್‌ಲೇವ್ ಎಂಬವನದು. ಈತ ೧೯೪೧ ರಲ್ಲಿ ಅಮೇರಿಕದ ರಶ್ಯನ್ ರಾಯಭಾರಿ ಕಚೇರಿಯಲ್ಲಿ ಕಾರಕೂನನಾಗಿ ತನ್ನ ದೇಶದಿಂದ ಬಂದವ. ಆದರೆ ಕಾರಕೂನಿಕೆಯನ್ನೇನೂ ಮಾಡದೆ, ಬೇಹಿಗರ ಪಡೆಯ ಮುಖ್ಯಸ್ಥನಾಗಿ ಕೆಲಸ ಮಾಡಿದ. ಅಂತೆಯೇ ಏನೊ, ಒಂದೆರಡು ವರ್ಷಗಳಲ್ಲಿ ಅವನನ್ನು Vice consul ಹುದ್ದೆಗೆ ಏರಿಸಲಾಯಿತು. ೧೯೪೬ ರಲ್ಲಿ ಅವನು ರಶಿಯಕ್ಕೆ ಮರಳಿ ಹೋದವನು ಪತ್ತೆ ಬರಲಿಲ್ಲ.

ಹ್ಯಾರಿ ಗೋಲ್ಡನಿಗೆ ದೌತ್ಯ ಕಾರ್ಯವನ್ನು ವಹಿಸಿಕೊಟ್ಟವನೇ ಈ ಯೆಕೊವ್‌ಲೇವ್. ಫುಕ್ಸ್‌ನಿಂದ ಮಾಹಿತಿಯ ಕಾಗದಪತ್ರಗಳನ್ನು ಇಸಿದುಕೊಂಡು ಯೆಕೊವ್‌ಲೇವ್‌ನಿಗೆ ಮುಟ್ಟಿಸುವ ಹೊಣೆ ಈ ಹ್ಯಾರಿ ಗೋಲ್ಡನದಾಗಿತ್ತು. ಎಲ್ಲ ವಿವರಗಳನ್ನು ನೋಡಿದಮೇಲೆ "ಜಾನ್ ಡೋ" ಎಂದರೆ ಯೆಕೊವ್‌ಲೇವ್ ಎಂದು ಎಫ್. ಬಿ. ಐ. ಪತ್ತೇದಾರರಿಗೆ ಖಂಡಿತವಾಯಿತು.

ಒಂದು ಸಲ ಯೆಕೊವ್‌ಲೇವ್ ಆಲ್ಬುಕರ್ಕ್ ಎಂಬ ನಗರಕ್ಕೆ ಹೋಗಿ ಒಬ್ಬರನ್ನು ಭೆಟ್ಟಿಯಾಗಿ ಬರುವ ಗುಟ್ಟಿನ ಕೆಲಸವನ್ನು ಗೋಲ್ಡನಿಗೆ ಒಪ್ಪಿಸಿದನು. ಆದರೆ ಈ ಮುಂಚೆ ಫುಕ್ಸ್ ಅವನನ್ನು ತನ್ನ ಕಡೆಗೆ ಬರಲು ತಿಳಿಸಿದ್ದರಿಂದ, ಗೋಲ್ಡ್ ಮೊದಲು ಒಪ್ಪಲಿಲ್ಲ. ಆದರೆ ಅಲ್ಬುಕರ್ಕ್‌ನಲ್ಲಿದ್ದ ಮನುಷ್ಯನೂ ಪರಮಾಣು ಬಾಂಬಿನ ವಿಷಯದ ಗುಟ್ಟನ್ನೇ ತಿಳಿಸಲಿದ್ದಾನೆಂದೂ ಕೂಡಲೇ ಅವನನ್ನು ಕಾಣಬೇಕೆಂಡೂ ಯೆಕೊವ್‌ಲೆವ್ ಒತ್ತಾಯಿಸಿದನು.

ಇದು ನಡೆದುದು ಜೂನ್ ೧೯೪೫ ರಲ್ಲಿ. ಗೋಲ್ಡ್ ಅಲ್ಬುಕರ್ಕ್ ತಲುಪಿ ತನಗೆ ಕೊಟ್ಟಿದ್ದ ವಿಳಾಸದ ಮನೆಗೆ ಹೋಗಿ ಬಾಗಿಲು ತಟ್ಟಿದನು.

"ಯಾರವರು ?" ಎಂಬುವಾಗಿ ಕೇಳುತ್ತ ೨೮-೩೦ ವರ್ಷದ ತರುಣನೊಬ್ಬ ಬಾಗಿಲು ತೆರೆದನು.

ಪೂರ್ವ ಸೂಚನೆಯಂತೆ ಗೋಲ್ಡ್,

"ನಾನು ಜೂಲಿಯಸ್ ಕಡೆಯಿಂದ ಬಂದಿದ್ದೇನೆ. ಈ ಕಾಗದದ ತುಂಡು ತಗೊಳ್ಳಿ" ಎಂದು ಕೈಚಾಚಿದನು.

ಇಷ್ಟರಲ್ಲಿ ಆ ಮನೆಯಾಕೆಯೂ ಬಂದಳು. ಅವಳು ಕೂಡಲೇ ಅಡ್ಡ ತಿಡ್ಡಲಾಗಿ ಹರಿದಿದ್ದ ಆ ಕಾಗದವನ್ನು ಇಸಿದುಕೊಂಡು ತನ್ನ ಪರ್ಸಿನಲ್ಲಿದ್ದ ಇನ್ನೊಂದು ತುಂಡಿನೊಡನೆ ಕೂಡಿಸಿ ನೋಡಿದಳು. ಎರಡೂ ಒಂದೇ ಮೂಲ ಕಾಗದದಿಂದ ಹರಿದ ತುಂಡುಗಳಾಗಿದ್ದುವು.

ಮರುದಿನ ಅವನನ್ನು ಮತ್ತೆ ಬರಮಾಡಿಕೊಂಡು, ಬಂದುಮಾಡಿದ ಕಾಗದವೊಂದನ್ನು ಅವನ ಕೈಯಲ್ಲಿ ಕೊಡಲಾಯಿತು. ಅದಕ್ಕೆ ಪ್ರತಿಯಾಗಿ ಗೋಲ್ಡ್ ತಾನು ತಂದಿದ್ದ ೫೦೦ ಪೌಂಡುಗಳ ನೋಟುಗಳನ್ನು ಅವನಿಗೆ ಒಪ್ಪಿಸಿದನು.

ಈ ಕಾಗದದ ತುಂಡು ಮುಂದೆ ವಿಚಾರಣೆಯಲ್ಲಿ ಬಲು ಮಹತ್ವದ ಪಾತ್ರವನ್ನು ವಹಿಸಿತು! ಅದು ಬರಿಯೆ ಕಾಗದದ ತುಂಡು ಆಗಿರದೆ, ಜೆಲ್ಲೋ ಎಂಬ ತಿನಿಸನ್ನು ಹಾಕಿಟ್ಟಿದ್ದ ಪೆಟ್ಟಿಗೆಯ ರಟ್ಟು ಆಗಿದ್ದಿತು. ಗುರುತಿಗಾಗಿ ಅದನ್ನು ವಿಶಿಷ್ಟವಾಗಿ ಹರಿದು ಇಬ್ಬರು ಬೇರೆ ಬೇರೆ ವ್ಯಕ್ತಿಗಳ ಕೈಯಲ್ಲಿ ಕೊಡಲಾಗಿದ್ದಿತು. ಅದು ಇದ್ದಿತೆಂದರೆ ಹೆಸರು ದೆಸೆಯನ್ನು ಪರಸ್ಪರ ಕೇಳುವ ಕಾರಣವಿರಲಿಲ್ಲ. ಕೇಳಬಾರದೆಂಬ ಸಂಕೇತವೂ ಇದ್ದಿತೆನ್ನಬಹುದು.

## ೨

ಆಲ್ಬುಕರ್ಕ್‌ನಲ್ಲಿ ವಾಸವಾಗಿದ್ದವರೇ ಗ್ರೀನ್‌ಗ್ಲಾಸ್ ದಂಪತಿಗಳು. ಹತ್ತಿರದಲ್ಲಿದ್ದ ಲಾಸ್ ಅಲಾಮೋಸ್ ಪರಮಾಣು ವಿಜ್ಞಾನ ಶಾಲೆಯಲ್ಲಿ ಡೇವಿಡ್ ಗ್ರೀನ್‌ಗ್ಲಾಸ್ ಮುಖ್ಯ ಮೆಕ್ಯಾನಿಕ್ ಆಗಿ ಕೆಲಸ ಮಾಡುತ್ತಿದ್ದ. ಅಮೇರಿಕದ ವಿವಿಧ ಕಡೆಗಳಿಂದ ಐದಾರು ಜನ ಪ್ರಸಿದ್ಧ ವಿಜ್ಞಾನಿಗಳು ಬಂದು ಗುಟ್ಟಿನಲ್ಲಿ ಏನೊ ಸಿದ್ಧಗೊಳಿಸುತ್ತಿದ್ದಾರೆಂಬುದಷ್ಟೆ ಅವನಿಗೆ ತಿಳಿದಿತ್ತು. ಅದಕ್ಕೂ ಹೆಚ್ಚು ಅವನು ವಿಚಾರ ಮಾಡಹೋಗಿರಲಿಲ್ಲ. ರಥ್‌ಳೊಡನೆ ಅವನ ಮದುವೆಯಾಗಿ ಒಂದೆರಡು ವರ್ಷಗಳು ಮಾತ್ರ ಕಳೆದಿದ್ದವು.

ಡೇವಿಡ್ ಲಾಸ್ ಅಲಾಮೋಸದಲ್ಲಿ ಕೆಲಸಕ್ಕೆ ಬರುವ ಮುಂಚೆ ಇಬ್ಬರೂ ನ್ಯೂಯಾರ್ಕಿನಲ್ಲಿಯೆ



ಮೂಲವ್ಯಾಧಿ
ವ್ಯಾಪಾರಿಗೆ
ವ್ಯಸನವನ್ನು
ಉಂಟುಮಾಡಿತ್ತು
ಹೆರ್ಡೆಜಾ
ಬಳಸಲಾಗಿ
ಅದು ಸಂಪೂರ್ಣವಾಗಿ
ನಿವಾರಣೆಯಾಯಿತು

Z 643 KN




ಇದ್ದರು. ಹೊಸ ಕೆಲಸಕ್ಕೆ ಅವನು ಸೇರಿದಾಗ ರಥ್ ನ್ಯೂಯಾರ್ಕಿನಲ್ಲೇ ನಿಂತಳು.

ಡೇವಿಡ್‌ನ ಅಕ್ಕ ಎಥೆಲ್; ಅವಳ ಗಂಡ ಜ್ಯೂಲಿಯಸ್ ರೋಸೆನ್‌ಬರ್ಗ್ ಇವರೂ ಆಗ ನ್ಯೂಯಾರ್ಕಿನಲ್ಲಿಯೆ ವಾಸವಾಗಿದ್ದರು. ಇಬ್ಬರೂ ದಂಪತಿಗಳು ಸೂಟಿಯ ದಿನಗಳಲ್ಲಿ ಒಂದೆಡೆ ಸೇರುತ್ತಿದ್ದರು. ರೋಸೆನ್‌ಬರ್ಗ್ ದಂಪತಿಗಳು ಕಮ್ಯುನಿಸ್ಟರೆಂಬುದು ಇವರಿಗೆ ಸ್ಪಷ್ಟವಾಗಿ ತಿಳಿದಿದ್ದಿತು. ಜಗತ್ತಿನ ಸುಖ-ಶಾಂತಿಗಳಿಗೆ, ಅಮೇರಿಕದ ಬಂಡವಾಳಶಾಹಿಗಿಂತ ರಶಿಯದ ಸಮತಾವಾದವೇ ಮೇಲು ಎಂಬ ಬಗ್ಗೆ ಚರ್ಚೆ ಅಲ್ಲಿ ನಡೆಯದೇ ಇರುತ್ತಿದ್ದಿಲ್ಲ.

ನಿಜವಾಗಿ ರೋಸೆನ್‌ಬರ್ಗ್ ದಂಪತಿಗಳು ಸ್ಥಿರಪಟ್ಟ ಕಮ್ಯುನಿಸ್ಟರಾಗಿದ್ದರು. ಇಬ್ಬರ ತಂದೆ ತಾಯಿಗಳೂ ಪೂರ್ವ ಯುರೋಪಿನಿಂದ ನ್ಯೂಯಾರ್ಕಿಗೆ ಬಂದು ನೆಲಸಿದ ನಿಷ್ಠಾವಂತ ಯಹೂದ್ಯರಾಗಿದ್ದರು. ದರ್ಜಿಯಾಗಿದ್ದ ಜೂಲಿಯಸ್‌ನ ತಂದೆಯಂತೂ ಮಗ ಯಹೂದ್ಯ ರಬ್ಬಿ (ಪುರೋಹಿತ)ನಾಗಬೇಕೆಂದು ಬಯಸಿದ್ದ. ಆದರೆ ಕಿಶೋರಾವಸ್ಥೆಯಲ್ಲೇ ಇಬ್ಬರಿಗೂ ಕಮ್ಯುನಿಜಂ ಅಂಟಿಕೊಂಡು ಅವರು ಯಹೂದ್ಯ ಧರ್ಮವನ್ನು ತಿರಸ್ಕರಿಸಿ ತಂದೆ ತಾಯಿಗಳನ್ನು ದುಃಖಿಗಳಾಗಿ ಮಾಡಿದ್ದರು. ಎಥೆಲ್ ತನ್ನ ಕಮ್ಯುನಿಜಂನ್ನು ೧೩ ವರ್ಷದ ತನ್ನ ತಮ್ಮ ಡೇವಿಡ್ ಗ್ರೀನ್‌ಗ್ಲಾಸನಿಗೂ ಉಪದೇಶಿಸಿದ್ದಳು. ಇಲೆಕ್ಟ್ರಿಕಲ್ ಎಂಜಿನಿಯರನಾಗಿದ್ದ ಜೂಲಿಯಸ್ ರೋಸೆನ್‌ಬರ್ಗ್ ೧೯೪೩-೪೫ ರಲ್ಲಿ ಅಮೇರಿಕದ ಸೈನ್ಯ ಖಾತೆಯಲ್ಲಿ ಎಂಜಿನಿಯರಿಂಗ್ ಇನ್‌ಸ್ಪೆಕ್ಟರನಾಗಿದ್ದ. ಆದರೆ ಕಮ್ಯುನಿಜಂಗೂ ಆತನಿಗೂ ಸಂಬಂಧವಿದ್ದುದು ಬೆಳಕಿಗೆ ಬಂದ ಮೇಲೆ ಆ ನೌಕರಿ ಹೋಗಿತ್ತು. ಅನಂತರ ಆತ ನ್ಯೂಯಾರ್ಕಿನಲ್ಲಿ ಒಂದು ಎಂಜಿನಿಯರಿಂಗ್ ಉದ್ಯಮ ಪ್ರಾರಂಭಿಸಿದ್ದ.

ಇನ್ನೂ ನೌಕರಿಯಲ್ಲಿದ್ದಾಗಲೆ ರೋಸೆನ್ ಬರ್ಗ್ ದಂಪತಿಗಳು ರಶಿಯದ ಪರವಾಗಿ ಗೂಢ ಗಳನ್ನು ಸಂಗ್ರಹಿಸಿ ಕೊಡಲಾರಂಭಿಸಿದರು. ತಮ್ಮೀ ಯೋಜನೆಯಲ್ಲಿ ಅವರು ಎಥೆಲ್ಲಳ ತಮ್ಮ ಡೇವಿಡ್‌ನನ್ನೂ ಅವನ ಹೆಂಡತಿ ರಥ್‌ಳನ್ನೂ ಸೆಳೆದುಕೊಂಡಿದ್ದರು.

ಅದು ಆರಂಭವಾದದ್ದು ಹೀಗೆ:

ರಥ್ ಒಬ್ಬಳೇ ನ್ಯೂಯಾರ್ಕಿನಲ್ಲಿ ಉಳಿದಾಗ ಒಂದು ದಿನ (ನವ್ಹೆಂಬರ ೧೯೪೪) ರೋ-ಸೆನ್‌ಬರ್ಗ್ ದಂಪತಿಗಳು ಅವಳನ್ನು ಊಟಕ್ಕೆಂದು ಆಮಂತ್ರಿಸಿದರು. ಅವರಿಗೆ ಪ್ರಿಯವಾದ ಹರಟೆಯೆಂದು ರಥ್ ಕಮ್ಯುನಿಸ್ಟ್ ಪಾರ್ಟಿಯ ವಿಷಯವನ್ನೆತ್ತಿದಳು.

"ಇದೇನು ಎಥೆಲ್, ನಿಮ್ಮ ಮನೆಯಲ್ಲಿ 'ಡೇಲಿ ವರ್ಕರ್' (ಕಮ್ಯುನಿಸ್ಟ್) ಪತ್ರಿಕೆ ಕಾಣುವುದೇ ಇಲ್ಲ."

"ಹೌದು. ಅದನ್ನು ತರಿಸುವುದನ್ನು ನಿಲ್ಲಿಸಿದ್ದೇವೆ. ಇಷ್ಟೇ ಯಾಕೆ, ಇವರು ಪಾರ್ಟಿಯ ಮೀಟಿಂಗುಗಳಿಗೆ ಹೋಗುವುದನ್ನೂ ಬಿಟ್ಟಿದ್ದಾರೆ."

"ಹೀಗೇನು? ಆಶ್ಚರ್ಯದ ಸಂಗತಿಯೇ ಇದು. ಅಂದರೆ ಕಮ್ಯುನಿಸ್ಟ್ ಪಾರ್ಟಿಗೆ ರಾಜೀನಾಮೆ ಕೊಟ್ಟರೇನು ಮತ್ತೆ? ಅಂಥ ಪ್ರಸಂಗವೇನು ಬಂತು?"

"ಪ್ರಸಂಗ ಬೇರೆಯೇ ಬಂದಿದೆ; ರಥ್, ಸಮತಾವಾದದಲ್ಲಿ ನಿನ್ನಂತೆ ಗೊಡ್ಡು ಸಹಾನುಭೂತಿಯನ್ನಿಟ್ಟರೇನು ಪ್ರಯೋಜನ? ಅದಕ್ಕಾಗಿ ನಿಶ್ಚಿತ ಕಾರ್ಯವನ್ನು ಮಾಡುವುದನ್ನಿಟ್ಟುಕೊಂಡಿದ್ದೇವೆ."

"ಏನದು?"

"ರಶಿಯಾಕ್ಕೆ ಸಹಾಯ ಮಾಡುವುದು?"

"ಇಲ್ಲಿ ಕುಳಿತು ನೀವೇನು ಸಹಾಯ ಮಾಡಬಲ್ಲಿರಿ?"

"ಇಲ್ಲಿ ಕುಳಿತೇ ಮಾಡುವುದು ಬಹಳ ಇದೆ. ಇಲ್ಲಿಯ ಮಿಲಿಟರಿ ವಿಷಯಕ ಗುಟ್ಟಿನ ಸಂಗತಿಗಳನ್ನು ಅವರಿಗೆ ತಿಳಿಯಪಡಿಸುವುದು."

"ಅಂದರೆ! ಗೂಢಚಾರರ ಕೆಲಸ! ಇದೇನು ಹೇಳುತ್ತೀಯೇ? ನಮ್ಮ ದೇಶಕ್ಕೆ ದ್ರೋಹ ಬಗೆದಂತಾಗುವುದಿಲ್ಲವೆ?"

"ದ್ರೋಹವೆಂತಾದೀತು? ರಶಿಯಾ ಎಂದರೆ ನಮ್ಮ ವೈರಿ ರಾಷ್ಟ್ರವಲ್ಲವಷ್ಟೆ. ಅವರೂ ಜರ್ಮನಿಯ ವಿರುದ್ಧ ನಮ್ಮ ಹಾಗೆ ಹೋರಾಡುತ್ತಿದ್ದಾರೆ."

"ಹಾಗಿದ್ದರೆ ರಶಿಯಾಕ್ಕೆ ಗುಟ್ಟಿನಿಂದ ಇಂಥವೆಲ್ಲ ವಿಷಯ ತಿಳಿಸುವ ಅಗತ್ಯವಾದರೂ ಏನು?"

"ಅಮೇರಿಕ ಹಾಗೆ ಮಾಡುತ್ತಿಲ್ಲವೆಂದು! ಹಿಟ್ಲರನು ಯಾರಿಂದ ಚೆನ್ನಾಗಿ ಪೆಟ್ಟು ತಿಂದನೊ, ಅಂಥ ರಶಿಯಾದ ಸಾಮರ್ಥ್ಯದ ಬಗ್ಗೆ ಮಿತ್ರರಾಷ್ಟ್ರಗಳಿಗೆ ಒಳಗೊಳಗೇ ಹೆದರಿಕೆ ಇದೆ. ಅಂತೆಯೇ ಇವರೆಲ್ಲ ಸೇರಿ ರಶಿಯಾವನ್ನು ಹೊರಗಿಟ್ಟಿದ್ದಾರೆ. ಈಗ ನೋಡು, ಅಮೇರಿಕ ಜರ್ಮನಿಯ ಮೇಲೆ ಪ್ರಯೋಗಿಸಲು ಒಂದು ಮಹಾಸ್ತ್ರವನ್ನು ಸಿದ್ಧಗೊಳಿಸುತ್ತಿದೆ. ಅದಕ್ಕಾಗಿ ಇಂಗ್ಲಂಡಿನಿಂದ, ಕಾನಡಾದಿಂದ ವಿಜ್ಞಾನಿಗಳನ್ನು ಕರೆಸಿದರು. ರಶಿಯಾವನ್ನು ಮಾತನಾಡಿಸಲಿಲ್ಲ ಕೂಡ."

"ಹಿಟ್ಲರನ ವಿರುದ್ಧ ಮಹಾ ಅಸ್ತ್ರವನ್ನು ಸಿದ್ಧಗೊಳಿಸುತ್ತಿದ್ದಾರೆಯೆ?"

"ಪಾಪ, ನಿನಗೇನೂ ಗೊತ್ತೇ ಇಲ್ಲ!"

"ನನಗೆ ಹೇಗೆ ಗೊತ್ತಾಗಬೇಕು?"

"ಅಲ್ಲವೇ ಹುಚ್ಚೀ, ನಮ್ಮ ಡೇವಿಡ್ ಅಲ್ಲಿಯೇ ಕೆಲಸಕ್ಕೆ ಇದ್ದಾನೆ. ಗೊತ್ತಿಲ್ಲವೆಂದು ಸುಳ್ಳು ಹೇಳಬೇಡ."

೧೯ ವರ್ಷದ ಸಣ್ಣ ಹುಡುಗಿ—ರಥ್. ನಿಜವಾಗಿಯೂ ತನಗೆ ತಿಳಿದಿಲ್ಲವೆಂದು ಅಂಗಲಾಚಿ ಹೇಳಿದಳು. ಆಗ ಅಲ್ಲಿಯೇ ಇದ್ದ ಜೂಲಿಯಸ್ ಹೇಳಿದ:

"ಹೋಗಲಿ ಬಿಡು. ನಿನಗೆ ಗೊತ್ತಿರುವ ಸಂಭ

ವವೂ ಇಲ್ಲ. ಬಹಳ ಗುಟ್ಟಿನಲ್ಲಿ ನಡೆದಿದೆ ಆ ಕೆಲಸ. ಒಂದು ಕೆಲಸ ಮಾಡು. ನಿನ್ನ ಗಂಡ ನನ್ನು ಕಂಡು ಅವನಿಂದ, ಅಲ್ ಎಲಾಮೋಸ್ ಪ್ರಯೋಗ ಶಾಲೆ, ಅಲ್ಲಿ ಸಿದ್ಧವಾಗುತ್ತಿರುವ ಅಸ್ತ್ರ ಇವುಗಳ ಬಗ್ಗೆ ಮಾಹಿತಿಯನ್ನು ನಮಗೆ ತಂದು ಕೊಡುವಿಯಾ ?"

"ಅಯ್ಯಯ್ಯಾ ! ಎಂದಿಗೂ ಶಕ್ಯವಿಲ್ಲ. ಇಂಥ ಕೆಲಸ ನಾನು ಎಂದೂ ಮಾಡಲಾರೆ. ನಿಮ್ಮಷ್ಟು ಧೈರ್ಯ ನನಗಿಲ್ಲ. ಡೇವಿಡ್ ಕೂಡಾ ಎಂದಿಗೂ ಒಪ್ಪಲಿಕ್ಕಿಲ್ಲ."

ಗಂಡ-ಹೆಂಡಿರಿಬ್ಬರೂ ಅವಳಿಗೆ ತಿಳಿಸಿ ಹೇಳಿ ನೋಡಿದರು. ಆದರೂ ಅವಳು ತನ್ನ ಭಯದ ವರ್ತುಲದಿಂದ ಹೊರಬರಲಿಚ್ಛಿಸಲಿಲ್ಲ. ಕೊನೆಗೆ ಎಥೆಲ್—

"ಇಷ್ಟಾದರೂ ಮಾಡು, ನಾವು ಹೀಗೆ ಮಾಹಿತಿ ಕೇಳುತ್ತಿದ್ದೇವೆ ಎಂಬ ಸಂದೇಶವನ್ನಾದರೂ ಅಣ್ಣನಿಗೆ ಮುಟ್ಟಿಸು" ಎಂದಳು.

"ನಿನಗೆ ಹೋಗಿ ಬರುವ ವೆಚ್ಚವೆಂದು ಹಣವನ್ನು ಕೊಡುತ್ತೇವೆ" ಎಂದು ಜ್ಯೂಲಿಯಸ್ ದನಿಗೂಡಿಸಿದನು.

ಆ ಸ್ಥಳದಿಂದ ಎರಡು ಸಾವಿರ ಮೈಲಿನ ಮೇಲಿರುವ ತನ್ನ ಗಂಡನನ್ನು ಕಾಣುವ ಆ ಅವಕಾಶವು, ಹೊಸದಾಗಿ ಮದುವೆಯಾದ ರಥ್‌ಳ ಬಾಯಲ್ಲಿ ನೀರೂರಿಸಿತು. ಅಲ್ಲದೇ ಮದುವೆಯ ದ್ವಿತೀಯ ವಾರ್ಷಿಕ ವರ್ಧಂತಿ ಸಮೀಪಿಸಲಿತ್ತು.

ಅವಳು ವಿಚಾರದಲ್ಲಿ ಮಗ್ನಳಾದುದನ್ನು ಕಂಡು, ಜ್ಯೂಲಿಯಸ್, ಡ್ರಾಯರಿನಿಂದ ೧೫೦ ಪೌಂಡುಗಳನ್ನು ಹೊರತೆಗೆದು ಅವಳ ಕೈಯಲ್ಲಿ ತುರುಕಿದನು. "ಇದು ನಿನ್ನ ಹೋಗಿ ಬರುವ ವೆಚ್ಚಕ್ಕೆ" ಎಂದನು.

"ಛೀ ಛೀ. ನೀವೇಕೆ ನನಗಾಗಿ ವೆಚ್ಚಮಾಡುವುದು ?"

"ನಾನೇನು ನನ್ನ ಕೈಯಿಂದ ಕೊಡುತ್ತಿಲ್ಲ. ನಮ್ಮ ಮಿತ್ರರಾದ ರಶಿಯನ್ನರೇ ಕೊಟ್ಟದ್ದು."

ಮರುವಾರವೇ ರಥ್ ಅಲ್‌ಎಲಾಮೋಸಕ್ಕೆ ಹೊರಟಳು. ಗಂಡನಿಗೆ ಎಲ್ಲ ಸುದ್ದಿಯನ್ನೂ ನಿವೇದಿಸಿದಳು. ಮೊದಲಿಗೆ ಅವನೂ ಒಪ್ಪಲಿಲ್ಲ. ಆದರೆ ಎಥೆಲ್‌ಳ ಬಾಲ್ಯದ ಉಪದೇಶ ಅವನಿಗೆ ಮರೆತಿರಲಿಲ್ಲ. ಮರುದಿನ ರಾತ್ರಿ ಅವಳಿಗೆ, ತಾನು ಕೆಲಸ ಮಾಡುತ್ತಿರುವ ವಿಜ್ಞಾನಶಾಲೆಯ ಚಕಬಂದಿ, ಕೆಲಸ ಮಾಡುವ ವಿಜ್ಞಾನಿಗಳ ಹೆಸರುಗಳು, ಯಂತ್ರೋಪಕರಣಗಳು, ಸಿಬ್ಬಂದಿ ಮುಂತಾದವುಗಳ ವಿಚಾರವಾಗಿ ತಾಸೆರಡು ತಾಸು ಹೇಳಿದನು.

ನ್ಯೂಯಾರ್ಕಿಗೆ ತಿರುಗಿ ಬಂದ ರಥ್ ಅದನ್ನು ಯಥಾವತ್ತಾಗಿ ರೋಸೆನ್‌ಬರ್ಗ್ ದಂಪತಿಗಳಿಗೆ ನಿವೇದಿಸಿದಳು.

ಹೆಂಡತಿ ಬಂದುಹೋದ ಮೇಲೆ ಡೇವಿಡ್ ಪ್ರಯೋಗಶಾಲೆಯಲ್ಲಿ ನಡೆಯುತ್ತಿರುವ ಕೆಲಸದ ಪ್ರತಿಯೊಂದು ಅಂಗವನ್ನೂ ಸೂಕ್ಷ್ಮರೀತಿಯಿಂದ ಪರಿಶೀಲಿಸತೊಡಗಿದನು. ಗುಟ್ಟಿನ ಮಾತುಕತೆಗಳಿಗೆ ಕಿವಿಗೊಡಲಾರಂಭಿಸಿದನು. ತನಗೆ ತಿಳಿಯದಿದ್ದ ವಿಷಯಗಳನ್ನು, ಸಂಶಯ ಬರದಂತೆ, ಸಂಬಂಧಪಟ್ಟವರನ್ನು ಕೇಳುವಷ್ಟೂ ಅವನು ಅಲ್ಲಿಯ ಹಿರಿಯಧಿಕಾರಿಗಳ ವಿಶ್ವಾಸಕ್ಕೆ ಪಾತ್ರನಾಗಿದ್ದನು.

ಒಂದೆರಡು ತಿಂಗಳುಗಳಾದ ಮೇಲೆ ಡೆವಿಡ್ ರಜೆ ಪಡೆದು ತಾನೇ ನ್ಯೂಯಾರ್ಕಿಗೆ ಬಂದನು. ಬರುವಾಗ ಹೆಚ್ಚಿನ ಮಾಹಿತಿಯನ್ನು ತಂದನು. ಬಾಂಬನ್ನು ತಯಾರಿಸುವ ಮುಖ್ಯ ಯಂತ್ರಗಳ ಚಿತ್ರಗಳನ್ನು ಅಲ್ಲಿಯೇ ಕುಳಿತು ಬರೆದನು. ಜ್ಯೂಲಿಯಸ್ ರೋಸೆನ್‌ಬರ್ಗನಿಗೆ ಈ ವಿಷಯದಲ್ಲಾದ ಪ್ರಗತಿಯನ್ನು ಕಂಡು ಸಮಾಧಾನವಾಯಿತು. ಅಂತೆಯೇ ಡೇವಿಡ್ ಗ್ರೀನ್‌ಗ್ಲಾಸನಿಗೆ ೨೦೦ ಪೌಂಡು ಹಣವನ್ನು ಕೊಟ್ಟನು.

ಇಷ್ಟಕ್ಕೇ ಬಾಂಬ್ ತಯಾರಿಸುವ ವಿಧಾನ ಪೂರ್ಣ ತಿಳಿದಿರಲಿಲ್ಲವಷ್ಟೆ. ಡೇವಿಡ್‌ನು ಪರಮಾಣುಶಕ್ತಿಯನ್ನು ಒತ್ತಾಗಿ ಕೇಂದ್ರೀಕರಿಸಿ,

ಅದು ಮಹಾನ್ ಘರ್ಷಣೆಯಿಂದ ಸಿಡಿದು ಬೀಳುವುದಕ್ಕೆ ಅಗತ್ಯವಿದ್ದ, ಒಂದು ವಿಶಿಷ್ಟ ಭೂತಗನ್ನಡಿಯ ವಿಚಾರವಾಗಿ ಹೇಳಿದ್ದನು. ಅದನ್ನು ತಯಾರಿಸುವ ಬಗೆ ಹೇಗೆ?

ಡೇವಿಡ್‌ಗೆ ಮೂರು ವಾರಗಳ ರಜೆ ಇತ್ತಷ್ಟೆ. ಅದರಲ್ಲಿ ಒಂದು ದಿನ ಜ್ಯೂಲಿಯಸ್ ತನ್ನ ಭಾವಮೈದುನನನ್ನು, ಒಂದು ನಿರ್ದಿಷ್ಟ ಸ್ಥಳದಲ್ಲಿ ಭೆಟ್ಟಿಯಾಗಲು ತಿಳಿಸಿದನು. ಡೇವಿಡ್ ಅಲ್ಲಿ ಕಾಯುತ್ತಿದ್ದಾಗ, ಜ್ಯೂಲಿಯಸ್‌ನ ಸಂಗಡ, ಒರ್ವ ಅಪರಿಚಿತ ರಶಿಯನ್ ಬಂದಿದ್ದನು.

ಕಾರಿನಲ್ಲಿ ಕುಳಿತಿದ್ದಾಗ ರಶಿಯನ್ನನು ಭೂತಗನ್ನಡಿಯ ವಿಚಾರವಾಗಿ ತುಂಬಾ ಪ್ರಶ್ನೆಗಳನ್ನು ಕೇಳಿದನು. ಡೇವಿಡ್‌ಗೆ ಅದೆಲ್ಲದಕ್ಕೂ ಉತ್ತರ ಹೇಳುವಷ್ಟು ಮಾಹಿತಿ ದೊರೆತಿರಲಿಲ್ಲ. ಅರ್ಧ ತಾಸಿನವರೆಗೆ ಈ ಅರೆವಾಟವಾದ ಮೇಲೆ, ಸುಮ್ಮನೆ ಸುತ್ತಾಡುತ್ತಿದ್ದ ಕಾರು ತನ್ನ ಮೊದಲಿನ ಸ್ಥಳಕ್ಕೆಯೇ ಬಂತು! (ಈ ಅಪರಿಚಿತ ರಶಿಯನ್ ಯಾರು ಎಂಬುದು ಮುಂದಿನ ವಿಚಾರಣೆಯಲ್ಲಿಯೂ ಹೊರಪಡಲಿಲ್ಲ. ಡೇವಿಡ್‌ನಿಗಂತೂ ಗೊತ್ತಿರಲಿಲ್ಲ. ಜ್ಯೂಲಿಯಸ್ ಈ ಬಗ್ಗೆ ಬಾಯಿ ಬಿಡಲೇ ಇಲ್ಲ. ಆತ ಯಕೋವ್ಲೇವ್‌ನೇ ಇರಬೇಕೆಂದು ತರ್ಕವಿದೆ.)

ಡೇವಿಡ್ ಊರಿಗೆ ಹಿಂತಿರುಗಿದ ಮೇಲೆ, ಹೆಚ್ಚಿನ ಮಾಹಿತಿಯನ್ನು ರೋಸೆನ್‌ಬರ್ಗರಿಗೆ ಕಾಲಕಾಲಕ್ಕೆ ಮುಟ್ಟಿಸುವ ಬಗೆ ಹೇಗೆ ಎಂಬ ಬಗ್ಗೆ ಮಾತುಕತೆಗಳು ನಡೆದುವು. ಆ ಕಾಲಕ್ಕೆ ಶ್ರೀಮತಿ ಸಿಡೊರೊವಿಕ್ ಎಂಬ ರಶಿಯನ್ ಹೆಣ್ಣುಮಗಳೂ ಇದ್ದಳು. ಆಕೆ ಮಧ್ಯವರ್ತಿನಿಯಾಗಿ ಓಡಾಡಬೇಕೆಂದು ಜ್ಯೂಲಿಯಸ್ ಸೂಚಿ


Estd 1943



Tel :-"Sunandafac"

ಸುಗಂಧ ಸುಮಧುರವಾದ ಸುಗಂಧ ದ್ರವ್ಯಗಳಿಗೆ ನಾಡಿನಾದ್ಯಂತ ಪ್ರಖ್ಯಾತವಾದ

* ಸುನಂದರಾಜ ಅಗರಬತ್ತಿ
* ಸುನಂದ ರೋಸ್ ಬತ್ತಿ
* ಪೂಜಾರಿಣಿ ಬತ್ತಿ
* ಗುಲಾಬ್-ಕೆ-ಫೂಲ್ ಅಗರಬತ್ತಿ

ಸುನಂದ ಅಂಬರ್ ಬತ್ತಿ, ಅಲ್ಲದೆ ಸುನಂದ ಡೀಲಕ್ಸ ಪರ್‌ಫ್ಯೂಮ್ಡ್ ಬ್ಯಾಗ್, ಮತ್ತು ಪರಿಮಳಯುಕ್ತವಾದ ದ್ರವ್ಯಗಳನ್ನೇ ಯಾವಾಗಲೂ ಉಪಯೋಗಿಸಿರಿ.

ತಯಾರಕರು:— ಕೆ. ರಾಮಕೃಷ್ಣಪ್ಪ

ಮಾಲೀಕರು:— ಸುನಂದ ಅಗರಬತ್ತಿ ಫ್ಯಾಕ್ಟರಿ

1820, ಅಕ್ಬರ್ ರಸ್ತೆ, ಮೈಸೂರು.

ಸಿದ. ಅವಳು ಡೇವಿಡ್‌ನ ಮನೆಗೆ ನೇರವಾಗಿ ಹೋಗಲಾರಳಷ್ಟೆ. ಅದಕ್ಕಾಗಿ ರಥ್ ಮತ್ತು ಆಕೆ ಸಿನೆಮಾ ಥಿಯೇಟರಿನಲ್ಲಿ ಸಂಧಿಸಬೇಕೆಂದೂ ಪರಸ್ಪರರ ಪರ್ಸುಗಳನ್ನು ಬದಲಾಯಿಸಿಕೊಳ್ಳಬೇಕೆಂದೂ ಸೂಚಿಸಲಾಯಿತು. ಒಂದರಲ್ಲಿ ಡಾಲರ್ ನೋಟುಗಳಿರುವುದಾದರೆ, ಇನ್ನೊಂದರಲ್ಲಿ ಬಾಂಬಿನ ತಯಾರಿಕೆಯ ಮೇಲಿನ 'ನೋಟ್ಸ್' ಇರಬೇಕೆಂದಾಯಿತು. ತುಸು ಹೊತ್ತಿನ ಮೇಲೆ ಆ ರಶಿಯನ್ ಮಹಿಳೆ ಎದ್ದು ಹೋದಳು.

ಅದೇಕೋ ಈ ಸೂಚನೆ ಅಷ್ಟೊಂದು ಸುಕ್ಷೇಮವೆಂದು ಕಾಣಲಿಲ್ಲ. ಡೇವಿಡ್ ಒಬ್ಬನೇ ಮೊಗಸಾಲೆಯಲ್ಲಿ ಕುಳಿತಾಗ, ಇತರ ಇಬ್ಬರು ಹೆಂಗಳೆಯರೂ ಜ್ಯೂಲಿಯಸ್‌ನೂ ಅಡಿಗೆಯ ಮನೆಗೆ ಹೋಗಿ ಮಾತನಾಡತೊಡಗಿದರು. ಆಗ ಜ್ಯೂಲಿಯಸನ ಕಣ್ಣಿಗೆ ಜೆಲ್ಲೋ ತಿನಿಸಿನ ತೆರವಾದ ಪೆಟ್ಟಿಗೆ ಕಾಣಿಸಿತು. ಅದನ್ನೇ ಅಡ್ಡತಿಡ್ಡಲಾಗಿ ಹರಿದು ಒಂದು ತುಂಡನ್ನು ರಥ್‌ಳ ಕೈಗಿತ್ತನು. ಇನ್ನೊಂದನ್ನು ಯಾರು ತರುವರೋ ಅವರಿಗೆ ಮಾಹಿತಿಯನ್ನು ಒದಗಿಸಬೇಕು ಎಂದು ಸೂಚಿಸಿದನು.

ರಥ್‌ಳಿಗೆ ಇದು ಒಪ್ಪಿಗೆಯಾಯಿತು. ಹೊರಗೆ ಬಂದು ಡೇವಿಡ್‌ನಿಗೆ ಅದರ ವಿಷಯ ಹೇಳಿದನು.

"ಎಷ್ಟು ಸರಳ ಮತ್ತು ಸುರಕ್ಷಿತವಾದ ವಿಚಾರವಾಗಿದೆಯಲ್ಲ!" ಎಂದು ಡೇವಿಡ್ ಉದ್ಗಾರವನ್ನೆತ್ತಿದನು.

"The simplest things are always clever" ಎಂದು ಜ್ಯೂಲಿಯಸ್ ಉತ್ತರವಿತ್ತನು!

ಅದೇ ಜೆಲ್ಲೋ ಪೆಟ್ಟಿಗೆಯ ಕಾಗದದ ತುಂಡನ್ನು ಹಿಡಿದುಕೊಂಡು ಗೋಲ್ಡ್ ಜೂನ್‌ನಲ್ಲಿ ಬಂದಿದ್ದ!

೧೯೪೫ ಸೆಪ್ಟೆಂಬರ್ ತಿಂಗಳಲ್ಲಿ ಡೇವಿಡ್ ಮತ್ತೆ ಕೆಲ ದಿನಗಳ ರಜೆ ಪಡೆದು ನ್ಯೂಯಾರ್ಕಿಗೆ ಬಂದನು. ಬಂದವನೇ ತನ್ನ ಬೀಗನನ್ನು ಭೆಟ್ಟಿಯಾದನು. ಆ ವೇಳೆಗೆ ಪರಮಾಣು ಬಾಂಬಿನ ಬಹಿರಂಗ ಪ್ರಯೋಗ ಆಗಿ ಹೋಗಿದ್ದಿತು. ಅದರ ತಯಾರಿಕೆಯ ಹೆಚ್ಚಿನ ವಿವರಣೆಗಳಿಗಾಗಿ ರಶಿಯದ ಏಜಂಟರು ಹಾತೊರೆಯುತ್ತಿದ್ದಾಗ—

"ಈ ಸಲ ಬಹಳಷ್ಟು ಮಾಹಿತಿಯನ್ನು ತಂದಿದ್ದೇನೆ. ವಿಶೇಷತಃ ಭೂತಗನ್ನಡಿಗಳ ಕಾರ್ಯಪದ್ಧತಿಯ ಪೂರ್ಣ ಪರಿಚಯವನ್ನು ಮಾಡಿಕೊಂಡು ಬಂದಿದ್ದೇನೆ" ಎಂದು ಹೇಳುತ್ತ, ಭೂತಗನ್ನಡಿ, ಅನಂತರ ಕಚ್ಚಾ ಕರಡನ್ನೂ ಹಾಕಿ ತೋರಿಸಿದನು. ಅವೆರಡನ್ನೂ ವಿವರಿಸುವ, ೧೦-೧೨ ಪುಟಗಳ ಟಿಪ್ಪಣಿಯನ್ನು ಅಲ್ಲಿಯೆ ಕುಳಿತು ಬರೆದುಕೊಟ್ಟನು. ಜ್ಯೂಲಿಯಸ್, ಎಥೆಲ್‌ರು ಅದನ್ನು ಓದಿ ಅದಕ್ಕೆ ಭಾಷೆಯ ಸಂಸ್ಕರಣವನ್ನು ಕೊಟ್ಟರು. ಎಥೆಲ್ ಈ ಮುಂಚೆ ಟೈಪಿಸ್ಟ್ ಎಂದು ಕೆಲಸ ಮಾಡಿದವಳಿದ್ದಳು. ಮನೆಯಲ್ಲಿಯ ಟೈಪ್‌ರೈಟರಿನಿಂದ, ಟಿಪ್ಪಣಿಗಳನ್ನು ಟೈಪ್ ಮಾಡಿಕೊಟ್ಟಳು. ಈ ಸಾರೆ ಡೇವಿಡ್‌ನಿಗೆ ೨೦೦ ಪೌಂಡುಗಳ ಪ್ರತಿಫಲ ದೊರೆಯಿತು

ರಥ್‌ಳಿಗೆ ಮಾತ್ರ ತಾವು ಬಹಳ ದೂರ ಹೋಗಿರುವುದಾಗಿ ಅನಿಸತೊಡಗಿತು. ನ್ಯೂಯಾರ್ಕಿಗೆ ಹೊರಡುವ ಮುನ್ನವೇ, ಗಂಡನಿಗೆ, ಈ ಕಳ್ಳತನದ ಕೆಲಸ ಇಲ್ಲಿಗೆ ಸಾಕು ಎಂದು ಹೇಳಿ ನೋಡಿದಳು. ಆದರೆ ಡೇವಿಡ್ ಹಿಂತಿರುಗುವ ಸ್ಥಿತಿಯಲ್ಲಿರಲಿಲ್ಲ. ಒಪ್ಪಿಕೊಂಡ ಕಾರ್ಯದಲ್ಲಿಯ ಸುಲಭ ಯಶಸ್ಸು, ಹಣದ ಆಮಿಷ ಅವನನ್ನು ಬಹು ದೂರ ಒಯ್ದಿದ್ದುವು.

ಕೋರ್ಟಿನಲ್ಲಿ ವಿಚಾರಣೆಯ ಕಾಲಕ್ಕೆ ಹೊರಬಂದ ಗೌಪ್ಯ ಸ್ಫೋಟದ ಘಟನೆಗಳಲ್ಲಿ ಇವೇ ಮುಖ್ಯವಾದವುಗಳು. "ರಿಚಾರ್ಡ್ ರೋ" ಎಂದರೆ ಜೂಲಿಯಸ್ ರೋಸೆನ್‌ಬರ್ಗನೇ ಎಂಬಲ್ಲಿ ಪತ್ತೇದಾರರಿಗೆ ಸಂದೇಹ ಉಳಿಯಲಿಲ್ಲ. ೧೯೪೬ ರ ಕೊನೆಗೆ ಯೆಕೋವ್ಲೇವ್ ರಶಿಯಾಕ್ಕೆ ಹಿಂತಿರುಗಿದ. ಅವನು ಹೊರಟುಹೋದ




DL. 55-50 KN
ಹಿಂದುಸ್ಥಾನ್ ಲೀವರ್ ಅವರ ತಯಾರಿಕೆ

ಮೇಲೆ ಈ ಬೇಹಿಗತನ ಬಹಳ ದಿನ ನಡೆದಂತೆ ಕಾಣಲಿಲ್ಲ.

ಇಷ್ಟರಲ್ಲಿ ಗ್ರೀನ್‌ಗ್ಲಾಸನ ಮಿಲಿಟರಿಯ ನೌಕರಿ ಕೊನೆಗಂಡಿತು. ಅವನೂ ನ್ಯೂಯಾರ್ಕಿಗೇ ಬಂದನು. ಬೀಗರಿಬ್ಬರೂ ಸೇರಿ ಯಂತ್ರೋಪಕರಣಗಳ ಅಂಗಡಿಯನ್ನು ಪಾಲಿನಿಂದ ನಡೆಸತೊಡಗಿದರು. ಆದರೆ ವ್ಯವಹಾರದಲ್ಲಿ ಅಷ್ಟೊಂದು ಹೊಂದಿಕೆಯಾಗಿರಲಿಲ್ಲ.

೧೯೫೦ ಮೇ ತಿಂಗಳಲ್ಲಿ ಹ್ಯಾರಿ ಗೋಲ್ಡನನ್ನು ಬಂಧಿಸಿದೊಡನೆ ಆ ಸುದ್ದಿಯು ದಪ್ಪಕ್ಷರಗಳಲ್ಲಿ ಪ್ರಕಟವಾದ ಪತ್ರಿಕೆಯನ್ನು ಹಿಡಿದುಕೊಂಡು ರೋಸೆನ್‌ಬರ್ಗ್ ಗ್ರೀನ್‌ಗ್ಲಾಸನ ಮನೆಗೆ ಧಾವಿಸಿದನು.

"ಗೋಲ್ಡನ ಬಂಧನವಾಗಿದೆ. ಇನ್ನು ಮೇಲೆ ನಿಮ್ಮ ಪಾಳಿಯೂ ಬರಬಹುದು. ಕೂಡಲೇ ನೀವು ಇಲ್ಲಿಂದ ಹೊರಟು ಮೆಕ್ಸಿಕೋ ದೇಶಕ್ಕೆ ಹೋಗಿಬಿಡಿರಿ. ಸ್ವಲ್ಪವೂ ತಡ ಮಾಡಕೂಡದು" ಎಂದನು.

ಗಂಡಹೆಂಡಿರಬ್ಬರೂ ವಿವಂಚನೆಗೊಳಗಾದರು. ಈ ಪ್ರಕರಣ ಎರಡು ಮೂರು ವರ್ಷಗಳ ಹಿಂದೆಯೇ ಮುಗಿಯಿತೆಂದು ಅವರು ತಿಳಿದಿದ್ದಾಗ ಇದೊಂದು ಹೊಸ ವಿಪತ್ತು ಕಾಣಿಸಿಕೊಂಡಂತಾಗಿತ್ತು. ಗೋಲ್ಡ್ ತಮ್ಮ ಹೆಸರನ್ನು ಹೇಳದೇ ಇರುವುದಿಲ್ಲ. ಮೇಲಾಗಿ ತಾನು ಪರಮಾಣು ಬಾಂಬಿನ ಪ್ರಯೋಗ ಶಾಲೆಯಲ್ಲೇ ಕೆಲಸ ಮಾಡುತ್ತಿದ್ದನಾದ್ದರಿಂದ ತಪ್ಪಿಸಿಕೊಳ್ಳುವುದು ಕಠಿಣವೆಂದು ಡೇವಿಡ್‌ನಿಗೆ ಅನಿಸಿತು.

ಮೆಕ್ಸಿಕೋಕ್ಕೆ ಹೋಗಬೇಕೆಂದರೆ ಪಾಸ್‌ಪೋರ್ಟ್ ಬೇಕು. ಆ ರೀತಿಯಾಗಿ ಎದ್ದು ಕಾಣುವಂತಾಗದೇ, ಪ್ರವಾಸೀ ಪರಮಿಟ್ಟನ್ನು ಪಡೆದು ಹೋಗಬೇಕೆಂದು ಜ್ಯೂಲಿಯಸ್ ಹೇಳಿದನು.

ಆದರೆ ಎರಡು ಎಳೆಯ ಮಕ್ಕಳನ್ನು ಕಟ್ಟಿಕೊಂಡು ಹೋಗುವುದಾದರೂ ಹೇಗೆ ಎಂದು ರಥ್‌ಳಿಗೆ ಚಿಂತೆಯಾಯಿತು. "ಎರಡನೆಯ ಕೂಸು ಹತ್ತು ತಿಂಗಳು ದಾಟಿದೆ. ಏನೂ ಆಗುವುದಿಲ್ಲ" ಎಂದು ಜ್ಯೂಲಿಯಸ್ ಗದರಿಸಿದ. ಅವರ ವೆಚ್ಚಕ್ಕೆಂದು ಒಂದು ಸಾವಿರ ಪೌಂಡುಗಳನ್ನು ಕೊಟ್ಟನಲ್ಲದೆ, ಐದಾರು ಸಾವಿರ ಡಾಲರ್ ಹಣವನ್ನು ಮುಂದೆ ಕಳಿಸುವುದಾಗಿ ಆಶ್ವಾಸನವನ್ನಿತ್ತನು.

ಕೊನೆಗೆ ಪಾಸ್‌ಪೋರ್ಟ್ ಪಡೆದೇ ಹೋಗಬೇಕೆಂದು ನಿರ್ಣಯವಾಯಿತು. ಮತ್ತು ತಾವೆಲ್ಲ ಮೈಲೀ ಬೇನೆಯಿಂದ ಬಳಲುತ್ತಿದ್ದು ಮೈಲಿ ಚುಚ್ಚಿಸಿಕೊಂಡ ಬಗ್ಗೆ ಡಾಕ್ಟರರಿಂದ ಸರ್ಟಿಫಿಕೇಟ್ ತರಬೇಕು ಎಂದನು. ರಥ್ ಈ ಸುಳ್ಳು ಸರ್ಟಿಫಿಕೇಟ್ ದೊರಕಿಸುವುದಕ್ಕೆ ಒಪ್ಪಲಿಲ್ಲ. ಪಾಸ್‌ಪೋರ್ಟ್ ಸಲುವಾಗಿ ಗುಟ್ಟಿನಲ್ಲಿ ಫೋಟೋ ತೆಗೆಸಿಕೊಳ್ಳುವುದೂ ಅವಳಿಗೆ ಅಸಾಧ್ಯವಾಗಿ ಕಂಡಿತು. ಅದನ್ನೂ ತಾನು ಮಾಡಿಸಿಕೊಡುವುದಾಗಿ ಜ್ಯೂಲಿಯಸ್ ಮುಂದೆ ಬಂದನು.

ಊರು ಬಿಡದ ಹೊರತು ಅನ್ಯ ಉಪಾಯವಿರಲಿಲ್ಲ. ಮೆಕ್ಸಿಕೋಕ್ಕೆ ಹೋದ ಮೇಲಾದರೂ ಮುಂದೇನು ಎಂಬ ಪ್ರಶ್ನೆ ಬಂತು. ಅದಕ್ಕೆ ಜ್ಯೂಲಿಯಸನ ಯೋಜನೆ ಸಿದ್ಧವಾಗೇ ಇತ್ತು. ಆಯ್. ಜಾಕ್ಸನ್ ಎಂಬ ಹೆಸರನ್ನು ಧರಿಸಿ, ಅದೇ ಹೆಸರಿನಿಂದ, ಮೆಕ್ಸಿಕೋದಲ್ಲಿರುವ ರಶಿಯನ್ ರಾಯಭಾರೀ ಕಚೇರಿಗೆ ಅರ್ಜಿ ಹಾಕಬೇಕು. ಅರ್ಜಿ ಹಾಕಿದ ಮರುದಿನದಿಂದ ಮೂರು ದಿನಗಳ ವರೆಗೆ, ಕೊಲಂಬಸ್‌ನ ಮೂರ್ತಿ ಇರುವ ಕೋರ್ಟಿನಲ್ಲಿ ಸಂಜೆ ೫ ಗಂಟೆಯ ಹೊತ್ತಿಗೆ, ಮೂರು ದಿನ ಕಾಯಬೇಕು. ಆಗ ಒಬ್ಬ ಮನುಷ್ಯ ಬರುತ್ತಾನೆ. "ನಾನು ಓಕ್ಲಾಹಾಮಾದಿಂದ ಬಂದಿದ್ದೇನೆ. ಕೊಲಂಬಸನ ಇಷ್ಟು ದೊಡ್ಡ ಮೂರ್ತಿಯನ್ನು ನಾನೆಲ್ಲೂ ಕಂಡಿಲ್ಲ" ಎಂದು ಡೇವಿಡ್ ಉತ್ತರ ಕೊಡಬೇಕು. "ಪ್ಯಾರಿಸ್‌ದಲ್ಲಿ ಇದಕ್ಕೂ

ಸುಂದರವಾದ ಮೂರ್ತಿಗಳಿವೆ" ಎಂದು ಆ ಆಗುಂತುಕನು ಉತ್ತರ ಕೊಡುತ್ತಾನೆ. ಅದೇ ಮನುಷ್ಯನೇ ಡೇವಿಡ್‌ನಿಗೆ ಮುಂದಿನ ಪ್ರಯಾಣದ ಅನುಕೂಲತೆಗಳನ್ನು ಒದಗಿಸಿಕೊಡುತ್ತಾನೆ. ಅಲ್ಲಿಂದ ಹಡಗನ್ನು ಹತ್ತಿ ಯುರೋಪಿಗೆ ಬಂದು, ಸ್ವೀಡನ್, ಸ್ವಿಝರ್ಲಂಡ್‌ಗಳನ್ನು ದಾಟಿ ಝೆಕೋಸ್ಲೋವಾಕಿಯಾಕ್ಕೆ ಹೋಗಿ ವಾಸವಾಗಿರಬೇಕು.

ಅಲ್ಲಿ ಏನು ಮಾಡಬೇಕು? ಎಂದರೆ ತನ್ನ ಗುಪ್ತ ನಾಮವನ್ನು ಬರೆದು "ನಾನು ಇಲ್ಲಿಗೆ ಬಂದಿದ್ದೇನೆ" ಎಂಬ ಸಾಲನ್ನೂ ಕಾಣಿಸಿ ಅಲ್ಲಿಯ ರಶಿಯನ್ ರಾಯಭಾರಿ ಕಚೇರಿಯಲ್ಲಿ ಕೊಟ್ಟರಾಯಿತು! ಗ್ರೀನ್‌ಗ್ಲಾಸ್ ದಂಪತಿಗಳು ಅಲ್ಲಿಂದ ಮುಂದೆ ನಿಶ್ಚಿಂತರಾಗಿ ಬದುಕಬಹುದು.

—ಇದು ಅಪ್ಪಟ ಕಮ್ಯುನಿಸ್ಟ ರೋಸೆನ್‌ಬರ್ಗನ ಹಂಚಿಕೆಯಾಗಿತ್ತು.

ಮಾತು ಕೊಟ್ಟಂತೆ ಜ್ಯೂಲಿಯಸ್ ಅವರಿಬ್ಬರ ಪಾಸ್‌ಪೋರ್ಟ್ ಫೋಟೋ ತೆಗೆಸಿಕೊಟ್ಟನು. ಇನ್ನು ಮೂರು ಸಾವಿರ ಡಾಲರುಗಳನ್ನೂ ಅವರ ಕೈಗೆ ಹಾಕಿದನು. ತಮ್ಮ ಪಾಲಿನ ಧಂದೆಯಲ್ಲಿ ಹಣದ ಸಲುವಾಗಿಯೇ ತಕರಾರು ಬಂದು ಹತ್ತು ಡಾಲರಿನ ಆರ್ಥಿಕ ಸಹಾಯಕ್ಕೆ ಸಹ ಹಿಂದು ಮುಂದೆ ನೋಡುತ್ತಿದ್ದ ಜ್ಯೂಲಿಯಸ್ ಈಗ ನೀರಿನಂತೆ ಹಣ ಸುರಿಯಲು ಮುಂದೆ ಬಂದಿದ್ದ.

ಜ್ಯೂಲಿಯಸ್ ಇಷ್ಟೆಲ್ಲ ಎಚ್ಚರ ವಹಿಸಿದ್ದರೂ ಗ್ರೀನ್‌ಗ್ಲಾಸ್ ದಂಪತಿಗಳು ಊರು ಬಿಡಲಿಲ್ಲ. ಎಫ್. ಬಿ. ಐ.ಯವರೂ ಇವರ ಪಾಳತಿಯ ಮೇಲಿದ್ದರು. ಜೂನ್ ಮಧ್ಯದಲ್ಲಿ ಎಣಿಸಿದಂತೆ ಡೇವಿಡ್‌ನ ಬಂಧನವಾಯಿತು. ಈವಾಗ ಎಥೆಲ್ ಧಾವಿಸಿ ಬಂದು, "ರಥ್, ನಿನ್ನ ಗಂಡ ಏನನ್ನೂ ಒಡನುಡಿಯದಂತೆ ಬಜಾಯಿಸು. ತಾನೂ ಸಿಕ್ಕಿಬೀಳುವನಲ್ಲದೆ, ಎಲ್ಲರನ್ನೂ ತೊಡಕಿಗೆ ಹಾಕುವನು" ಎಂದು ಹೇಳಿದಳು.




ಶೃಂಗಾರ ಸಾಧನಗಳಲ್ಲಿ ವಿಶ್ವಾಸಭರಿತ ಹೆಸರು

ರೆಮಿ

ಸ್ನೋ ಮತ್ತು ಪೌಡರ್




ಸೋಲ್ ಡಿಸ್ಟ್ರಿಬ್ಯೂಟರ್ಸ್:
ಎ.ವಿ.ಆರ್.ಎ. & ಕಂ. ಬೊಂಬಾಯಿ-2

ಆಗುವುದು ಆಗಿ ಹೋಯಿತು. ಕೆಲ ದಿನಗಳ ನಂತರ ರಥ್‌ಳ ಬಂಧನವೂ ಆಯಿತು. ಬಹುಶಃ ಅವಳ ಪ್ರೇರಣೆಯಿಂದೊ ಏನೋ, ಗ್ರೀನ್‌ಗ್ಲಾಸ್ ದಂಪತಿಗಳು ತಮ್ಮ ವಿಚಾರಣೆಯಲ್ಲಿ ಒಂದನ್ನೂ ಮುಚ್ಚಿಡದೇ ಎಲ್ಲವನ್ನು ನಿವೇಸಿದರು. ಮಾಫೀ ಸಾಕ್ಷಿದಾರರಾದರೆ ತಮಗಾಗುವ ಶಿಕ್ಷೆಯಲ್ಲಿ ಸವಲತ್ತು ದೊರೆಯಬಹುದೆನ್ನುವ ನಿರೀಕ್ಷೆಯೂ ಹಾಗೆ ಮಾಡಿಸಿರಬೇಕು.

ಗ್ರೀನ್‌ಗ್ಲಾಸ್ ದಂಪತಿಗಳ ವಿಚಾರಣೆಯ ಮೋಜೆಂದರೆ, ರಥ್‌ಳನ್ನು ಬಿಟ್ಟುಕೊಡಲಾಯಿತು. ಅವಳು ಅಪರಾಧಿನಿಯೆಂದಾಗದೇ ಮಾಫೀ ಸಾಕ್ಷೀದಾರಳಾದಳು. ಅವಳ ಗಂಡನಿಗೆ ಮಾತ್ರ ೧೫ ವರ್ಷಗಳ ಶಿಕ್ಷೆಯನ್ನು ವಿಧಿಸಲಾಯಿತು.

೩

೧೯೫೫ ಜುಲೈ ೧೭ ರಂದು ಜ್ಯೂಲಿಯಸ್ ರೋಸೆನ್‌ಬರ್ಗನ ಮೇಲೆ ಪೋಲೀಸರು ಮುಗಿಬಿದ್ದರು. ಅಗಸ್ಟ ೧೧ ರಂದು ಎಥೆಲ್ಲಳನ್ನು ಹಿಡಿದರು. ಸಾಕ್ಷಿದಾರರ ಎಲ್ಲ ಹೇಳಿಕೆಗಳು ಮುಗಿದ ಮೇಲೆ, ರೋಸೆನ್‌ಬರ್ಗ ದಂಪತಿಗಳು ಗೂಢಚಾರತನದಲ್ಲಿ ಮೊದಲಿಂದ ಕೊನೆಯವರೆಗೆ ಅವ್ಯಾಹತವಾಗಿ ಕೆಲಸ ಮಾಡಿ, ಪ್ರಮುಖ ಪಾತ್ರವನ್ನು ವಹಿಸಿದರೆಂಬುದಾಗಿ ಸಾಕ್ಷಿದಾರರ ಹೇಳಿಕೆಯಿಂದ ಸಿದ್ಧವಾಗಿದ್ದಾಗ, ಜ್ಯೂಲಿಯಸ್ ರೋಸೆನ್‌ಬರ್ಗ್ ಸಾಕ್ಷಿಯ ಕಟಾಂಜನದಲ್ಲಿ ಬಂದು ನಿಂತನು. ಸರಕಾರೀ ವಕೀಲರು ಸವಾಲನ್ನು ಆರಂಭಿಸಿದರು:—

ವಕೀಲ — ೧೯೪೪ ರ ನವ್ಹೆಂಬರದಲ್ಲಿ ನೀವು ರಥ್ ಗ್ರೀನ್‌ಗ್ಲಾಸಳನ್ನು ಭೆಟ್ಟಿಯಾದಾಗ, ಆಕೆಯು ಗಂಡನಿಂದ ಗುಟ್ಟಿನ ಮಾಹಿತಿ ಪಡೆದುಕೊಂಡು ಬರಲು ಹೇಳಿದಿರಾ ?

ರೋಸೆನ್‌ಬರ್ಗ್ — ಇಲ್ಲ.

ವಕೀಲ—ನೀವು ರಥ್‌ಳಿಗೆ ೧೫೦ ಡಾಲರುಗಳನ್ನು ಕೊಟ್ಟು ಗಂಡನ ಕಡೆ ಹೋಗಿ ಮಾಹಿತಿ ತರಲು, ಯಾವಾಗಲಾದರೂ ಹೇಳಿದ್ದಿರಾ ?

ರೋಸೆನ್‌ಬರ್ಗ್ — ಇಲ್ಲ.

ವಕೀಲ — ಗ್ರೀನ್‌ಗ್ಲಾಸ್ ೧೯೪೪ ರಲ್ಲಿ ಲಾಸ್ ಅಲಾಮೋಸಿನ ಪ್ರೊಜೆಕ್ಟಿನಲ್ಲಿ ಕೆಲಸ ಮಾಡುತ್ತಿದ್ದುದು ನಿಮಗೆ ಗೊತ್ತಿತ್ತು.

ರೋ'ಬರ್ಗ — ಇಲ್ಲ.

ವಕೀಲ — ಇದು ನೋಡಿರಿ. ಗ್ರೀನ್‌ಗ್ಲಾಸ್ ತೆಗೆದ ಪರಮಾಣು ಬಾಂಬಿನ ಕರಡು ಚಿತ್ರ. ಇದನ್ನು ನೀವು ಈ ಮುಂಚೆ ಅವನಿಂದ ಕಂಡಿದ್ದಿರಾ ?

ರೋ'ಬರ್ಗ — ಇಲ್ಲ. ನಾ ನೋಡಿಲ್ಲ.

ವಕೀಲ — ನೀವು....

ರೋ'ಬರ್ಗ — ಇಲ್ಲ !

ಯಾವುದಕ್ಕೂ ರೋಸೆನ್‌ಬರ್ಗ, 'ಇಲ್ಲ' 'ನನಗೆ ಗೊತ್ತಿಲ್ಲ' ಮತ್ತು 'ನೋಡಿಲ್ಲ.' ಈ ಚುಟುಕು ನುಡಿಯನ್ನು ಒಡನುಡಿಯುತ್ತಿದ್ದ.

ಅದರಿಂದ ಬೇಸತ್ತ ವಕೀಲರು ಪ್ರಶ್ನೆಗಳ ಧಾಟಿಯನ್ನು ಬದಲಿಸಿದರು.

"ನೀವು ಕಮ್ಯುನಿಸ್ಟ ಪಕ್ಷದ ಸದಸ್ಯರು ಹೌದೋ, ಅಲ್ಲವೊ ?"

"ಈ ಪ್ರಶ್ನೆಗೆ ನಾನು ಉತ್ತರ ಕೊಡುವುದಿಲ್ಲ. ಇದು ನನ್ನನ್ನು ಅನವಶ್ಯಕ ತಪ್ಪಿನಲ್ಲಿ ಸಿಲುಕಿಸಬಹುದು."

"ಇಕೊ, 'ನಾನು ಈಗ ಆಗಲಿ, ಹಿಂದೆ ಆಗಲಿ ಕಮ್ಯುನಿಸ್ಟ ಪಕ್ಷದ ಸದಸ್ಯನಿದ್ದಿಲ್ಲ' ಎಂದು ನೀವು ಹಿಂದೊಮ್ಮೆ ಹೇಳಿಕೆ ಕೊಟ್ಟಿದ್ದರ ನಕಲು ಇದು. ನಿಮ್ಮ ಅಂದಿನ ಮತ್ತು ಇಂದಿನ ಹೇಳಿಕೆಗಳು ಎರಡೂ ನಿಜವೆ ?

ಉತ್ತರ :

"ಇದಕ್ಕೆ ಉತ್ತರ ಕೊಡಲು ನಿರಾಕರಿಸುತ್ತೇನೆ. ಇದು ನನ್ನನ್ನು ತಪ್ಪಿನಲ್ಲಿ ಸಿಲುಕಿಸಬಹುದು."

"ರಶಿಯದ ವಿಷಯದಲ್ಲಿ ಸಹಾನುಭೂತಿ

ಮಾಲತಿಗೆ ತಿಳಿದಿರಲಿಲ್ಲ...







ಮಾಲತಿ ತನ್ನ ಸ್ನೇಹಿತಳ ಸಲಹೆ ತೆಗೆದುಕೊಳ್ಳುತ್ತಾಳೆ.




ಈಗ ತಿಳಿಯಿತು ಮಾಲತಿಗೆ ರುಚಿಕರವಾದ ಅಡಿಗೆಯ ಗುಟ್ಟು. ಅದೇ ಆರೋಗ್ಯಕರವಾದ ಮತ್ತು ರುಚಿಕರವಾದ ತುಷಾರ್ ವನಸ್ಪತಿ.



**ತುಷಾರ್**

ವಿಟಮಿನ್‌ಗಳನ್ನೊಳಗೊಂಡ ವನಸ್ಪತಿ
(ವಿಟಮಿನ್ A ಮತ್ತು D ಒಳಗೊಂಡಿದೆ)
ಮತ್ತು
ಶುದ್ಧೀಕರಿಸಿದ ತುಷಾರ್ ಎಣ್ಣೆ

ತುಂಗಭದ್ರಾ ಇಂಡಸ್ಟ್ರೀಸ್ ಲಿಮಿಟೆಡ್, ಕರ್ನೂಲ್.

ASP/TU5


H 5-18

ಯಿಟ್ಟುಕೊಂಡದ್ದಲ್ಲದೇ, ನಮ್ಮ ದೇಶಕ್ಕೆ ನೀನು ದ್ರೋಹ ಬಗೆದಿದ್ದೀಯೆ" ಎಂದಾಗ ರೋಸೆನ್‌ಬರ್ಗ್ ಸ್ವಲ್ಪ ಬಾಯಿ ಬಿಟ್ಟು ಮಾತನಾಡಿದನು.—

"ಇಲ್ಲ. ನಾನು ನನ್ನ ದೇಶ, ನಮ್ಮ ರಾಜ್ಯ ಘಟನೆ, ನಮ್ಮ ನ್ಯಾಯದಾನಪದ್ಧತಿ ಇವುಗಳಲ್ಲಿ ಸಂಪೂರ್ಣ ನಿಷ್ಠೆಯುಳ್ಳವನಿದ್ದೇನೆ. ೧೯೪೫ ರಲ್ಲಿ ನನಗೆ ರಶಿಯನ್ ಸರಕಾರದ ಬಗ್ಗೆ ಸಹಾನುಭೂತಿ ಇದ್ದದ್ದು ನಿಜ. ಶ್ರಮಜೀವಿಗಳ ಉನ್ನತಿಯ ಬಗ್ಗೆ, ಜನತೆಯ ಅನಕ್ಷರತೆಯನ್ನು ಕಳೆಯುವ ಬಗ್ಗೆ, ವಿಧಾಯಕವಾದ ಸಮಾಜ ಸುಧಾರಣೆಯ ಕೆಲಸಗಳನ್ನು ಕೈಕೊಳ್ಳುವ ಬಗ್ಗೆ ರಶಿಯಾ ಸಾಕಷ್ಟು ಮುಂಬರಿದು ಕೆಲಸ ಮಾಡಿದೆ ಎಂದು ನಾನು ತಿಳಿದಿದ್ದೆ. ೬೦ ಲಕ್ಷ ಜನ ಯಹೂದ್ಯರನ್ನು ಕೊಂದ ಹಿಟ್ಲರನೆಂಬ ದೈತ್ಯನನ್ನು ನಾಶ ಮಾಡುವಲ್ಲಿ ರಶಿಯನ್ನರೇ ಹೆಚ್ಚು ಕಾರಣರೆಂದು ನನಗೆ ಅನಿಸಿತ್ತು. ಈಗೂ ಅನಿಸುತ್ತದೆ."

ಎಥೆಲ್ ರೋಸೆನ್‌ಬರ್ಗ್ ಕೂಡಾ, ಗಂಡನ ಪಲ್ಲವಿಯನ್ನೇ ಅನುಸರಿಸಿ, ವಿಚಾರಣೆಯಲ್ಲಿ ಉತ್ತರ ಕೊಟ್ಟಳು. ಇಬ್ಬರೂ ಯಾವ ಮಾತಿಗೂ ಒಪ್ಪಲಿಲ್ಲ.

ಆರೋಪಿಗಳ ಪರ ವಕೀಲರು ತಮ್ಮ ವಾದದಲ್ಲಿ, "ಗ್ರೀನ್‌ಗ್ಲಾಸರೇ ಇದರಲ್ಲಿ ಮುಖ್ಯ ಪಾತ್ರವಹಿಸಿದವರು. ತಮ್ಮ ಮೇಲೆ ಬಂದ ಆಪಾದನೆಯನ್ನು ಅನವಶ್ಯಕವಾಗಿ ರೋಸೆನ್‌ಬರ್ಗ್ ದಂಪತಿಗಳ ಮೇಲೆ ಹಾಕಿದ್ದಾರೆ. ಗೂಢಚಾರತನದ ಅಪರಾಧವಲ್ಲದೇ, ತಪ್ಪಿತಸ್ಥರಲ್ಲದ ಈ ಇಬ್ಬರ ಜೀವಕ್ಕೆ ಗಂಡಾಂತರವನ್ನೊಡ್ಡಿದ ತಮ್ಮ ಅಮಾನುಷ ವೃತ್ತಿಯಿಂದ ಗ್ರೀನ್‌ಗ್ಲಾಸ್ ದಂಪತಿಗಳು ಇದೂ ಒಂದು ಅಪರಾಧವನ್ನು ಮಾಡಿದ್ದಾರೆ. ರೋಸೆನ್‌ಬರ್ಗ್ ದಂಪತಿಗಳ ವಿರುದ್ಧ ಒಂದಾದರೂ ನೇರವಾದ ಪುರಾವೆಯಿಲ್ಲ. ರಾಜಕೀಯ ಸಾಧನೆ, ಪ್ರಚಾರಗಳ ದೃಷ್ಟಿಯಿಂದ ಸರಕಾರವು ಗ್ರೀನ್‌ಗ್ಲಾಸ್ ದಂಪತಿಗಳನ್ನು ಒಡಕೊಂಡು ಈ ನಿಷ್ಪಾಪಿಗಳನ್ನು ಅಪಾದಿತರನ್ನಾಗಿ ಮಾಡಿದೆ. ತಮ್ಮ ಪಾಲಿನ ವ್ಯವಹಾರದ ವಿಷಯದಲ್ಲಿ ಗ್ರೀನ್‌ಗ್ಲಾಸನಿಗೂ ರೋಸೆನ್‌ಬರ್ಗನ ಮೇಲೆ ದ್ವೇಷವಿದ್ದಿತು" ಎಂದು ಮುಂತಾಗಿ ಹೇಳಿದರು.

ಇದಕ್ಕೆ ಉತ್ತರರೂಪವಾಗಿ ಸರಕಾರೀ ಪರ ವಕೀಲರು ತಮ್ಮ ವಾದದಲ್ಲಿ ಜೆಲ್ಲೋ ಪೆಟ್ಟಿಗೆಯ ಕಾಗದದ ತುಂಡಿನ ನೇರ ಪುರಾವೆಯನ್ನು ಎತ್ತಿ ತೋರಿಸಿದರು. ಸರಕಾರವು ರಾಜಕೀಯ ಉದ್ದೇಶವನ್ನಿಟ್ಟುಕೊಂಡು ಕಮ್ಯುನಿಸ್ಟರನ್ನು ಹೀಗೆಳೆಯುವುದಕ್ಕಾಗಿ ಈ ಪ್ರಸಂಗದ ಉಪಯೋಗವನ್ನು ಮಾಡಿಕೊಳ್ಳುವುದಾಗಿದ್ದರೆ, ರೋಸೆನ್‌ಬರ್ಗರನ್ನೇ ಏಕೆ, ಮತ್ತಾರಾದರೂ ಪ್ರತಿಷ್ಠಿತ ಕಮ್ಯುನಿಸ್ಟರ ಹೆಸರನ್ನೇ ಹೇಳುವಂತೆ ಗ್ರೀನ್‌ಗ್ಲಾಸರನ್ನು ಪುಸಲಾಯಿಸಬಹುದಿತ್ತಲ್ಲವೆ? ಮುಖ್ಯತಃ ನಮ್ಮ ದೇಶದ ಅತ್ಯಂತ ಹಿರಿಯ ಸಾಧನೆಯಾದ ಪರಮಾಣು ಬಾಂಬಿನ ನಿರ್ಮಾಣದ ವಿವರಗಳನ್ನೂ ಇತರ ಮಿಲಿಟರಿ ಗುಟ್ಟುಗಳನ್ನೂ ಅನ್ಯದೇಶಕ್ಕೆ ಬಿಟ್ಟುಕೊಟ್ಟು ಮಹದನ್ಯಾಯ ಮಾಡಿದ್ದಾರೆ. ದೇಶದ ಸಂರಕ್ಷಣೆಯ ಅಸ್ತಿವಾರವನ್ನೇ ಅಲುಗಾಡಿಸಿದ್ದಾರೆ. ನಮ್ಮ ಈ ವೈಜ್ಞಾನಿಕ ಪ್ರಯೋಗಗಳಿಂದ ರಶಿಯಾ ಬಹುಮಟ್ಟಿಗೆ ಲಾಭವನ್ನು ಹೊಂದಿ, ಈ ಕ್ಷೇತ್ರದಲ್ಲಿ ನಮಗಿಂತ ಒಂದು ಹೆಜ್ಜೆ ಮುಂದಡಿ ಇಡುವಂತೆ ಮಾಡಿದವರೇ ಇವರು, ಎಂಬ ಮಾತನ್ನು ಒತ್ತಿ ಹೇಳಿ ಮುಗಿಸಿದರು.

ಮೊದಲಿಗೆ ಜ್ಯೂರಿ ಜನರ ನಿರ್ಣಯ ಹೊರಬರಬೇಕಷ್ಟೆ. ಅವರು ರೋಸೆನ್‌ಬರ್ಗ್ ದಂಪತಿಗಳು ತಪ್ಪಿತಸ್ಥರು ಎಂಬ ನಿರ್ಣಯವನ್ನಿತ್ತರು. ಮರುವಾರ, ನ್ಯಾಯಾಧೀಶರಾದ ಕಾಫ್‌ಮನ್ ಕೊಟ್ಟ ತೀರ್ಪಿನ ಕೆಲವೊಂದು ಭಾಗವು ವಾಚನೀಯವಾಗಿದೆ.

"ಇದು ವರೆಗೆ ನಡೆದ ಸುದೀರ್ಘ ಹಾಗೂ ನಿಷ್ಪ

ಕ್ಷಪಾತ ವಿಚಾರಣೆಯು ರಶಿಯದಲ್ಲಾಗಿದ್ದರೆ ಎಂದೂ ನಡೆಯುತ್ತಿದ್ದಿಲ್ಲ. ದೇಶದ್ರೋಹಿತನದ ಆಪಾದನೆಯುಳ್ಳ ವ್ಯಕ್ತಿಯ ವಿಚಾರಣೆಗೆ ಅಲ್ಲಿ ಒಂದು ದಿನ ಕೂಡ ಹಿಡಿಯುತ್ತಿದ್ದಿಲ್ಲ. ಹೀಗಿದ್ದು, ಈ ಆರೋಪಿಗಳು ಸತ್ಯ-ನ್ಯಾಯಾಲಯಗಳಿಲ್ಲದ, ವ್ಯಕ್ತಿ ಸ್ವಾತಂತ್ರ್ಯವಿಲ್ಲದ ಆ ರಾಷ್ಟ್ರದ ಬಗ್ಗೆ ಕಳ ಕಳಿಯುಳ್ಳವರಾಗಿ, ನಮ್ಮ ದೇಶದ ವಿರುದ್ಧ ನಡೆದುಕೊಳ್ಳುವುದಕ್ಕೆ ಮುಂದಾದರು.

"ಈ ಒಳಸಂಚಿನಲ್ಲಿ ಜ್ಯೂಲಿಯಸ್ ರೋಸೆನ್ ಬರ್ಗನೇ ಮುಖ್ಯ ಸೂತ್ರಧಾರನೆಂಬುದು, ಪುರಾವೆಗಳಿಂದ ಸ್ಪಷ್ಟವಾಗಿದೆ. ಆದರೆ ಇದರಲ್ಲಿ ಅವನ ಹೆಂಡತಿಯ ಪಾತ್ರವೂ ಕಡಿಮೆಯದಲ್ಲ. ಇಂಥ ಹೀನ ಕೆಲಸದಿಂದ ಗಂಡನನ್ನು ನಿವೃತ್ತಿಗೊಳಿಸುವುದಂತಿರಲಿ, ಆಕೆ ಅವನನ್ನು ಪ್ರೋತ್ಸಾಹಿಸಿದಳಲ್ಲದೆ, ಸಾದ್ಯಂತವಾಗಿ ನೆರವಾಗಿದ್ದಾಳೆ. ಆಕೆ ತಿಳಿಗೆಟ್ಟು ಈ ಕೆಲಸ ಮಾಡಿದವಳಲ್ಲ. ವಯಸ್ಸಿನಲ್ಲಿ ಗಂಡನಿಗಿಂತ ಮೂರು ವರ್ಷಕ್ಕೆ ಹಿರಿಯಳು. ಡೇವಿಡ್‌ನಿಂದ ಏಳು ವರ್ಷಕ್ಕೆ ದೊಡ್ಡವಳು. * ತನ್ನ ಈ ದುಷ್ಕೃತ್ಯದಿಂದ ತನ್ನ ಮಕ್ಕಳ ಗತಿಯೇನಾದೀತು ಎಂಬ ವಿಚಾರ ಗೊತ್ತಿದ್ದೂ ಅದನ್ನು ಗಮನಕ್ಕೆ ತಾರದೇ, ಈಕೆ ಈ ದುರಾಲೋಚನೆಯಲ್ಲಿ ಸಂಪೂರ್ಣ ಭಾಗಿಯಾಗಿದ್ದಾಳೆನ್ನುವುದು ನನಗೆ ಆಶ್ಚರ್ಯವನ್ನುಂಟುಮಾಡಿದೆ.

"ಆರೋಪಿಗಳೇ, ನಿಮ್ಮ ಅಪರಾಧವು ಕಗ್ಗೊಲೆಗಿಂತಲೂ ಮಿಗಿಲಾದದ್ದಾಗಿದೆ. ಕೊಲೆಯನ್ನು ಮಾಡುವವರು ತಮಗಾಗದ ಒಬ್ಬರನ್ನೋ, ಇಬ್ಬರನ್ನೋ ಮುಗಿಸುತ್ತಾರೆ. ಅದರಿಂದ ಮೃತನ ಕುಟುಂಬಕ್ಕೆ ದುಃಖವಾಗುತ್ತದೆ. ಕೊಲೆಗಡುಕನನ್ನು ಹಿಡಿದು ಶಿಕ್ಷಿಸಿದ ನಂತರ, ಆ ಪ್ರಕರಣ ಅಲ್ಲಿಗೆ ಮುಕ್ತಾಯವಾಗುತ್ತದೆ. ಆದರೆ ನೀವೋ, ನಮ್ಮ ದೇಶದ ಪರಮಾಣು ಬಾಂಬಿನ ನಿರ್ಮಾಣದ ಗೌಪ್ಯವನ್ನು ರಶಿಯನ್ನರಿಗೆ ಮಾರಿಕೊಂಡದ್ದರ ದೂರದ ಪರಿಣಾಮವಾಗಿ, ಸದ್ಯ ನಡೆದ ಕೋರಿಯನ್ ಯುದ್ಧದಲ್ಲಿ ೫೦ ಸಾವಿರ ಅಮೇರಿಕನ್ ಬಾಂಧವರ ಮರಣಕ್ಕೆ ಅಪ್ರತ್ಯಕ್ಷವಾಗಿ ಕಾರಣರಾಗಿದ್ದೀರಿ. ಇನ್ನೆಷ್ಟು ಜನ ಇದಕ್ಕೆ ತುತ್ತಾಗುವರೋ ಯಾರು ಬಲ್ಲರು?

"ನಿಮ್ಮಿಬ್ಬರ ಅಪರಾಧದ ಬಗ್ಗೆ ನನಗೆ ಸಂಪೂರ್ಣ ಖಾತ್ರಿಯಾಗಿದೆ. ನಿಮಗೆ ಸಹಾನುಭೂತಿಯನ್ನು ತೋರಿಸುವುದು ಶಕ್ಯವೇ ಎಂಬುದಾಗಿ, ದಾಖಲೆಗಳನ್ನು ಮತ್ತೊಮ್ಮೆ ತಿರುವಿ ಹಾಕಿದೆ. ನನ್ನ ವಿವೇಕವನ್ನೂ ಕೇಳಿಕೊಂಡೆ. ಉತ್ತರ ಸಿಗಲಿಲ್ಲ. ನಿಮ್ಮ ಅಪರಾಧದ ಗಂಭೀರ ಸ್ವರೂಪವನ್ನು ಮನದಂದರೆ ಕಿಂಚಿತ್ತಾದರೂ ಸಹಾನುಭೂತಿಗೆ ನೀವು ಅರ್ಹರಲ್ಲ. ನಿಮ್ಮ ಶಿಕ್ಷೆಯನ್ನು ಸೌಮ್ಯಗೊಳಿಸಹೋದೆನಾದರೆ, ನ್ಯಾಯದಾನದ ವಿಷಯದಲ್ಲಿ ನಾನು ಪಕ್ಷಪಾತಿಯಾದಂತಾಗುತ್ತದೆ. ನಾನು ನಿಮಗಿಬ್ಬರಿಗೂ ಈ ಮೂಲಕ ಮರಣದಂಡನೆಯನ್ನು ವಿಧಿಸಿರುತ್ತೇನೆ."

ಳ

೧೯೫೧ರ ಎಪ್ರಿಲ್ ತಿಂಗಳಲ್ಲಿ ಈ ತೀರ್ಪು ಹೇಳಲ್ಪಟ್ಟಿತು. ಮೇ ದಲ್ಲಿ ಜರುಗಬೇಕಾಗಿದ್ದ ಮರಣದಂಡನೆಯ ಶಿಕ್ಷೆಯು ಕೃತಿಯಲ್ಲಿ ಬರಲಿಲ್ಲ. ಆರೋಪಿಗಳು ಅಪೀಲು ಮಾಡಿಕೊಂಡರು. ಅದಾದ ಮೇಲೆ ಫೆಡರಲ್ (ಸುಪ್ರೀಮ್) ಕೋರ್ಟಿಗೂ ಹೋಯಿತು. ಕಾನೂನಿನ ಸೂಕ್ಷ್ಮ ಎಳೆಗಳನ್ನು ಎತ್ತಿಕೊಂಡು, ತಾಂತ್ರಿಕ ತಪ್ಪುತಡೆಗಳಿಂದಾದರೂ ಆಗಲಿ, ಕಾಫ್‌ಮನ್ನರ ತೀರ್ಪನ್ನು ಬದಲಿಸಲು ಆರೋಪಿಪರ ವಕೀಲರು ಸಾಕಷ್ಟು ಬುದ್ಧಿಮತ್ತೆಯನ್ನು ಪ್ರದರ್ಶಿಸಿದರು. ಆದರೂ ಅಮೇರಿಕೆಯ ಸುಪ್ರೀಮ್ ಕೋರ್ಟು ಕೆಳ ಕೋರ್ಟಿನ ತೀರ್ಪನ್ನು ಎತ್ತಿಹಿಡಿಯಿತು.

* ವಿಚಾರಣೆ ನಡೆದಾಗ ರೋಸೆನ್‌ಬರ್ಗನಿಗೆ ೩೨, ಎಥೆಲ್ಲಳಿಗೆ ೩೫, ಡೇವಿಡ್ಡನಿಗೆ ೨೮ ವಯಸ್ಸಾಗಿತ್ತು.

# 'ಅನಾಸಿನ್'

## ನಾಲ್ಕು ಔಷಧಗಳಿಂದ ಕೂಡಿದ

ನೋವನ್ನು ಗುಣಪಡಿಸುತ್ತದೆ

ನರಗಳನ್ನು ಶಾಂತಪಡಿಸುತ್ತದೆ

ನಿರುತ್ಸಾಹವನ್ನು ಹೋಗಲಾಡಿಸುತ್ತದೆ

ಜ್ವರವನ್ನು ಕಡಿಮೆಗೊಳಿಸುತ್ತದೆ

ಡಾಕ್ಟರರ ಸುರಕ್ಷಿತ ಔಷಧದಂತೆ ಶಾಸ್ತ್ರೀಯ ರೀತಿಯಲ್ಲಿ ಸಮ್ಮಿಲನವಾದ ನಾಲ್ಕು ಔಷಧಗಳಿಂದ ಕೂಡಿದ 'ಅನಾಸಿನ್' ನೋವನ್ನು ಸಂಪೂರ್ಣವಾಗಿ, ಅತಿ ಶೀಘ್ರವಾಗಿ ಗುಣಪಡಿಸುತ್ತದೆ. ಅನಾಸಿನ್ (1) ತಲೆ ನೋವು, ಶೀತ, ಜ್ವರ, ಹಲ್ಲು ನೋವು ಹಾಗೂ ಸ್ನಾಯುಗಳ ನೋವನ್ನು ಅಧಿಕ ಶೀಘ್ರವಾಗಿ ಉಪಶಮನಗೊಳಿಸುತ್ತದೆ; (2) ಗಾಬರಿಗೊಳಿಸುವ ನರಗಳಿಗೆ ಶಾಂತತೆಯನ್ನೀಯುತ್ತದೆ—ನೀವು ಸುಖವಾಗಿ, ಆರಾಮದಿಂದಿರುವಂತೆ ಮಾಡುತ್ತದೆ; (3) ನಿರುತ್ಸಾಹವನ್ನು ಹೋಗಲಾಡಿಸುತ್ತದೆ; (4) ಜ್ವರವನ್ನು ಕಡಿಮೆ ಮಾಡುತ್ತದೆ. ನಾಲ್ಕು ಔಷಧಗಳಿಂದ ಕೂಡಿರುವ ಅನಾಸಿನ್, ನೋವನ್ನು ಉಪಶಮನಗೊಳಿಸುವುದಕ್ಕೆ ಅಧಿಕ ಉತ್ತಮವಾಗಿದೆ. ಯಾವಾಗಲೂ ಮನೆಯಲ್ಲಿ 'ಅನಾಸಿನ್' ಇಟ್ಟುಕೊಳ್ಳಿರಿ.

● ಆರೋಗ್ಯಕರವಾಗಿರುವ ಸೆಲೋಫೇನ್ ಪ್ಯಾಕ್‌ನಲ್ಲಿ ಸೀಲ್‌ಮಾಡಿದ ಎರಡು ಬಿಲ್ಲೆಗಳೂ, ಭದ್ರವಾಗಿ ಪಿಲ್ಫರ್-ಪ್ರೂಫ್ ಪ್ಯಾಕಿಂಗ್‌ನಲ್ಲಿ ಮುಚ್ಚಲ್ಪಟ್ಟ ಸೀಸೆಗಳಲ್ಲಿ 32 ಬಿಲ್ಲೆಗಳೂ—ಮನೆಗಳಲ್ಲಿ ಉಪಯೋಗಿಸಲು ಅನುಕೂಲವಾಗುವಂತೆ—ದೊರೆಯುತ್ತವೆ.






## ಅನಾಸಿನ್ ಅಧಿಕ ಉತ್ತಮವಾಗಿದೆ

*Registered User:* GEOFFREY MANNERS & CO. LIMITED

KAN. Z-43

ಆದರೆ ಈ ವಾದವು ಕೋರ್ಟಿನ ಆವರಣ ವನ್ನು ಬಿಟ್ಟು ಜನತೆಯಲ್ಲಿ ಪ್ರಚಂಡವಾಗಿ ಹಬ್ಬಿತು. ಒಂದೆಡೆಗೆ ಕೋರಿಯಾ ರಣರಂಗದಲ್ಲಿ ರಶಿಯವು ಪ್ರಚ್ಛನ್ನವಾಗಿ ಶತ್ರುರಾಷ್ಟ್ರವಾಗಿದ್ದು ಕೊಂಡು, ಅಮೇರಿಕನ್ನರ ಜೀವ ನಷ್ಟವಾಗುತ್ತಿದ್ದಾಗ, ರೋಸೆನ್‌ಬರ್ಗರನ್ನು ಮರಣದಂಡನೆಗೆ ಗುರಿ ಮಾಡಿದ್ದೇ ಸರಿ ಎಂದು ತಿಳಿದು ತಮ್ಮಷ್ಟಕ್ಕೆ ಇದ್ದ ಸಾಮಾನ್ಯ ಅಮೇರಿಕನ್ ಜನತೆ, ಬಹು ಸಂಖ್ಯೆಯಲ್ಲಿದ್ದಿತು. ಇನ್ನೊಂದೆಡೆ ನಿರಪರಾಧಿಗಳಾದ ಈ ರೋಸೆನ್‌ಬರ್ಗರನ್ನು ಉಳಿಸೋಣ, ಆ ಬಗ್ಗೆ ಬೊಬ್ಬಾಟ ಮಾಡೋಣ ಎಂದು ಟೊಂಕ ಕಟ್ಟಿ ನಿಂತ ಕಮ್ಯುನಿಸ್ಟ್ ಪಕ್ಷಪಾತಿಗಳ ಗುಂಪೂ ಇದ್ದಿತು. ರೋಸೆನ್‌ಬರ್ಗ್ ನ್ಯಾಯ ಸಾಧನೆಗಾಗಿ ರಾಷ್ಟ್ರೀಯ ಕಮಿಟಿಯೊಂದು ಸ್ಥಾಪಿತವಾಯಿತು! ಗಿರಣಿ ಹಾಗೂ ಕಾರಖಾನೆಗಳಲ್ಲಿ ಪಿಕೆಟಿಂಗ್, ಹರತಾಳ ನಡೆದವು. ಬೀದಿಗಳಲ್ಲಿ ಮೆರವಣಿಗೆಗಳು ಹೊರಟವು. ಸಾವಿರಾರು ಜನರ ಸಹಿ ಸಂಗ್ರಹ ನಡೆದು, ಅಮೇರಿಕದ ಶ್ವೇತಭವನದತನಕ ಮೆರವಣಿಗೆಗಳೊಂದಿಗೆ ಹೋಗಿ ಮನವಿಯನ್ನರ್ಪಿಸಿದ್ದಾಯಿತು. ರೋಸೆನ್‌ಬರ್ಗರನ್ನಿಟ್ಟಿದ್ದ ಸೆರೆ ಮನೆಗೆ ಮಹಿಳೆಯರ ಹಾಗೂ ಎಳೆಯ ಮಕ್ಕಳ ಯಾತ್ರೆ ಹೊರಟು, ಸಹಾನುಭೂತಿಪರವಾದ ಘೋಷಗಳನ್ನು ಮಾಡಿ ಹಿಂತಿರುಗಿತು.

ಈ ಚಳುವಳಿಯು ಅಮೇರಿಕಕ್ಕೆ ಮಾತ್ರ ಸೀಮಿತವಾಗಿರದೇ ಅಂತಾರಾಷ್ಟ್ರೀಯ ಸ್ವರೂಪ ವನ್ನು ತಾಳಿತು. ಫ್ರೆಂಚ್ ಕಮ್ಯುನಿಸ್ಟರು ಉಗ್ರ ಪ್ರತಿಭಟನೆಯನ್ನು ಕಳಿಸಿದರು. ತಮ್ಮ ನಾಡಿನಲ್ಲಿ ಗಲಭೆಯನ್ನು ಮಾಡಿದರು. ಕಮ್ಯುನಿಸ್ಟ್ ಚೀನದಿಂದಂತೂ ಹತ್ತಾರು ಮನವಿಗಳೂ, ಹೆದರಿಕೆಯ ಪತ್ರಗಳೂ ಅಧಿಕೃತವಾಗಿಯೆ ಹೋದುವು. ದೂರದ ಆಸ್ಟ್ರೇಲಿಯಾದಿಂದ ಕೂಡಾ ರೋಸೆನ್‌ಬರ್ಗರಿಗೆ ವಿಧಿಸಿದ ಶಿಕ್ಷೆ ಅತ್ಯಂತ ಕ್ರೂರವಾದುದೆಂಬಾಶಯದ ಪ್ರತಿಭಟನೆ ಕೇಳಬಂತು.

ಇತ್ತ ಆಪಾದಿತರ ವಕೀಲರು ಮತ್ತೂ ಒಮ್ಮೆ ಈ ಕೇಸಿನ ವಿಚಾರವಾಗಬೇಕೆಂದು, ಅರ್ಜಿ ಕೊಟ್ಟರು. ಅರ್ಜಿ ಕೊಟ್ಟಾಗ ಅದರ ಜೊತೆಗೆ, ರೋಸೆನ್‌ಬರ್ಗರ ಶಿಕ್ಷೆಯನ್ನು ಕಡಿಮೆ ಮಾಡಬೇಕೆಂದು, ೫೦ ಸಾವಿರ ಜನರು ಸಹಿ ಮಾಡಿದ ಅರ್ಜಿಯನ್ನೂ ಇಡಲಾಗಿತ್ತು!

ಹೊಸ ಅರ್ಜಿಗಳ ವಾದದ ಸಾರವೆಂದರೆ "ರೋಸೆನ್‌ಬರ್ಗರ ಅಪರಾಧದ ಬಗ್ಗೆ, ತೀರ್ಪಿನ ಮುಂಚೆಯೇ ಅಧಿಕಾರಿಗಳು ಅದರ ಬೊಬ್ಬಾಟ ಮಾಡಿ ಜನತೆಯಲ್ಲಿ ತಪ್ಪು ಭಾವನೆ ಹರಡಿದ್ದರಿಂದ ನ್ಯಾಯಾಧೀಶರಿಗೆ ನಿಷ್ಪಕ್ಷಪಾತ ನಿರ್ಣಯ ವನ್ನು ಕೊಡುವುದು ಸಾಧ್ಯವಾಗಿಲ್ಲ. ಪರಮಾಣು ಬಾಂಬಿನ ಗುಟ್ಟನ್ನು ರೋಸೆನ್‌ಬರ್ಗರು ಬಿಟ್ಟುಕೊಟ್ಟರೆಂದು ಹೇಳಲಾಗುವ ಕಾಲದಲ್ಲಿ ರಶಿಯಾ ಅಮೇರಿಕದ ಮಿತ್ರರಾಷ್ಟ್ರವಾಗಿತ್ತು. ಹೀಗಾಗಿ ಅಮೇರಿಕದ ಸಂರಕ್ಷಣಕ್ಕೆ ಯಾವ ಧಕ್ಕೆಯೂ ಉಂಟಾಗಿಲ್ಲ. ಈಗ ಅದು ಶತ್ರುರಾಷ್ಟ್ರವಾಗಿದೆಯೆಂಬ ಕಾರಣದಿಂದ ಅಪರಾಧವನ್ನು ಆ ರೀತಿ ಎಳೆಯುವುದು ಸರಿಯಲ್ಲ. ರೋಸೆನ್‌ಬರ್ಗರ ಪರವಾಗಿ ಸಾರ್ವಜನಿಕ ಚಳವಳಿ ನಡೆದದ್ದಂತೂ ಸರಿಯೆ. ಅದನ್ನು ಬಿಟ್ಟರೂ ದೇಶ ವಿದೇಶಗಳ ಪ್ರತಿಷ್ಠಿತ ವ್ಯಕ್ತಿಗಳೂ ವಿಜ್ಞಾನಿಗಳೂ ರಾಜಕಾರಣಿಗಳೂ ಈ ಶಿಕ್ಷೆ ಹೆಚ್ಚಾಯಿತು ಎಂಬ ಹೇಳಿಕೆಗಳನ್ನು ಇತ್ತಿದ್ದಾರೆ. ಮಿಲಿಟರಿ ಗೌಪ್ಯ ವನ್ನು ಹೊರಗೆಡಹಿದ ಆರೋಪವನ್ನು ಹೊತ್ತ ಫುಕ್ಸ್, ಗೋಲ್ಡ್, ಗ್ರೀನ್‌ಗ್ಲಾಸ್, ರೋಸ್, ಸ್ಯಾಲಿ ಮುಂತಾದವರಿಗೆ ಸೆರೆಮನೆವಾಸವಾಯ್ತು. ರಥ್ ಗ್ರೀನ್‌ಗ್ಲಾಸಳಂತಹರ ಮೇಲೆ ಅಪಾದನೆ ಯನ್ನೆ ಹೊರಿಸಲಿಲ್ಲ. ಅಂಥದು ರೋಸೆನ್‌ಬರ್ಗರಿಗೆ ಏಕೆ ಮರಣ ದಂಡನೆ? ಕಾರಣ ಅವರ ಶಿಕ್ಷೆಯನ್ನು ಕಡಿಮೆ ಮಾಡಬೇಕು.?"

ಕಾಫಮನ್ ಪುನಃ ಅದರ ವಿಚಾರಣೆಮಾಡಿದ. ಮತ್ತು ಜನೆವರಿ ೧೯೫೩ ರಲ್ಲಿ ಅದಕ್ಕೆಮತ್ತೊಮ್ಮೆ

ತೀರ್ಪನ್ನು ಕೊಡುವಾಗ, ಫಿರ್ಯಾದಿಯ ಎಲ್ಲ ಮಾತುಗಳಿಗೆ ಉತ್ತರಿಸಿದುದಲ್ಲದೇ ೨೦ ತಿಂಗಳ ಅವಧಿಯಲ್ಲಿ ಮೂರು ನಾಲ್ಕು ನ್ಯಾಯಾಸ್ಥಾನಗಳು ಅವರ ಕೇಸಿನ ವಿಚಾರಣೆ ನಡೆಸಿದ್ದು, ಎಲ್ಲಿಯೂ ಅವರು ತಪ್ಪಿತಸ್ಥರಲ್ಲ ಎಂಬ ವಾದವು ಕೇಳಬರಲಿಲ್ಲ. ಅವರ ತಪ್ಪು ದೊಡ್ಡದಲ್ಲ ಎಂದು ಹೇಳುವಂತೆ ಯಾವ ಹೊಸ ಪುರಾವೆಯೂ ಮುಂದೆ ಬಂದಿಲ್ಲ. ಈ ಒಂದೂವರೆ ವರ್ಷದ ಅವಧಿಯಲ್ಲಿ, ತಮ್ಮ ಕೃತಿಗಾಗಿ ಅವರು ಪಶ್ಚಾತ್ತಾಪಪಟ್ಟ ಹಾಗೆ ಕಾಣೆ. ಅವರ ಕಮ್ಯುನಿಸ್ಟ್ ನಿಷ್ಠೆಯು ಇಷ್ಟೊಂದು ಆಳವಾಗಿದೆಯಲ್ಲ, ಅವರು ಸ್ವಲ್ಪವೂ ತಮ್ಮ ಬಾಯಿ ಬಿಚ್ಚಲಿಲ್ಲ. ಅವರನ್ನು ಬಿಡುಗಡೆ ಮಾಡಿದುದಾದರೆ ಪುನಃ ಇದೇ ಕಾಯಕವನ್ನು ನಡಸುವವರೇ ಆಗಿದ್ದಾರೆ. ಇತರರ ಸ್ಥಿತಿ ಹಾಗಿರಲಿಲ್ಲ . . .ಈ ಹೊಸ ಅರ್ಜಿಯನ್ನು ಬರ್‌ಖಾಸ್ತು ಮಾಡಿದ್ದೇನೆ."

ಮತ್ತೆ ಶ್ವೇತಭವನದ ಮುಂದೆ ಪಿಕೆಟಿಂಗ್, ನಗರದ ಕೂಟಗಳಲ್ಲಿ ಸಭೆಗಳು, ಬೀದಿಗಳಲ್ಲಿ ಮೆರವಣಿಗೆಗಳು ಹೊರಟವು. ಇತ್ತ ಕಾಫ್‌ಮನ್ನರ ತೀರ್ಪು ಸರಿಯಾದುದೆಂಬ ಧ್ವನಿಯೂ ಈ ಬಾರಿ ಗಟ್ಟಿಯಾಗಿ ಕೇಳಬಂತು. ಸುಪ್ರೀಮ ಕೋರ್ಟಿನ ನಿರ್ಣಯದ ನಂತರ, ರೋಸೆನ್‌ಬರ್ಗರಿಗೆ ವಿಧಿಸಿದ ಶಿಕ್ಷೆಯನ್ನು ಕಡಿಮೆ ಮಾಡಬೇಕೆಂದು ಅಮೇರಿಕೆಯ ಅಧ್ಯಕ್ಷರಿಗೆ ಮನವಿ ಮಾಡಲಾಯಿತು. ಈ ಅರ್ಜಿಯನ್ನು ಸಲ್ಲಿಸುವುದಕ್ಕೆಂದು ವಕೀಲರು, ಪಾದ್ರಿಗಳು ಇತರ ಪ್ರತಿಷ್ಠಿತ ಜನರ ಕಡೆಗೆ ಹೋಗಿ, ಶಕ್ಯವಿದ್ದರೆ ಒತ್ತಾಯಿಸಿ ಅವರಿಂದ ಸಹಿ ಪಡೆಯುವ ಸಂಘಟಿತ ಪ್ರಯತ್ನವೂ ನಡೆಯಿತು !

ಆವಾಗ ಟ್ರೂಮನ್ ಅಧ್ಯಕ್ಷರಾಗಿದ್ದರು. ಆದರೆ ಅವರ ಅಧಿಕಾರದ ಅವಧಿ ೧೦-೧೫ ದಿನ ಮಾತ್ರ ಉಳಿದಿದ್ದಿತಾದ್ದರಿಂದ ಈ ದಯಾದಾನದ ಅರ್ಜಿಯ ವಿಚಾರಣೆಯನ್ನು ಅವರು ಮಾಡಹೋಗಲಿಲ್ಲ.

ಮುಂದೆ ಐಸೆನ್‌ಹಾವರರು ಫೆಬ್ರುವರಿ ತಿಂಗಳಲ್ಲಿ ಇದಕ್ಕೆ ಉತ್ತರವನ್ನು ಕೊಟ್ಟರು. ಆತ ಹೇಳಿಕೇಳಿ ಮಿಲಿಟರಿ ಮನುಷ್ಯ. ಅಮೇರಿಕೆಯ ಸಾಮಾನ್ಯ ಜನತೆ, ಹಾಗೂ ಪತ್ರಿಕೆಗಳು ರೋಸೆನ್‌ಬರ್ಗ ಮರಣದಂಡನೆಯ ಬಗ್ಗೆ ಅನುಕೂಲಾಭಿಪ್ರಾಯವುಳ್ಳವರಿರುವಾಗ, ರೋಸೆನ್‌ಬರ್ಗರಿಗೆ ಸಹಾನುಭೂತಿಯನ್ನು ತೋರಿಸುವ ಮನೋಭೂಮಿಕೆಯನ್ನು ಅವರು ಇಟ್ಟುಕೊಳ್ಳಲಿಲ್ಲ. ಕ್ಷಮಾದಾನದ ಅರ್ಜಿಯನ್ನು ತಿರಸ್ಕರಿಸಿದರು.

ಆದರೂ ಚಳುವಳಿ ನಿಲ್ಲಲಿಲ್ಲ. ಇಷ್ಟೇ ಅಲ್ಲ, ಹೆಚ್ಚೆಚ್ಚಾಗಿ ಹಬ್ಬಿತು. ಕಾನೂನಿನ ರೀತ್ಯಾ ಹೊಸ ಹೊಸ ಮುದ್ದೆಗಳನ್ನು ಎತ್ತಿಕೊಂಡು ಮತ್ತೆ ಕೋರ್ಟಿಗೆ ಅರ್ಜಿಗಳನ್ನು ಸಾದರಪಡಿಸಲಾಯಿತು. ಉದಾಹರಣೆಗೆ:- ೧೯೧೭ರಲ್ಲಿ ಪಾಸಾದ ಎಸ್ಪಿಯಾನೇಜ್ ಆ್ಯಕ್ಟ್ ಪ್ರಕಾರ ಗೂಢಚಾರತನವು ಯುದ್ಧಕಾಲದಲ್ಲಿನಡೆದರೆ ಮಾತ್ರ ಮರಣದಂಡನೆ, ಇತರ ಕಾಲದಲ್ಲಾದರೆ ೩೦ ವರ್ಷದ ಜೇಲುವಾಸ ಇದೆ. ಆದ್ದರಿಂದ ಮರಣದಂಡನೆಯನ್ನು ರದ್ದುಪಡಿಸಿ, ೨೦ ವರ್ಷಕ್ಕೆ ಆ ಶಿಕ್ಷೆಯನ್ನು ಇಳಿಸಬೇಕೆಂದು ಕೇಳಿಕೊಳ್ಳಲಾಯ್ತು ! ಕೋರ್ಟು ಅದಕ್ಕೆ ಒಪ್ಪಲಿಲ್ಲ. ಅಲ್ಲಿಂದ ಹೊಸದೊಂದು ವಾದ ! ೧೯೪೬ ರಲ್ಲಿ ಪರಮಾಣು ಶಕ್ತಿಯ ವಿಷಯದ ಕಾನೂನೊಂದು ಪಾಸು ಮಾಡಿದ್ದರಿಂದ ಅಷ್ಟರ ಮಟ್ಟಿಗೆ ೧೯೧೭ ರ ಎಸ್ಪಿಯಾನೇಜ್ ಆ್ಯಕ್ಟ್ ರದ್ದಾದಂತೆಯೇ ಸರಿ. ೧೯೧೭ ರ ಕಾನೂನಿನ ಪ್ರಕಾರ ಈ ವಿಚಾರಣೆ ನಡೆದದ್ದೇ ತಪ್ಪು ಎಂದು ಹೇಳಲಾಯಿತು. ಕೋರ್ಟು ಅದಕ್ಕೆ ಸಮರ್ಪಕ ಉತ್ತರವನ್ನು ಕೊಟ್ಟು ಅದನ್ನೂ ಕಿತ್ತಿ ಹಾಕಿತು.

ಇತರ ಅಪರಾಧಗಳಿಗಿಂತ ಈ ಬೇಹಿಗತನದಲ್ಲಿ ಹೆಚ್ಚಿನ ಗೌಪ್ಯಗಳನ್ನು ಇತರ ಅಂಥ ವ್ಯಕ್ತಿಗಳನ್ನು ತಿಳಿದುಕೊಳ್ಳುವ ವಿಚಾರವು ಸರಕಾರಕ್ಕೆ ಅಗತ್ಯವಿರುತ್ತದಲ್ಲದೇ, ಕೈಗೆ ಸಿಕ್ಕವರನ್ನು

ಸಂಪೂರ್ಣವಾಗಿ ಶಿಕ್ಷಿಸುವುದೊಂದೇ ಅಲ್ಲ. ಮರಣದಂಡನೆಯ ಹೆದರಿಕೆ ಇದ್ದಾಗ್ಯೂ ರೋಸೆನ್‌ಬರ್ಗ್ ದಂಪತಿಗಳು ಬಾಯಿಬಿಟ್ಟಿರಲಿಲ್ಲ. "ಈಗಾದರೂ ಈ ಬೇಹಿಗತನದಲ್ಲಿ ತೊಡಗಿದ ಇತರರ ಹೆಸರುಗಳನ್ನೂ ತಮ್ಮ ಕಾಯಕದ ವಿವರಗಳನ್ನೂ ನೀವು ಕೊಟ್ಟದ್ದಾದರೆ ಮರಣ ದಂಡನೆಯನ್ನು ರದ್ದುಗೊಳಿಸಿ, ಅಲ್ಪ ಶಿಕ್ಷೆಯ ಮೇಲೆ ಮುಗಿಸುತ್ತೇವೆ"—ಎಂಬುದಾಗಿ ಅಧಿಕಾರಿಗಳು ಒತ್ತಾಯಿಸಿ ನೋಡಿದರು.

ರೋಸೆನ್‌ಬರ್ಗ್‌ರ ವಕೀಲರಿಗೆ ಅಷ್ಟು ವಿಷಯ ಸಾಕಾಯಿತು. ನ್ಯಾಯದಾನದಲ್ಲಿ ಕಾರ್ಯಾಂಗದ ಹಸ್ತಕ್ಷೇಪವೆಂತಿದೆಯೆಂಬುದನ್ನೂ ಸರಕಾರಕ್ಕೆ ರೋಸೆನ್‌ಬರ್ಗರ ಅಪರಾಧದ ಬಗ್ಗೆ ತಮಗೆಯೆ ಖಾತ್ರಿಯಿಲ್ಲವೆಂದೂ ಪತ್ರಿಕೆಗಳಲ್ಲಿ ಹೇಳಿಕೆ ಇತ್ತರು. ಅಷ್ಟೇ ಅಲ್ಲದೆ, ರೋಸೆನ್‌ಬರ್ಗ್‌ರಿಂದ ಕೂಡ, ಈ ಕೆಳಗಿನ ಆಶಯದ ಹೇಳಿಕೆಯನ್ನು ಕೊಡಿಸಿದರು.

"ನಮ್ಮ ನಿರಪರಾಧಿತ್ವದ ಸತ್ಯ ಸಂಗತಿಯನ್ನು ಅಲ್ಲಗಳೆಯಬೇಕೆಂದು ಹೇಳುವಲ್ಲಿ, ಸರಕಾರವು ನಮ್ಮ ಅಪರಾಧದ ವಿಷಯವಾಗಿ ತನ್ನ ಆ ನಿರ್ಧಾರವನ್ನು ವ್ಯಕ್ತಪಡಿಸಿದೆ. ಮಹಾ ಮೋಸಗಾರಿಕೆಯ ಹಾಗೂ ಅಮಾನುಷವಾದ ಈ ತೀರ್ಪಿನ ಕರಾಳ ಸ್ವರೂಪವನ್ನು ಹೋಗಲಾಡಿಸಲು ನಾವು ನೆರವಾಗಲಿಚ್ಛಿಸುವುದಿಲ್ಲ. ಸಾವಿನ ಅಂಜಿಕೆಯಿದ್ದರೂ ಕೂಡ, ನಾವು ನಿರಪರಾಧಿಗಳೆಂಬ ಸತ್ಯ ಸಂಗತಿಗೆ ಪ್ರತಿಯಾಗಿ ಇನ್ನೇನನ್ನೂ ಹೇಳಲಾರೆವು. ನಮ್ಮ ತಲೆ ಹೋಯಿತ್ತಾದರೆ ಆ ಘೋರ ಪಾಪದ ಹೊಣೆಯು ಅಮೇರಿಕನ್ ಸರಕಾರದ ಮೇಲೆಯೇ ಇದೆ."

ಮರಣ ದಂಡನೆಯ ದಿನವು ಸಮೀಪಿಸಿದಂತೆ ಚಳುವಳಿಯು ಉಗ್ರ ಸ್ವರೂಪವನ್ನುತಾಳಿತು. ಒಂದು ದಿನವಂತೂ ಶ್ವೇತಭವನದ ಮುಂದೆ ಎಂಟುಸಾವಿರ ಜನ (ಅಮೇರಿಕೆಯಲ್ಲಿ ಇದು ಬಹಳವಾಯಿತು) ಸೇರಿದ್ದರಂತೆ. ಎಲ್ಲ ದೊಡ್ಡ ಮೆರವಣಿಗೆಗಳಲ್ಲಿ ರೋಸೆನ್‌ಬರ್ಗ್‌ನ ತಾಯಿಯನ್ನೂ ಮಕ್ಕಳನ್ನೂ ಮೇಲೆತ್ತಿಕೊಂಡು ನಡೆಯುತ್ತಿದ್ದರು. ಪರರಾಷ್ಟ್ರಗಳಲ್ಲಿಯೂ ಗಲಭೆಗಳು ಮೊದಲಿಗಿಂತ ಹೆಚ್ಚಿದುವು. ಅಮೇರಿಕನ್ ಸರಕಾರವು ಕೊಲೆಗಡುಕರ ಸರಕಾರವಾಗಿದೆಯೆಂದು ಸಾರಲಾಯಿತು. ಇತರ ಕಡೆಗಿರುವ ಅಮೇರಿಕನ್ ರಾಯಭಾರೀ ಕಚೇರಿಗಳನ್ನು ಮುಚ್ಚಲಾಯಿತು. ಇಂಗ್ಲಂಡಿನ ಡೇಲಿ ವರ್ಕರ್ ಪತ್ರಿಕೆಯು ಐದು ಇಂಚು ಎತ್ತರದ, ದಪ್ಪಕ್ಷರಗಳಲ್ಲಿ "ಅಮೇರಿಕನ್ ಸರಕಾರದಿಂದ ರೋಸೆನ್‌ಬರ್ಗ್‌ರ ಕೊಲೆ" ಎಂಬ ಶೀರ್ಷಿಕೆಯನ್ನು ಪ್ರಕಟಿಸಿತು. ಇತ್ತ ಅಮೇರಿ

THE
SADVAIDYASALA
(PRIVATE) LTD
NANJANGUD



ಕನ್ ಸರಕಾರಕ್ಕೂ ಈ ಮರಣದಂಡನೆಯು ಒಟ್ಟಿನ ಕಮ್ಯುನಿಸ್ಟ್ ಚಳುವಳಿಗೆ ಪುರಸ್ಕಾರವನ್ನು ಕೊಟ್ಟಂತಾದೀತೆಂಬ ಭಯವಿತ್ತು. ಫ್ರಾನ್ಸಿನಲ್ಲಿದ್ದ ಅಮೇರಿಕನ್ ರಾಯಭಾರಿಯು, ಅಮೇರಿಕೆಯ ವಿರುದ್ಧ ಜಾಗತಿಕ ಅಭಿಪ್ರಾಯವನ್ನು ಉದ್ರೇಕಗೊಳಿಸುವಲ್ಲಿ ಈ ಮರಣದಂಡನೆಯು ಕಾರಣವಾಗಬಹುದೆಂದು ತನ್ನ ಸರಕಾರಕ್ಕೆ ಎಚ್ಚರವನ್ನು ಹೇಳಿದುದಾಗಿ ಪತ್ರಿಕೆಗಳಲ್ಲಿ ವರದಿಯಾಯಿತು!

೧೯೫೩ರ ಜೂನ್ ೧೯ ರಂದು ರೋಸೆನ್‌ಬರ್ಗ ದಂಪತಿಗಳಿಗೆ ವಿದ್ಯುತ್ ಕುರ್ಚಿಯಲ್ಲಿ ಕುಳ್ಳಿರಿಸಿ ಮರಣದಂಡನೆ ವಿಧಿಸಲ್ಪಟ್ಟಿತು. ಅತ್ಯಂತ ಶಾಂತ ಮುಖಭಾವದಿಂದ ಆ ಶಿಕ್ಷೆಯನ್ನು ಅವರು ಅನುಭವಿಸಿದರು. ಅವರು ಯಾವ ಧರ್ಮವನ್ನು ಅಲ್ಲಗಳೆದಿದ್ದರೋ ಆ ಯಹೂದ್ಯ ಧರ್ಮದ ರಬ್ಬಿಯೊಬ್ಬ ಆಗ ಪ್ರಾರ್ಥನೆಯನ್ನೋದಿದ. ಮೊದಲು ಗಂಡ ಬಂದು ಕುರ್ಚಿಯಲ್ಲಿ ಕುಳಿತ. ೨೦೦೦ ವೋಲ್ಟಿನ ಮೂರು ವಿದ್ಯುತ್ ಆಘಾತ ಕೊಟ್ಟೊಡನೆ ಅವನ ಪ್ರಾಣಪಕ್ಷಿ ಹಾರಿತು. ಹೆಂಡತಿ ಇನ್ನೂ ಗಟ್ಟಿಯಾಗಿದ್ದಳು. ಮೂರು ಆಘಾತಗಳ ನಂತರ ಇನ್ನೂ ಅವಳ ಹೃದಯ ಬಡಿಯುತ್ತಿದ್ದುದರಿಂದ ಮತ್ತೆರಡು ಆಘಾತಗಳನ್ನಿತ್ತರು. ಗೂಢಚಾರತನದ ಆಪಾದನೆಯ ಮೇಲೆ ಸಿವಿಲ್ ನ್ಯಾಯಾಲಯದ ಮರಣದಂಡನೆಗೆ ಗುರಿಯಾದವರಲ್ಲಿ, ಇಡೀ ಅಮೇರಿಕದ ಇತಿಹಾಸದಲ್ಲಿ ಅವರೇ ಮೊದಲಿಗರು. ಇಂದಿನ ಮಟ್ಟಿಗೆ ಅವರೇ ಕೊನೆಯವರು. ಒಟ್ಟೀ ಮರಣದಂಡನೆಗೆ ಗುರಿಪಡಿಸಲಾದ ಅಮೇರಿಕನ್ ಹೆಣ್ಣುಮಕ್ಕಳಲ್ಲಿ ಎಥೆಲ್ ರೋಸೆನ್‌ಬರ್ಗ್ ಎರಡನೆಯವಳಾಗಿದ್ದಾಳೆ.

ಮೋಜೆಂದರೆ ಅವರು ಗಲ್ಲಿಗೇರಿಸಲ್ಪಟ್ಟ ಅನಂತರ ಅಮೇರಿಕದಲ್ಲಿ ಯಾವ ವಿಶೇಷ ಗಲಭೆಯೂ ಆಗಲಿಲ್ಲ!

ಏನಿದ್ದರೂ ರೋಸೆನ್‌ಬರ್ಗ್ ದಂಪತಿಗಳ ಪ್ರಕರಣದಲ್ಲಿ ಕೆಲವೊಂದು ಅಂಶಗಳು ಹಾಗೇ ಉಳಿದುಕೊಂಡಿವೆ. ಅವರು ಗೂಢಚಾರರಾಗಿ ಕೆಲಸ ಮಾಡುತ್ತಿದ್ದರೆಂಬುದನ್ನು ಯಾರೂ ಅಲ್ಲಗಳೆಯುವುದಿಲ್ಲ. ಆದರೆ ಕಾನೂನಿನ ರೀತ್ಯಾ ಅದಕ್ಕೆ ಶಿಕ್ಷಿಸಬೇಕಾದರೆ ಪುರಾವೆಗಳು ಬೇಕು. ಇತರರ ಹೇಳಿಕೆಗಳನ್ನು ಬಿಟ್ಟರೆ ರೋಸೆನ್‌ಬರ್ಗರ ಈ ಕೆಲಸದ ಬಗ್ಗೆ ಪುರಾವೆಗಳೆಲ್ಲಿದ್ದುವು? ಇಷ್ಟಕ್ಕೂ ಅವರು ಗುಟ್ಟಿನ ಮಾಹಿತಿಯನ್ನು ಪೂರೈಸಿದ ಕಾಲಕ್ಕೆ ರಶಿಯಾ ಮಿತ್ರರಾಷ್ಟ್ರವಾಗಿತ್ತೆಂಬುದು ಸುಳ್ಳಲ್ಲ. ರಶಿಯಾ ತತ್ವತಃ ಅಮೇರಿಕದ ವಿರೋಧೀ ರಾಷ್ಟ್ರವಾಗಿದ್ದರೂ ಇಂದಿಗೂ ಶತ್ರು ರಾಷ್ಟ್ರವಲ್ಲ. ೧೯೧೭ ರ ಕಾನೂನನ್ನು ಗೆರೆಕೊರೆದು ಅನ್ವಯಿಸುವುದಾದರೆ, ಅವರನ್ನು ಶಿಕ್ಷಿಸುವುದು ಅಷ್ಟು ಸಮಂಜಸವೆನಿಸಬಹುದೆ?

ಕಾನೂನಿನ ದೃಷ್ಟಿಯಿಂದ ಈ ಸಂದೇಹಗಳಾದರೆ ಮಾನವೀಯತೆಯ ಒಂದು ವಿಚಾರವೂ ಇದರಲ್ಲಿದೆ. ಫುಕ್ಸ್, ಗ್ರೀನ್‌ಗ್ಲಾಸ್ ಇವರ ಅಪರಾಧವೂ ಹೆಚ್ಚಿನದೇ ಅಲ್ಲವೆ? ಅವರು ಒಪ್ಪಿಕೊಂಡರೆಂದು ಅವರಿಗೆ ಜೈಲುವಾಸವಾಯಿತು. ರೋಸೆನ್‌ಬರ್ಗರು ಒಪ್ಪಿಕೊಳ್ಳಲಿಲ್ಲವೆಂದು ಮರಣದಂಡನೆಯೆ? ಇತರರಾರಿಗೂ ಈ ಅಂತಿಮ ಶಿಕ್ಷೆ ಇಲ್ಲದಾಗ ಇವರಿಗೇ ಏಕೆ ಮರಣದಂಡನೆ? ರೋಸೆನ್‌ಬರ್ಗರಿಗೂ ದೀರ್ಘಾವಧಿ ಸೆರೆಮನೆವಾಸವನ್ನು ವಿಧಿಸಿದ್ದರೆ ಅಮೇರಿಕವು ಇಷ್ಟು ಕಟುವಾದ ಟೀಕೆಗೆ ಗುರಿಯಾಗುತ್ತಿರಲಿಲ್ಲವೇನೊ.

ಮರಣದಂಡನೆಗೆ ಗುರಿಪಡಿಸಿ, ಸಾಮಾನ್ಯ ವ್ಯಕ್ತಿಗಳಾಗಿದ್ದ ರೋಸೆನ್‌ಬರ್ಗರನ್ನು ಜಾಗತಿಕ ಹುತಾತ್ಮರನ್ನಾಗಿ ಮಾಡಿದುದೇಕೆ?

ಆ ಘಟನೆ ನಡೆದು ಎಂಟು ವರ್ಷಗಳು ಸಂದರೂ ಈ ಕೆಲವೊಂದು ಅಂಶಗಳು ಸಂಶಯಗಳಾಗೇ ಉಳಿದಿವೆ. ಮುಂದೂ ಪ್ರಶ್ನಾರ್ಥಕಗಳಾಗಿ ಉಳಿಯುತ್ತವೆ. *

# ಕ್ರಿಸ್ತ ಭಾರತಕ್ಕೆ ಬಂದಿರಲಿಲ್ಲ

"ಕಸ್ತೂರಿ" ಯ ಜನೆವರಿ ೧೯೬೧ ಸಂಚಿಕೆಯಲ್ಲಿ "ಯೇಸು ಕ್ರಿಸ್ತ ಭಾರತಕ್ಕೆ ಬಂದಿದ್ದನೆ?" ಎಂಬ ಲೇಖ ಪ್ರಕಟವಾಗಿದೆ. ಅದರಲ್ಲಿರುವ ವಾದಗಳೆಲ್ಲ ತಪ್ಪಾಗಿವೆ.

೧. ದಿವ್ಯ ಜೇಸುನಾಥರು ೧೨ ರಿಂದ ೩೦ ನೇ ವಯಸ್ಸಿನ ವರೆಗೆ ಎಲ್ಲಿ ವಾಸಿಸುತ್ತಿದ್ದರೆಂಬುದು ತಿಳಿದಿಲ್ಲವೆಂಬುದು ಸರಿಯಲ್ಲ. ಬೈಬಲ್ಲಿನ "ಹೊಸ ಒಡಂಬಡಿಕೆ"ಯ ಮಾರ್ಕ್ ೬ನೇ ಅಧ್ಯಾಯ ೨-೩ ನೇ ವಚನಗಳನ್ನೋದಿದರೆ ಅವರು ನಜರೇತಿನಲ್ಲೇ ವಾಸಿಸುತ್ತಿದ್ದರೆಂಬುದು ರುಜುವಾಗುತ್ತದೆ. ಆದ್ದರಿಂದ ಅವರು ಹಿಮಾಲಯಕ್ಕೆ ಬಂದು ವಾಸವಾಗಿರಲಿಲ್ಲ.

೨. ಜೇಸುನಾಥರ ಬಗ್ಗೆ ಈ ಕಟ್ಟುಕಥೆಯನ್ನು ಕಟ್ಟಿದವರು ೧೮೩೫-೧೯೦೮ ರಲ್ಲಿ ಜೀವಿಸಿದ ಪಂಜಾಬಿನ ಮಿರ್ಜಾ ಗುಲಾಂ ಅಹಮ್ಮದರೆಂದು ತಿಳಿದುಬಂದಿದೆ. ಆಗ ಕ್ರೈಸ್ತ ಮಿಶನರಿಗಳು ಪಂಜಾಬಿನಲ್ಲಿ ಮತಪ್ರಸಾರ ಮಾಡುವುದನ್ನು ಕಂಡು ದಿಗಿಲಾದ ಹಿಂದುಗಳು ದಯಾನಂದ ಸರಸ್ವತಿಯವರ ನೇತೃತ್ವದಲ್ಲಿ ಹಿಂದುತ್ವವನ್ನು ಬಲಪಡಿಸಲುದ್ಯುಕ್ತರಾದರು. ಮುಸ್ಲಿಮರಲ್ಲಿಯೂ ಧಾರ್ಮಿಕ ಉತ್ಸಾಹ ಹೆಚ್ಚಿತು. ಮಿರ್ಜಾ ಗುಲಾಮರು ಹಿಂದೂ, ಮುಸ್ಲಿಂ, ಕ್ರೈಸ್ತ ಮತಗಳನ್ನು ಒಂದುಗೂಡಿಸಬೇಕೆಂಬುದಕ್ಕಾಗಿ ತಮ್ಮನ್ನು ದೇವರು ಕಳಿಸಿದ್ದಾನೆಂದೂ ತಾವೇ ಮುಸ್ಲಿಮರ ಕಡೇ ನಬಿ, ಹಿಂದುಗಳ ಕಡೇ ಅವತಾರ, ಕ್ರಿಸ್ತುನಾಥರ ಎರಡನೇ ಆಗಮನ ಎಂದೂ ಸಾರಿದರು. ಕ್ರಿಸ್ತುನಾಥರು ಶಿಲುಬೆಯಲ್ಲಿ ಸತ್ತಿದ್ದಿಲ್ಲವೆಂದೂ ಅನಂತರ ಕಾಶ್ಮೀರಕ್ಕೆ ಅವರು ಬಂದಿದ್ದರೆಂದೂ ಹೇಳಿ ಅವರು ಯೇಸುಕ್ರಿಸ್ತರದೆಂದು ತೋರಿಸಿದ ಶ್ರೀನಗರದ ಸಮಾಧಿ ನಿಜವಾಗಿ ಕೇವಲ ೨೦೦ ವರ್ಷ ಹಳೆಯದು. ಅದರ ಮೇಲೆ ಇರುವ ಯುಸೂಫ್ ಅಸಾಫ್ ಎಂಬ ಬರೆಹದಲ್ಲಿ "ಯುಸು" ಎಂದರೆ ಜೇಸು ಎಂದು ಮಿರ್ಜಾ ಗುಲಾಮರು ಮಾಡಿದ ವ್ಯಾಖ್ಯಾನ ನಿಜವಾಗಿ ಅದ್ಭುತವಾಗಿದೆ.

೩. ೧೩ನೇ ವಯಸ್ಸಿಗೆ ಕ್ರಿಸ್ತುನಾಥರು ಹಿಮಾಲಯಕ್ಕೆ ಬಂದಿದ್ದರೆಂದು ಸೃಷ್ಟನೆ ಮಾಡಿದ ಇನ್ನೊಬ್ಬ ರಶಿಯದ ನಿಕೊಲಾಸ್ ನೊಟ್ವೊವಿಶ್. ಇವನು ಬೌದ್ಧ ಮತವನ್ನು ಅಭ್ಯಸಿಸಲು ಕಾಶ್ಮೀರಕ್ಕೆ ಬಂದು ಲಡಾಕ್‌ನ ಲೇ ನಗರದ ಬೌದ್ಧ ಸಂನ್ಯಾಸಿಗಳ ಆಶ್ರಮದಲ್ಲಿ ಕೆಲ ಕಾಲ ವಾಸಿಸಿದನು. ಅನಂತರ ಅವನು ೧೮೯೪ ರಲ್ಲಿ ಒಂದು ಗ್ರಂಥ ಬರೆದು ೧೨ ನೇ ವಯಸ್ಸಿನಲ್ಲಿ ಕ್ರಿಸ್ತರು ಭಾರತಕ್ಕೆ ಬಂದು ಹಿಮಾಲಯದಲ್ಲಿ ಬೌದ್ಧ ಸಂನ್ಯಾಸಿಗಳೊಡನೆ ಇದ್ದರೆಂದೂ ಈ ಬಗ್ಗೆ ಲೇ ನಗರದ ಬೌದ್ಧ ಆಶ್ರಮದಲ್ಲಿನ ಶ್ರೇಷ್ಠ ಸಂನ್ಯಾಸಿ ತಮಗೆ ಕೈಬರಹದ ಆಲೇಖಗಳನ್ನು ತೋರಿಸಿದನೆಂದೂ ಹೇಳಿದನು. ಅದು ರಶ್ಯಾ, ಫ್ರೆಂಚ್, ಜರ್ಮನ್, ಇಂಗ್ಲೀಷ್ ಭಾಷೆಗಳಲ್ಲಿ ಪ್ರಕಟವಾಯಿತು. ಆಗ ಪ್ರಸಿದ್ಧ ಭಾರತಶಾಸ್ತ್ರ ಪ್ರವೀಣರಾದ ಮ್ಯಾಕ್ಸ್ ಮುಲ್ಲರ್ ೧೮೯೪ ರಲ್ಲಿ "೧೯ ನೇ ಶತಮಾನ" ಪತ್ರಿಕೆಯಲ್ಲಿ ನಿಕೊಲಾ

ಸನ ಹೇಳಿಕೆ ಸುಳ್ಳೆಂದು ಸಿದ್ಧಪಡಿಸಿದರು. ಅನಂತರ ೧೮೯೫ ರಲ್ಲಿ ಆಗ್ರಾದ ರೆ. ಅರ್ಚಿಬಾಲ್ಡ್ ಡಗ್ಲಾಸರು ಲೇ ನಗರಕ್ಕೆ ಸ್ವತಃ ಹೋಗಿ ಬೌದ್ಧ ಸಂನ್ಯಾಸಿ ಆಶ್ರಮದಲ್ಲಿ ಶ್ರೇಷ್ಠ ಸಂನ್ಯಾಸಿಯನ್ನು ಕಂಡರು. ಆದರೆ ಆತ ತಾನು ನಿಕೊಲಾಸನಿಗೆ ಅವನು ಹೇಳಿರುವ ದಾಖಲೆಗಳನ್ನು ತೋರಿಸಿದ್ದೇ ಸುಳ್ಳೆಂದೂ ಅಂಥ ದಾಖಲೆಗಳೇ ತಮ್ಮಲ್ಲಿಲ್ಲವೆಂದೂ ಹೇಳಿಕೆ ಕೊಟ್ಟನು. ಇದೂ ೧೮೯೬ ರ ಏಪ್ರಿಲ್‌ನ "೧೯ ನೇ ಶತಮಾನ" ಸಂಚಿಕೆಯಲ್ಲಿ ಪ್ರಕಟವಾಯಿತು.

ಈ ಪ್ರಕಾರ ಯೇಸುಕ್ರಿಸ್ತ ಭಾರತಕ್ಕೆ ಬಂದದ್ದು ಸುಳ್ಳೆಂದು ಎಂದೊ ಸಿದ್ಧವಾಗಿದ್ದರೂ ಇನ್ನೂ ಕೆಲವರು ಅದನ್ನು ನಂಬುತ್ತಿರುವುದು ಆಶ್ಚರ್ಯ.

— ರೆ. ಫಾದರ್ ಐ. ಎಚ್. ಲೋಬೊ



ಮಡಕೆಯನ್ನು ಒಡೆಯುವುದು ಕಷ್ಟವೇನಲ್ಲ: ಮಡಕೆ ಎಷ್ಟು ದೊಡ್ಡದೊ ಒಡೆಯುವುದು ಅಷ್ಟು ಸುಲಭ. ಆದರೆ ಒಮ್ಮೆ ಒಡೆದ ಮೇಲೆ ಪುನಃ ಮೊದಲಿದ್ದಂತೆ ಮಾಡುವುದು ಕಠಿನ, ಅಲ್ಲ; ಅಸಾಧ್ಯ. ಆದ್ದರಿಂದ ಒಡೆಯುವ ಮೊದಲು ಆ ಮಡಕೆಯ ರಿಕ್ತಸ್ಥಾನವನ್ನು ತುಂಬುವವರು ಯಾರು ಎಂಬುದನ್ನು ಯೋಚಿಸಬೇಕು.

—ರಾಜಗೋಪಾಲಾಚಾರಿ





ಗ್ಲೂಕೋವಿಟಾ

ಅಧಿಕ ಉತ್ಸಾಹ ಶಕ್ತಿಯನ್ನೀಯುತ್ತದೆ

ಗ್ಲೂಕೋವಿಟಾ ದೈನಂದಿನ ಆಹಾರಕ್ಕೆ ಪುಷ್ಟಿಯನ್ನಿತ್ತು ಪರಿಪೂರ್ಣಗೊಳಿಸಲು ಆದರ್ಶವಾಗಿದೆ. ಇದು ನಿಮ್ಮ ಜೀವಾಂಗಗಳಿಗೆ ಅನಿವಾರ್ಯವಾದ ರಕ್ತ ಸಕ್ಕರೆಯನ್ನೀಯುತ್ತದೆ.

ಇದು ದುಡಿಯುವ ಅಥವಾ ಆಟವಾಡುವ ಜನರಿಗೂ, ಬೆಳೆಯುತ್ತಿರುವ ಮಕ್ಕಳಿಗೂ ಮತ್ತು ಗರ್ಭಿಣಿಯರಿಗೂ ಮತ್ತು ಬಾಣಂತಿಯರಿಗೂ ಅಧಿಕ ಉತ್ಸಾಹ ಶಕ್ತಿಯನ್ನೀಯಲು ಆದರ್ಶವಾಗಿದೆ.

ಗ್ಲೂಕೋವಿಟಾವನ್ನು ಚಹ, ಕಾಫಿ, ಹಾಲು ಅಥವಾ ಇತರ ತಣ್ಣಗಿನ ಪಾನೀಯಗಳೊಡನೆ ಬೆರಿಸಿ ಸೇವಿಸಿರಿ. ಒಂದರಿಂದ ಮೂರು ಚಹ ಚಮಚದಷ್ಟು ಗ್ಲೂಕೋವಿಟಾವನ್ನು ಪ್ರತಿಯೊಂದು ಕಪ್ ಯಾ ಗ್ಲಾಸ್ ಪಾನೀಯದೊಡನೆ ಸೇರಿಸಿರಿ. ಇದು ನೀರಿನೊಡನೆ ಕೂಡಲೇ ಕರಗಿಹೋಗುತ್ತದೆ.

ಗ್ಲೂಕೋವಿಟಾ

ಅಧಿಕ ಉತ್ಸಾಹ ಶಕ್ತಿಗೆ

ಕಾರ್ನ್ ಪ್ರಾಡಕ್ಟ್ಸ್ ಕಂ. (ಇಂಡಿಯಾ) ಪ್ರೈವೇಟ್ ಲಿ.



ಭಾರತ ದೇಶದ ಏಜೆಂಟ್ಸ್: ಪೆರೀ ಅಂಡ್ ಕಂಪೆನಿ ಲಿಮಿಟೆಡ್

# ವಿಚಿತ್ರ—ನಿಜ

ಪೇರೂ ದೇಶದಲ್ಲಿ 'ಕ್ಲಾವುಡೊ' ಎಂಬ ಒಬ್ಬ ಮನುಷ್ಯನಿದ್ದಾನೆ. ಆತ ನಮ್ಮಂತೆ ಯಾವ ಕೆಲಸವನ್ನೂ ಮಾಡುವದಿಲ್ಲ. ಆದರೂ ನಮಗಿಂತ ಹೆಚ್ಚಿನ ಸಂಪಾದನೆ ಮಾಡುತ್ತಾನೆ. ಆತ ಮಾಡುವ ಕೆಲಸವನ್ನು ಬೇರೆ ಯಾರಾದರೂ ಮಾಡಬೇಕೆಂದರೆ ಅವರಿಂದಾಗಲು ಸಾಧ್ಯವೇ ಇಲ್ಲ. ಒಂದೂವರೆ ಗಂಟೆಯ ವರೆಗೆ ಶರೀರದ ಯಾವ ಭಾಗವನ್ನೂ ಅಲ್ಲಾಡಿಸದೆ, ಕಣ್ಣುರೆಪ್ಪೆಗಳನ್ನು ಕೂಡ ಬಡಿಯದೇ ಮರದ ಗೊಂಬೆಯಂತೆ ಆತ ನಿಂತು ಬಿಡುತ್ತಾನೆ. ಈ ಕೆಲಸ ಅಷ್ಟೇನು ಕಠಿಣವಲ್ಲ ಎನ್ನುತ್ತೀರಾ? ಹಾಗಾದರೆ ಪ್ರಯೋಗಮಾಡಿ ನೋಡಿರಲ್ಲ!

ಕ್ಲಾವುಡೊ ಒಮ್ಮೊಮ್ಮೆ ಕಟ್ಟಿಗೆಯಲ್ಲಿ ಕೊರೆದ ಸೈನಿಕನ ಗೊಂಬೆಯ ಅಭಿನಯ ಮಾಡುತ್ತಾನೆ. ಕೀಲಿಕೊಟ್ಟ ಗೊಂಬೆಯಂತೇ ದಡದಡ ಓಡುತ್ತಾನೆ. ಇವನ ವೇಷಭೂಷೆ ಹಾಗೂ ನಟನೆ ನೋಡಿದರೆ ನೂರಕ್ಕೆ ತೊಂಬತ್ತರಷ್ಟು ಜನರು ಭ್ರಾಂತರಾಗುತ್ತಾರೆ.

* * *

ಸ್ಪೇನದ ಸ್ತ್ರೀಯರು ಕುಂಬಾರನ ತಿಗರಿಯ ಮೇಲಿನ ಮಣ್ಣನ್ನು ತಿನ್ನುತ್ತಾರೆ. ಈ ಮಣ್ಣನ್ನು ಅವರು "ಬುಕಾರೊ" ಎನ್ನುತ್ತಾರೆ. ಬುಕಾರೊ ತಿಂದರೆ ಸೌಂದರ್ಯ ಹೆಚ್ಚುವುದೆಂದು ಇವರ ನಂಬಿಕೆಯಾಗಿದೆ. ಸ್ಪೇನದ ದಕ್ಷಿಣ ಭಾಗದ ಸ್ತ್ರೀಯರಂತೆ ಪುರುಷರೂ ಈ ಮಣ್ಣನ್ನು ಕೆಂಪು ಅಥವಾ ಕರಿ ಮೆಣಸಿನಕಾಯಿಯೊಂದಿಗೆ ಕೊಂಡು ತಿನ್ನುತ್ತಾರೆ.

ಈ ಪ್ರಘಾತವು ಹದಿನೇಳನೇ ಶತಮಾನದಲ್ಲಿ ಅಲ್ಲಿಯ ಶಿಷ್ಟಸಮಾಜದ ಜನರಲ್ಲೂ ಬಹಳಷ್ಟು ಪ್ರಚಾರದಲ್ಲಿತ್ತು. ಕೊನೆಗೆ ಸರಕಾರವೇ ಕಾನೂನಿನಿಂದ ಅದನ್ನು ತಡೆಗಟ್ಟಿತು.

ಈಗ ಈ ಪದ್ಧತಿ ಸಾಕಷ್ಟು ಕಡಿಮೆಯಾಗಿರುವುದಾದರೂ ಇಂದಿಗೂ ಬುಕಾರೊ ತಿಂದೇ ಸೌಂದರ್ಯವೃದ್ಧಿ ಮಾಡಿಕೊಳ್ಳುವವರ ಸಂಖ್ಯೆ ಸಾಕಷ್ಟಿದೆ.

* * *

ಆಸ್ಟ್ರೇಲಿಯಾದಲ್ಲಿ ಪ್ಲೇಟಿಪಸ್ ಎಂಬೊಂದು ಪ್ರಾಣಿ ಇದೆ. ಜಗತ್ತಿನ ಒಂದು ಅತಿ ವಿಚಿತ್ರ ಪ್ರಾಣಿಯದು! ಈ ಒಂದೇ ಪ್ರಾಣಿಯನ್ನು ಪಶು, ಪಕ್ಷಿ, ಮತ್ತು ಹಾವು— ಹೇಗೆ ಬೇಕಾದರೂ ಸಂಬೋಧಿಸಬಹುದು. ಏಕೆಂದರೆ- ಇದರ ಚುಂಚು ಬಾತಕೋಳಿಯಂತಿರುತ್ತದೆ. ಪಕ್ಷಿಗಳಂತೆ ಇದಾದರೂ ತತ್ತಿ ಹಾಕುತ್ತದೆ. ಇದು ಪಶುವಿನಂತೆ ಸಸ್ತನ ಪ್ರಾಣಿಯಾಗಿದೆ. ನಾಲ್ಕು ಕಾಲುಗಳು ಇದಕ್ಕಿವೆ. ಆದರೂ ಹಾವಿನಂತೆ ಇದು ಹೊಟ್ಟೆಯಿಂದಲೇ ಸರಿಯುತ್ತದೆ. ಮೈ ಮೇಲೆ ದಟ್ಟ ಕೂದಲಿರುವದರಿಂದ ರಗ್ಗು ಹೊದ್ದುಕೊಂಡಂತೆ ತೋರುತ್ತದೆ. ಇದರ ಕೂಗಿನ ಸಪ್ಪಳ ನಾಯಿಯ ಬೊಗಳುವಿಕೆಯಂತೆ ಕೇಳಿಸುತ್ತದೆ.

ನೆಲದ ಮೇಲೆ ಚತುಷ್ಪಾದ ಪ್ರಾಣಿಯಂತೆ ನಾಲ್ಕು ಕಾಲುಗಳಿಂದ ನಡೆಯುವ ಈ ಪ್ರಾಣಿ ನೀರಲ್ಲಿ ಈಸುವಾಗ ಕೈಕಾಲು ಚಾಚಿಕೊಂಡಿರುತ್ತದೆ. ಹಾವಿನಂತೆ ಇದಾದರೂ ವಿಷವುಳ್ಳ ಪ್ರಾಣಿ. ಇದರ ವಿಷ ಹಾವಿನಂತೆ ಹಲ್ಲಿನಲ್ಲಿರದೆ, ಹಿಂದಿನ ಕಾಲುಗಳಲ್ಲಿ ಇರುತ್ತದೆ.

ಹಿಂಗಾಲುಗಳಿಂದ ಈ ಪ್ರಾಣಿ ಯಾರನ್ನು ಹೊಡೆಯುವದೋ ಅವನು ನಿಶ್ಚಿತವಾಗಿ ಸಾಯುತ್ತಾನೆ.



ಕನ್ನಡದಲ್ಲಿ ತೀರ ಹೊಸಬಗೆಯ ಗ್ರಂಥ !
ಸಂಗೀತ ವಿದುಷಿ ಕುಮಾರಿ ಗಾಯತ್ರಿ ರಾಜಾಪೂರ ಇವರು
ಗಾಯನ ಕಲೆಯಲ್ಲಿ ಪ್ರವೀಣತೆಯನ್ನು ಗಳಿಸಿ ಸ್ವಾನುಭವದಿಂದ ಬರೆದ ಗ್ರಂಥ !!

ಭಾರತೀಯ ಸಂಗೀತ ದರ್ಶನ

ಡೆಮ್ಮಿ ಅಷ್ಟಪತ್ರ ೩೦೦ ಕ್ಕೂ ಮಿಕ್ಕಿ ಪುಟಗಳು
ಬೆಲೆ : ೫ ರೂಪಾಯಿ ಮಾತ್ರ

ಅಂಚೆ ವೆಚ್ಚ ಬೇರೆ. ವಿ. ಪಿ. ಯಿಂದ ಕಳಿಸಲಾಗುವದಿಲ್ಲ.

ಲೋಕ ಶಿಕ್ಷಣ ಟ್ರಸ್ಟಿನ ಪ್ರಕಾಶನ

ದೊರೆಯುವ ಸ್ಥಳ : ಸಂಯುಕ್ತ ಕರ್ನಾಟಕ, ಕೊಪ್ಪೀಕರರೋಡ, ಹುಬ್ಬಳ್ಳಿ
ಸಂಯುಕ್ತ ಕರ್ನಾಟಕ, ೨ ರೆಸಿಡೆನ್ಸಿ ರೋಡ, ಬೆಂಗಳೂರು-೧.

ಹೊಸದರಲ್ಲಿ ಹೊಸತರ . . . . .

ಜೀವನದ ವಿವಿಧರಂಗಗಳಲ್ಲಿ
ನಿತ್ಯೋಪಯೋಗಿ



ಓದುವದು ಬರಿ ರಂಜನೆಗಾಗಿರದೆ
ಜ್ಞಾನಾರ್ಜನೆಗಾಗಿ ಎನ್ನುವುದನ್ನು
ಸಾರಿಹೇಳುವ ಏಕೈಕ ಮಾಸಪತ್ರಿಕೆ

ಕಾಮಧೇನು

ವಾ. ಚಂದಾ ೫ ರೂ. ಬಿ. ಸಂ. ೫೦ ನ. ಪೈ.

ಹುಬ್ಬಳ್ಳಿ — ಬೆಂಗಳೂರು ೧

This Magazine owned by the Loka Shikshana Trust, Hubli is printed and published by Shri H. R. Purohit at the Samyukta Karnatak Press, Koppikar Road, Hubli.

ಶ್ರೀ ದಿವಾಕರ ರಂಗರಾಯರ **ಕರ್ಮಯೋಗ** ೨ ನೇ ಆವೃತ್ತಿ

ಪುಟ : ೧೨೦ ಬೆಲೆ : ರೂ. ೧-೫೦ (ಅ. ವೆ. ಪ್ರತ್ಯೇಕ)

ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ ಹಾಗೂ ೩, ರೆಸಿಡೆನ್ಸಿ ರೋಡ್, ಬೆಂಗಳೂರು-೧

ವನಿತಾ
ಲೋಕದ
ಸುಂದರ
ಸ್ವಪ್ನ

ANITA
TOILET SOAP

# ಅನಿತಾ ಟಾಯ್ಲೆಟ್ ಸೋಪ್




ತಯಾರಕರು:

ಶ್ರೀ ರಾಮಕೃಷ್ಣ ಆಯಿಲ್ ಮಿಲ್, ಮಂಗಳೂರು


Rego

KA

A K
MONT

Circula
the M
and ou
Kanna

C
the hi
o

Caters

7

A Loka
Trust